# ಶ್ರೀಪಾದರಾಜರ ಕೃತಿಗಳು

ಸಂಪಾದಕ

**ಡಾ. ಜಿ. ವರದರಾಜರಾವ್**




ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

# ಶ್ರೀಪಾದರಾಜರ ಕೃತಿಗಳು

## (ಜನಪ್ರಿಯ ಆವೃತ್ತಿ)

ಸಂಪಾದಕ

**ಡಾ. ಜಿ. ವರದರಾಜರಾವ್**




ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೮೭

*Śrīpādarājara Kṛtigaḷu* (Janapriya Āvṛtti)—Kirthanas of Sripadaraja (Popular Edition), edited by Dr. G. Varadaraja Rao, published by the Institute of Kannada Studies, University of Mysore, Manasagangotri, Mysore-6, First Edition 1973, Second Edition 1987, Pp 12+1+೨೦೩



**ಬೆಲೆ: ರೂ. 15-00**

ಮಾರಾಟಗಾರರು ನಿರ್ದೇಶಕರು ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು 570 012

ಮುದ್ರಕರು ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು

# ಮುನ್ನುಡಿ

ಕನ್ನಡ ಸಾಹಿತ್ಯದ ಸಾವಿರದೈನೂರು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಹರಿದಾಸ ಸಾಹಿತ್ಯ ಒಂದು ಪ್ರಮುಖ ಘಟ್ಟ. ಹೆಚ್ಚು ಕಡಿಮೆ ಐದು ಶತಮಾನಗಳ ವ್ಯಾಪ್ತಿಯ ಈ ಭಕ್ತಿಸಾಹಿತ್ಯಪ್ರಕಾರವನ್ನು ಸುಮಾರು ಇನ್ನೂರು ಜನ ಹರಿದಾಸರು ತಮ್ಮ ಬಗೆಬಗೆಯ ರಚನೆಗಳಿಂದ, ಮುಖ್ಯವಾಗಿ ಕೀರ್ತನೆಗಳಿಂದ ಸಮೃದ್ಧವಾಗಿಸಿದ್ದಾರೆ. ಈ ಕೀರ್ತನೆಗಳು ಇಂದೂ ಜನಪ್ರಿಯವಾಗಿ ಪ್ರಚಾರದಲ್ಲಿವೆ ಕೆಲವು ಮುಖ್ಯ ದಾಸರ ಹೆಸರುಗಳು ಮನೆಮಾತಾಗಿವೆ ಸಾಹಿತ್ಯಿಕ ಪ್ರಾಮುಖ್ಯತೆಯಿಂದ ಮಾತ್ರವಲ್ಲದೆ ದ್ವೈತ ಸಿದ್ಧಾಂತವನ್ನು ಅಧ್ಯಯನ ಮಾಡುವ ದೃಷ್ಟಿಯಿಂದಲೂ ಹರಿದಾಸ ಸಾಹಿತ್ಯ ಮಹತ್ವದ್ದಾಗಿದೆ ಕರ್ನಾಟಕ ಸಂಗೀತಕ್ಕೆ ಹರಿದಾಸರ ಕೀರ್ತನೆಗಳ ಕೊಡುಗೆಯಂತೂ ಅಸಾಧಾರಣವಾದದ್ದು.

ನಮ್ಮ ಪ್ರಾಚೀನ ಸಾಹಿತ್ಯದ ಇತರ ಕೃತಿಗಳೊಂದಿಗೆ ದಾಸಸಾಹಿತ್ಯವನ್ನು ಹೋಲಿಸಿದಾಗ ಎದ್ದುಕಾಣುವ ಒಂದು ಮುಖ್ಯ ಅಂಶವೆಂದರೆ ಈ ಸಾಹಿತ್ಯದ ವಾಕ್ ಪರಂಪರೆ. ಗ್ರಂಥಸ್ಥವಾಗಿ ಉಳಿದು ಬಂದಿರುವುದಕ್ಕಿಂತಲೂ, ಜನರ ಬಾಯಲ್ಲಿ ನಿಂತಿರುವುದೇ ಹೆಚ್ಚು ಭಕ್ತರ ಹೃದಯದ ಮೊರೆಗಳಾದ ಈ ಕೀರ್ತನೆಗಳು ತಲೆಮಾರಿನಿಂದ ತಲೆಮಾರಿಗೆ ಹಬ್ಬಿ ಬಂದಿವೆ ನೆನಪಿನಲ್ಲಿ ನಿಂತ ಈ ರಚನೆಗಳ ಗ್ರಂಥರೂಪದ ಕಡೆ ಯಾರೂ ಅಷ್ಟಾಗಿ ಗಮನ ವಹಿಸಲಿಲ್ಲ ಈ ಕಾರಣದಿಂದ ಕೀರ್ತನೆಗಳ ಅಧಿಕೃತ ಪಠ್ಯಆವೃತ್ತಿಗಳು ನಮಗೆ ದೊರೆಯುವುದಿಲ್ಲ ನಮ್ಮ ಸಾಹಿತ್ಯಚರಿತ್ರೆಯ ಒಂದು ದೊಡ್ಡ ಕೊರತ ಇದು ಕೆಲವು ಲೇಖಕರು, ಪ್ರಕಾಶಕರು ಹರಿದಾಸ ಸಾಹಿತ್ಯ ಪ್ರಕಟಣೆಯನ್ನು ಕೈಗೊಂಡಿರುವುದೇನೋ ನಿಜ. ಆದರೆ ಶಾಸ್ತ್ರೀಯ ದೃಷ್ಟಿಯಿಂದ ಸಮಗ್ರ ದಾಸಸಾಹಿತ್ಯವನ್ನು ಸಂಪಾದಿಸುವ ಕೆಲಸಕ್ಕೆ ಯಾರೂ ಈವರೆಗೆ ಕೈಹಾಕಿಲ್ಲ ಇದನ್ನು ಗಮನಿಸಿ ಹರಿದಾಸ ಸಾಹಿತ್ಯದ ಸಂಗ್ರಹ, ಸಂಪಾದನೆ, ಪ್ರಕಟಣೆಗಳನ್ನು ವಿಮರ್ಶಾತ್ಮಕವಾಗಿ ಕೈಗೊಳ್ಳುವ ಯೋಜನೆಯೊಂದನ್ನು ೧೯೭೦ರಷ್ಟು ಹಿಂದೆಯೇ ಕನ್ನಡ ಅಧ್ಯಯನ ಸಂಸ್ಥೆ ಸಿದ್ಧಪಡಿಸಿ, ನೆರವು ಕೇಳಿ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗಕ್ಕೆ ಒಪ್ಪಿಸಿತು ಆ ಯೋಜನೆಯ ಮುಖ್ಯ ಅಂಶಗಳು ಇವು

(೧) ಹಸ್ತಪ್ರತಿಗಳ ಸಂಗ್ರಹ–ಕ್ಷೇತ್ರಕಾರ್ಯ ಕರ್ಣಾಟಕದ ವಿವಿಧ ಭಾಗಗಳಲ್ಲಿ, ಅಗತ್ಯ ಬಿದ್ದರೆ ಹೊರಗೂ, ಸಂಚರಿಸಿ ಹಸ್ತಪ್ರತಿಗಳನ್ನು ಸಂಗ್ರಹಿಸುವುದು; ಕೀರ್ತನೆಗಳನ್ನು ಧ್ವನಿಗ್ರಹಣ ಮಾಡಿ ಸಂಗ್ರಹಿಸುವುದು, ಹಾಡುಗಾರಿಕೆಯ ವಿವಿಧ ಸಂಪ್ರದಾಯಗಳನ್ನು ಗುರುತಿಸಿ ಅದನ್ನು ಉಳಿಸಿಕೊಳ್ಳಲು ಕ್ರಮಗಳನ್ನು ಕೈಗೊಳ್ಳುವುದು

(೨) ಸಂಪಾದನೆ ಹಸ್ತಪ್ರತಿಗಳಲ್ಲಿ, ವಾಕ್‌ಸಂಪ್ರದಾಯದಲ್ಲಿ ದೊರೆಯುವ ಸಾಹಿತ್ಯವನ್ನು ಆಧರಿಸಿ ಶಾಸ್ತ್ರೀಯ ಗ್ರಂಥಸಂಪಾದನಕ್ರಮಗಳಿಗನುಸಾರವಾಗಿ ಅಧಿಕೃತ ಪಾಠ್ಯಗಳನ್ನು ಸಿದ್ಧಪಡಿಸುವುದು.

(೩) ಪ್ರಕಟಣೆ. ಹೀಗೆ ಸಿದ್ಧಗೊಳಿಸಿದ ಸಾಹಿತ್ಯವನ್ನು, ವಿಷಯ ಗಾತ್ರಗಳಿಗೆ ಅನುಗುಣವಾಗಿ ಬೇರೆ ಬೇರೆ ಸಂಪುಟಗಳಲ್ಲಿ ಪ್ರಕಟಿಸುವುದು. ಪ್ರತಿಯೊಂದು ಸಂಪುಟಕ್ಕೂ ಅಗತ್ಯವಾದ ಕವಿಕಾವ್ಯ ಸಂಬಂಧವಾದ ಪೀಠಿಕೆಯನ್ನೂ, ಅಭ್ಯಾಸಿಗಳಿಗೆ ನೆರವಾಗುವ ಸೂಚಿಗಳನ್ನೂ ಕೊಟ್ಟು ಪ್ರಕಟಣೆಗಳು ಸಾಮಾನ್ಯರಿಗೂ ವಿದ್ವಾಂಸರಿಗೂ ಉಪಯೋಗವಾಗುವಂತೆ ನೋಡಿಕೊಳ್ಳುವುದು.

(೪) ಹರಿದಾಸ ಸಾಹಿತ್ಯದ ಬೇರೆ ಬೇರೆ ಮುಖಗಳನ್ನೂ, ಇತರ ಭಕ್ತಿಪಂಥಗಳೊಡನೆ ಅದರ ಸಂಬಂಧವನ್ನೂ, ಕನ್ನಡ ಸಾಹಿತ್ಯಕ್ಕೆ ಹರಿದಾಸರ ಕೊಡುಗೆಗಳನ್ನೂ ಚರ್ಚಿಸುವ ಪ್ರಕಟಣೆಗಳನ್ನು ಹೊರತರುವುದು.

ಸುಮಾರು ಹದಿನೈದು ವರ್ಷಗಳ ಅವಧಿಯಲ್ಲಿ ಮೂರು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಪೂರ್ಣಗೊಳ್ಳುವ ಈ ಯೋಜನೆಯನ್ನು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ ಭಾಗಶಃ ಒಪ್ಪಿ, ನಾಲ್ಕನೆ ಯೋಜನೆಯ ಅವಧಿಯಲ್ಲಿ ಸ್ವಲ್ಪ ಹಣವನ್ನು ಮಾತ್ರ ನೀಡಿ, ಮೂವರು ಸಂಶೋಧನ ಸಹಾಯಕರನ್ನೂ ಇಬ್ಬರು ಪ್ರತಿಕಾರರನ್ನೂ ನೇಮಿಸಿಕೊಳ್ಳಲು ಅವಕಾಶಮಾಡಿಕೊಟ್ಟಿತು. ಯೋಜನೆ ೧೯೬೮ ಜುಲೈ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂತು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ರೀಡರ್ ಆಗಿರುವ ಡಾ. ಜಿ. ವರದರಾಜರಾವ್ ಅವರು ಯೋಜನೆಯ ಮೇಲ್ವಿಚಾರಕರಾಗಿ ನಿಯೋಜಿತರಾದರು. ಈ ಯೋಜನೆಯ ಯಶಸ್ಸಿಗೆ ಅಗತ್ಯವಾದ ಸಲಹೆ ಕೊಡಲು, ಮಾರ್ಗದರ್ಶನ ನೀಡಲು, ನಡೆದ ಕೆಲಸವನ್ನು ವಿಮರ್ಶಿಸಲು ವಿಶ್ವವಿದ್ಯಾನಿಲಯ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರ ಅಧ್ಯಕ್ಷತೆಯಲ್ಲಿ ತಜ್ಞರ ಒಂದು ಸಲಹಾಸಮಿತಿಯನ್ನು ನೇಮಿಸಿತು. ಈ ಸಮಿತಿ ಕಾಲಕಾಲಕ್ಕೆ ಸಭೆ ಸೇರಿ ಉಪಯುಕ್ತವಾದ ಸೂಕ್ತ ಸಲಹೆ ನೀಡಿ ನಮ್ಮ ಕೆಲಸ ಸುಗಮವಾಗಿ ನಡೆಯಲು ಸಹಕರಿಸಿದೆ.

ಯೋಜನೆಯ ಆರಂಭದಿಂದಲೂ ಇಬ್ಬರು ಸಂಶೋಧನ ಸಹಾಯಕರು, ಒಬ್ಬರು ಪ್ರತಿಕಾರರು ಕೆಲಸ ಮಾಡುತ್ತಾ ಬಂದಿದ್ದಾರೆ ಇಷ್ಟರವರೆಗೆ ಕೀರ್ತನೆಗಳ ಸುಮಾರು ೨೦ ಸಾವಿರ ಸೂಚಕ ಪಟ್ಟಿಗಳನ್ನು ಸಿದ್ಧಪಡಿಸಿ ಅವುಗಳನ್ನು ಅಕಾರಾದಿಯಾಗಿ ಜೋಡಿಸಿಡಲಾಗಿದೆ. ಕನ್ನಡ ನಾಡಿನ ಬೇರೆಬೇರೆ ಭಾಗಗಳಲ್ಲಿ ಸಂಶೋಧನ ಸಹಾಯಕರೂ, ಕನ್ನಡ ವಿಭಾಗದ ಅಧ್ಯಾಪಕರೂ ಸಂಚರಿಸಿ ಸುಮಾರು ೨೩೫ ಅಮೂಲ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ; ಬೇರೆ ಬೇರೆ ಸ್ಥಳಗಳಲ್ಲಿ ಜನರು ಕೀರ್ತನೆಗಳನ್ನು ಹಾಡುವ ಸಂಪ್ರದಾಯವನ್ನು ಈಗಲೂ ಹೇಗೆ ಉಳಿಸಿಕೊಂಡು ಬಂದಿದ್ದಾರೆಂಬುದನ್ನು ಅಧ್ಯಯನ ಮಾಡಲು ನೂರಾರು ಕೀರ್ತನೆಗಳನ್ನು ಧ್ವನಿ ಮುದ್ರಿಸಿ ತಂದಿದ್ದಾರೆ. ಇದರ

ಫಲವಾಗಿ ಈಗ ಕನ್ನಡ ಅಧ್ಯಯನ ಸಂಸ್ಥೆ ಹರಿದಾಸ ಸಾಹಿತ್ಯದ ಅಖಿಲಭಾರತೀಯ ಭಂಡಾರವಾಗಿದೆ

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಗೆ ಅನುಸಾರವಾಗಿ ಹರಿದಾಸರಲ್ಲಿ ಮೊದಲಿಗರಾದ ಶ್ರೀಪಾದರಾಜರ ಕೀರ್ತನೆಗಳ ಸಂಪುಟ ಈಗ ಪ್ರಕಟವಾಗುತ್ತಿದೆ. ಈ ಸಂಪುಟ ಬಹಳ ಹಿಂದೆಯೇ ಅಚ್ಚಿನ ಮನೆಗೆ ಹೋಗಿದ್ದರೂ ಅನೇಕ ತಾಂತ್ರಿಕ ತೊಂದರೆಗಳಿಂದ ಅದರ ಪ್ರಕಟಣೆ ತುಂಬ ವಿಳಂಬವಾಗಿದೆ. ಈ ಬಗೆಯ ಕೆಲಸದಲ್ಲಿ ಇದು ಅನಿವಾರ್ಯವೆಂದು ತೋರುತ್ತದೆ ಅದರಲ್ಲಿಯೂ ಇದು ಮೊದಲ ಸಂಪುಟವಾದ್ದರಿಂದ ಇದರ ಯೋಜನೆ ವಿನ್ಯಾಸಗಳು ಹೆಚ್ಚು ಸಮಯವನ್ನು ತೆಗೆದುಕೊಂಡಿವೆ. ಶ್ರೀಪಾದರಾಜರ ಕೀರ್ತನೆಗಳ ಈ ಆವೃತ್ತಿಯನ್ನು ತಾಳೆಗರಿ, ಕಾಗದದ ಪ್ರತಿ ಮತ್ತು ಮುದ್ರಿತ ಪ್ರತಿಗಳಿಂದ ಕೂಡಿದ ೧೧೨ ಆಕರಗಳ ಆಧಾರದಿಂದ ಸಿದ್ಧಪಡಿಸಲಾಗಿದೆ. ಯೋಜನೆಗೆ ಅನುಗುಣವಾಗಿ, ಶ್ರೀಪಾದರಾಜರ ಜೀವನ ಕೃತಿಗಳನ್ನು ಕುರಿತ ವಿಸ್ತಾರವಾದ ಪ್ರಸ್ತಾವನೆಯನ್ನೂ ಬಗೆಬಗೆಯ ಸಹಾಯಕ ಸೂಚಿಗಳನ್ನೂ ಜೋಡಿಸಲಾಗಿದೆ. ಇದುವರೆಗೆ ಪ್ರಕಟವಾಗದ ಕೆಲವು ಕೀರ್ತನೆಗಳನ್ನು ಒಳಗೊಂಡಿರುವುದು ಈ ಸಂಪುಟದ ಒಂದು ವೈಶಿಷ್ಟ್ಯ. ಗ್ರಂಥಸಂಪಾದನೆಯ ಅಭ್ಯಾಸಿಗಳಿಗೆ ಇದು ಅಪೂರ್ವ ಆಕರವಾಗಿದೆ

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಯ ಮೇಲ್ವಿಚಾರಣೆಯ ಭಾರ ಹೊತ್ತು, ಈ ಸಂಪುಟವನ್ನು ಸಂಪಾದಿಸಿದ ಡಾ ಜಿ ವರದರಾಜರಾವ್ ಅವರನ್ನು ನಾನು ಅವರ ಈ ಮಹತ್ವಪೂರ್ಣ ಕಾರ್ಯಕ್ಕಾಗಿ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿಯೇ ಒಂದು ಸವಾಲು ಎನ್ನಿಸಬಹುದಾದ ರೀತಿಯಲ್ಲಿ ಅವರು ಶ್ರೀಪಾದರಾಜರ ಕೀರ್ತನೆಗಳನ್ನು ಸಂಪಾದಿಸಿದ್ದಾರೆ. ಅವರು ಇದಕ್ಕಾಗಿ ಪಟ್ಟಿರುವ ಶ್ರಮವನ್ನು ನಾನು ಬಲ್ಲೆ ಇದು ಅವರ ಪ್ರೀತಿಯ ವಿಷಯವಾಗಿರುವುದರಿಂದ ಶ್ರಮವನ್ನು ಲೆಕ್ಕಿಸದೆ ದುಡಿದಿದ್ದಾರೆ. ಹರಿದಾಸ ಸಾಹಿತ್ಯದ ಶಾಸ್ತ್ರೀಯ ಸಂಪಾದನೆಯಲ್ಲಿ ಅವರು ನೆಟ್ಟ ಈ ಮೊದಲ ಕಲ್ಲು ನಮ್ಮ ಸಾಹಿತ್ಯಚರಿತ್ರೆಯಲ್ಲಿ, ಗ್ರಂಥ ಸಂಪಾದನೆಯ ಚರಿತ್ರೆಯಲ್ಲಿ, ಹೊಸ ನಿರ್ಮಿತಿಯೊಂದಕ್ಕೆ ಭದ್ರವಾದ ಅಡಿಪಾಯವಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ಹರಿದಾಸ ಸಾಹಿತ್ಯದ ಕೆಲವೇ ಕೆಲವು ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾದ ಡಾ. ರಾಯರ ಹಿರಿತನ ಈ ಯೋಜನೆಗೆ ಲಭಿಸಿರುವುದು ನನಗೆ ತುಂಬ ಸಂತೋಷವನ್ನುಂಟುಮಾಡಿದೆ. ಅವರ ಸಮರ್ಥ ಸಂಪಾದಕತ್ವದಲ್ಲಿ ಈ ಯೋಜನೆಯ ಮಿಕ್ಕ ಸಂಪುಟಗಳೂ ಬೇಗ ಪ್ರಕಟವಾಗುತ್ತವೆಂಬುದರಲ್ಲಿ ನನಗೆ ನಂಬುಗೆಯಿದೆ.

ಈ ಯೋಜನೆಯ ಮೊದಲ ಸಂಪುಟ ಪ್ರಕಟವಾಗುತ್ತಿರುವ ಈ ಹೊತ್ತು ನಾನು ನಮ್ಮ ಕುಲಪತಿ ಪ್ರೊ. ದೇ. ಜವರೇಗೌಡರನ್ನು ಕೃತಜ್ಞತೆಯಿಂದ ಸ್ಮರಿಸಬೇಕು. ಈ ಯೋಜನೆಯನ್ನು ಅವರೇ, ಅವರು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದಾಗ, ಸಿದ್ಧಪಡಿಸಿ, ಕಾರ್ಯರೂಪಕ್ಕೆ ತಂದಿದ್ದು , ಅವರೇ ಸಲಹಾ ಮಂಡಳಿಯ ಮೊದಲ

ಅಧ್ಯಕ್ಷರಾಗಿದ್ದು ಯೋಜನೆಗೆ ಸರಿಯಾದ ರೂಪುರೇಷೆಗಳನ್ನು ನೀಡಿದ್ದು; ಅವರೇ ಈ ಯೋಜನೆಯ ಕಾರ್ಯ ಸಮರ್ಪಕವಾಗಿ ಮುಂದುವರಿಯಲು ಬೇಕಾದ ಪ್ರೋತ್ಸಾಹ ಉತ್ಸಾಹಗಳನ್ನು ತುಂಬಿದ್ದು. ಯೋಜನೆಯ ಕಾರ್ಯ ನಿರ್ವಹಣೆಯಲ್ಲಿನ ಒಳ್ಳಿತೆಲ್ಲ ಖಂಡಿತ ವಾಗಿ ಅವರಿಗೇ ಸೇರಿದ್ದು.

ಯೋಜನೆ ಅಸ್ತಿತ್ವಕ್ಕೆ ಬಂದುದಿನಿಂದ ಕನ್ನಡನಾಡಿನ ಉದ್ದಗಲಗಳಲ್ಲಿ ಅನೇಕ ಜನ ನಮಗೆ ಪರಿಚಯವಿರುವವರು ಇಲ್ಲದವರು ನಾನಾ ಬಗೆಯಾದ ನೆರವು ನೀಡಿದ್ದಾರೆ. ಅವರೆಲ್ಲರನ್ನೂ ಪ್ರತ್ಯೇಕವಾಗಿ ಹೆಸರಿಸುವುದು ಅಸಾಧ್ಯ. ಎಲ್ಲರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದವರು ಯೋಜನೆಯನ್ನು ಒಪ್ಪಿ ಹಣಸಹಾಯ ಮಾಡಿದ್ದಾರೆ. ಸಲಹಾ ಮಂಡಳಿಯ ಸದಸ್ಯರು ನಮಗೆ ಅಗತ್ಯ ವಾದ ಬೆಂಬಲವನ್ನೂ ಮಾರ್ಗದರ್ಶನವನ್ನೂ ನೀಡಿದ್ದಾರೆ. ಯೋಜನೆಯ ಆರಂಭದ ವರ್ಷಗಳಲ್ಲಿ ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳ ಮತ್ತು ಶ್ರೀಮತಿ ಪಿ. ಎಸ್. ಲೀಲಾವತಿ ಅವರು ಸಂಶೋಧನ ಸಹಾಯಕರಾಗಿದ್ದರು. ಈಗ ಶ್ರೀಮತಿ ಟಿ. ಎನ್. ನಾಗರತ್ನ ಮತ್ತು ಶ್ರೀ ಎಚ್. ಆರ್. ದೊರೆಸ್ವಾಮಿ ಸಂಶೋಧನ ಸಹಾಯಕರಾಗಿದ್ದಾರೆ. ಶ್ರೀ ಎಂ. ಎಸ್ ವೆಂಕಟರಮಣಯ್ಯ ಲಿಪಿಕಾರರಾಗಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ಸಹೋದ್ಯೋಗಿಗಳು ಒಂದಲ್ಲ ಒಂದು ರೀತಿಯಿಂದ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ ಮುಳುಬಾಗಿಲಿನ ಶ್ರೀಪಾದರಾಜ ಮಠದ ಅಧಿಕಾರವರ್ಗದವರು ವಿಶ್ವಾಸ ವಹಿಸಿ ನಮಗೆ ಬೇಕಾದ ಅನೇಕ ಮಾಹಿತಿಗಳನ್ನೊದಗಿಸಿದ್ದಾರೆ. ಶ್ರೀ ಜಿ. ಎಚ್. ಕೃಷ್ಣಮೂರ್ತಿ ಸಂಸ್ಥೆಯ ಮೇಲಿನ ಅಭಿಮಾನದಿಂದ ಈ ಕಷ್ಟಕರವಾದ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಶ್ರೀಪಾದರಾಜರ ಕೀರ್ತನೆಗಳ ಈ ಸಂಪುಟ ಎರಡು ಆವೃತ್ತಿಗಳಲ್ಲಿ ಪ್ರಕಟವಾಗುತ್ತಿದೆ. ಒಂದು ಪಂಡಿತ ಆವೃತ್ತಿ, ಇನ್ನೊಂದು ಜನಪ್ರಿಯ ಆವೃತ್ತಿ ಎರಡನೆಯದರಲ್ಲಿ, ಮೊದಲನೆಯದರಲ್ಲಿರುವ ಪಾಂಡಿತ್ಯದ ಪರಿಕರಗಳು ಇರುವುದಿಲ್ಲ; ಸಂಕ್ಷಿಪ್ತ ಪ್ರಸ್ತಾವನೆ ಹಾಗೂ ಕೀರ್ತನೆಗಳು ಮಾತ್ರ ಇರುತ್ತವೆ. ಕಡಿಮೆ ಬೆಲೆಯಲ್ಲಿ ಈ ಸಾಹಿತ್ಯದ ಶುದ್ಧ ಆವೃತ್ತಿ ಹೆಚ್ಚು ಜನರ ಕೈಸೇರಬೇಕೆಂಬುದೇ ಈ ಯೋಜನೆಯ ಮುಖ್ಯ ಉದ್ದೇಶ. ಮುಂದಿನ ಸಂಪುಟಗಳನ್ನೂ ಈ ಮಾದರಿಯಲ್ಲಿಯೇ ಪ್ರಕಟಿಸಲಾಗುವುದು. ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಯನ್ನು ಇನ್ನೂ ಉತ್ತಮಪಡಿಸಲು ಬರುವ ಎಲ್ಲ ಸಲಹೆ ಸೂಚನೆಗಳನ್ನೂ ಕೃತಜ್ಞತೆಯಿಂದ ಸ್ವೀಕರಿಸಲಾಗುವುದು.

ಮೈಸೂರು ವಿಶ್ವವಿದ್ಯಾನಿಲಯ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ಮಾರ್ಚ್ ೮, ೧೯೭೩

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

## ಎರಡನೆಯ ಮುದ್ರಣ

"ಶ್ರೀಪಾದರಾಜರ ಕೃತಿಗಳು" (ಜನಪ್ರಿಯ ಆವೃತ್ತಿ) ಇಷ್ಟು ಬೇಗ ಮೊದಲ ಮುದ್ರಣದ ಪ್ರತಿಗಳೆಲ್ಲ ಮುಗಿದು ಎರಡನೆಯ ಮುದ್ರಣವನ್ನು ಕಾಣುತ್ತಿರುವುದು ಸಂತೋಷದ ವಿಷಯ. ಕರ್ನಾಟಕ ಘನ ಸರ್ಕಾರವು ೧೯೫೬–೫೭ರಲ್ಲಿ ಹರಿದಾಸ ಸಾಹಿತ್ಯ ಮಾಲೆಯ ಪ್ರಕಟಣೆಗಳಿಗೆ ಬಿಡುಗಡೆ ಮಾಡಿರುವ ಮೂರು ಲಕ್ಷ ರೂಪಾಯಿಗಳ ಉದಾರ ನೆರವಿನಿಂದ ಪ್ರಸ್ತುತ ಪುಸ್ತಕದ ಮರುಮುದ್ರಣ ಸಾಧ್ಯವಾಯಿತು. ಈ ಮುದ್ರಣದಲ್ಲಿ ಕೆಲವು ಸಣ್ಣಪುಟ್ಟ ತಿದ್ದುಪಡಿಗಳನ್ನು ಮಾತ್ರ ಮಾಡಲಾಗಿದೆ.

ಪ್ರಕಟಣೆಯ ಮೇಲ್ವಿಚಾರಣೆಯನ್ನು ನೋಡಿಕೊಂಡ ಡಾ. ಟಿ. ಎನ್. ನಾಗರತ್ನ ರವರಿಗೂ, ಶ್ರೀ ಪ್ರಧಾನ್ ಗುರುದತ್ತರವರಿಗೂ, ಕರಡಚ್ಚುಗಳನ್ನು ತಿದ್ದಲು ನೆರವಾದ ಶ್ರೀ ಎನ್. ಎಸ್. ಶಾರದಾಪ್ರಸಾದ್, ಶ್ರೀ ಎಚ್. ಗಣೇಶ ಐತಾಳರಿಗೂ ಧನ್ಯವಾದಗಳು. ಅತ್ಯಂತ ಕಡಿಮೆ ಸಮಯದಲ್ಲಿ ಗುರುತರವಾದ ಹೊಣೆ ವಹಿಸಿ ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿರುವ "ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್"ನ ಮಾಲೀಕರಿಗೂ, ಸಿಬ್ಬಂದಿ ವರ್ಗದವರಿಗೂ ನಮ್ಮ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಏಪ್ರಿಲ್ ೨೫, ೧೯೮೭

ಎಚ್. ತಿಪ್ಪೇರುದ್ರಸ್ವಾಮಿ
ಪ್ರಧಾನ ಸಂಪಾದಕ

# ಪರಿವಿಡಿ


| | |
|---|---|
| ಮುನ್ನುಡಿ ... ... ... ... ... | 5 |
| ಮುಖ್ಯ ಸಂಕೇತಗಳ ವಿವರ ... ... ... ... | 12 |
| ಪೀಠಿಕೆ ... ... ... ... ... ... | i |
| ಕೃತಿಗಳ ಕ್ರಮಸೂಚಿಕೆ ... ... ... ... ... | xlvii |
| ಶ್ರೀಪಾದರಾಜರ ಕೃತಿಗಳು ... ... ... ... | ೧ |
| ಅನುಬಂಧ ೧–ಪಾಠಪ್ರಭೇದ ... ... ... ... | ೭೩ |
| ಅನುಬಂಧ ೨–ಅಂಕಿತ ಸಂದಿಗ್ಧ ... ... ... ... | ೭೭ |
| ಅನುಬಂಧ ೩–ಏಕೈಕ ಆಕರ ... ... ... ... | ೮೩ |
| ಅನುಬಂಧ ೪–ಅಧಿಕ ಕೃತಿಗಳು ... ... ... ... | ೧೨೭ |
| ಅನುಬಂಧ ೫–ಅಂಕಿತಪಲ್ಲಟ ... ... ... ... | ೧೩೧ |
| ಅನುಬಂಧ ೬–ಲಘು ಟಿಪ್ಪಣಿಗಳು ... ... ... ... | ೧೩೩ |
| ಅನುಬಂಧ ೭–ಸ್ವರಪ್ರಸ್ತಾರ ... ... ... ... | ೧೯೩ |

# ಮುಖ್ಯ ಸಂಕೇತಗಳ ವಿವರ

| | ಸಂಕೇತಗಳು | ಮೂಲ |
|---|---|---|
| ೧ | ಓ. ೧ | ಓಲೆಯ ಪ್ರತಿಗಳು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨ | ಓ. ೨ | |
| ೩ | ಓ ೩ | |
| ೪ | ಗೋ ೨ | ಹರಿದಾಸರತ್ನಂ ಶ್ರೀ ಗೋಪಾಲದಾಸರ ಸಂಗ್ರಹ, ಬೆಂಗಳೂರು. |
| ೫ | ಗೋ.ಲಿ ಪ್ರ | ಹರಿದಾಸರತ್ನಂ ಶ್ರೀ ಗೋಪಾಲದಾಸರ ಲಿಖಿತಪ್ರತಿ, ಬೆಂಗಳೂರು. |
| ೬ | ತಾ ಹ ಲಿ.ಪ್ರ | ಶ್ರೀ ತಾಳೂರು ಹನುಮಂತರಾಯರ ಲಿಖಿತಪ್ರತಿ, ಬಳ್ಳಾರಿ. |
| ೭ | ಬೇ. ೪೧ | ಶ್ರೀ ದ ರಾ ಬೇಂದ್ರೆಯವರ ಸಂಗ್ರಹ, ಧಾರವಾಡ. |
| ೮ | ಲ. ೧೬ | ಶ್ರೀ ದಾಸರ ಲಕ್ಷ್ಮೀನಾರಾಯಣರಾಯರ ಸಂಗ್ರಹ, ಬೆಂಗಳೂರು. |
| ೯ | ಲ. ೧೭ | |
| ೧೦ | ಲೀ ೧ | ಶ್ರೀಮತಿ ಲೀಲಾವತಿಯವರ ಸಂಗ್ರಹ, ಸುರತ್ಕಲ್. |
| ೧೧ | ವ ೨ | ಶ್ರೀ ವರವಣಿ ರಾಮರಾಯರ ಸಂಗ್ರಹ, ಬೆಂಗಳೂರು. |
| ೧೨ | ವ ೧೪ | |
| ೧೩ | ಹೆ ೭೧ | ಶ್ರೀ ಹೆಬ್ಬಳ್ಳಿ ಜಾಗೀರದಾರರ ಸಂಗ್ರಹ, ಹೆಬ್ಬಳ್ಳಿ. |
| ೧೪ | ಮು ೩ | ಶ್ರೀಪಾದರಾಯ ಸ್ವಾಮಿಗಳ ಮತ್ತು ಶ್ರೀ ವ್ಯಾಸರಾಯ ಸ್ವಾಮಿಗಳ ಕೃತಿಗಳು, ಸಂ. ಯಂ. ರಾಮರಾವ್, ಸುಬೋಧ, ೧೯೩೦ |
| ೧೫ | ಮು. ೨೨ | ಹರಿದಾಸ ಸಾಹಿತ್ಯ, ಬೇಲೂರು ಕೇಶವದಾಸರು |
| ೧೬ | ಮು. ೨೫ | ದಾಸರಪದಗಳು, ಸಂ ಪಾವಂಜೆ ಗುರುರಾವ್, ೧೯೬೨ |
| ೧೭ | ಅ | ಅಧ್ಯಾಯ |
| ೧೮ | ಉ. | ಉಗಾಭೋಗ |
| ೧೯ | ಕೀ. | ಕೀರ್ತನೆ |
| ೨೦ | ಕೀ ಸಂ | ಕೀರ್ತನ ಸಂಖ್ಯೆ |
| ೨೧ | ನು | ನುಡಿ |
| ೨೨ | ಪ. | ಪದ್ಯ |
| ೨೩ | ಪು. | ಪುಟ |
| ೨೪ | ಪು ನಾ ಚೂ. | ಪುರಾಣನಾಮ ಚೂಡಾಮಣಿ (೧೯೪೧) |
| ೨೫ | ಬ್ರಾ. | ಬ್ರಾಹ್ಮಣ |
| ೨೬ | ಶ್ಲೋ. | ಶ್ಲೋಕ |
| ೨೭ | ಸು. | ಸುಳಾದಿ |
| ೨೮ | ಸಂ | ಸಂಪುಟ/ಸಂಚಿಕೆ |
| ೨೯ | ಸ್ಕಂ. | ಸ್ಕಂಧ |

# ಪೀಠಿಕೆ

## ೧. ಶ್ರೀಪಾದರಾಜರ ಜೀವನ ಪರಿಚಯ

### ೧

ಶ್ರೀಪಾದರಾಜರ ಜೀವನವನ್ನು ಅವರ ಸಮಕಾಲೀನರಾದ ಶ್ರೀ ವ್ಯಾಸರಾಯರು ರಚಿಸಿರುವ ಕನ್ನಡದ ಕೀರ್ತನೆಗಳು ಮತ್ತು ಸಂಸ್ಕೃತದಲ್ಲಿರುವ ಪಂಚರತ್ನಮಾಲಾಸ್ತುತಿಯಿಂದಲೂ, ಇತ್ತೀಚಿನವರಾದ ವಿಜಯದಾಸರ ಸುಳಾದಿ, ಶ್ರೀನಿಧಿತೀರ್ಥರ “ಶ್ರೀಪಾದರಾಜಾಷ್ಟಕಂ” ಮತ್ತು ಭೀಮಾಚಾರ್ಯ ವಿರಚಿತ “ಶ್ರೀ ಪೂರ್ಣಬೋಧ ಗುರುವಂಶ ಕಲ್ಪತರು” ಮೊದಲಾದ ಇತರ ಸಂಸ್ಕೃತ ಕೃತಿಗಳಿಂದಲೂ ತಿಳಿಯಬಹುದು. ಈ ರಚನೆಗಳಲ್ಲಿ ಶ್ರೀಪಾದರಾಜರು ಯತ್ಯಾಶ್ರಮವನ್ನು ಕೈಕೊಂಡಂದೀಚಿನ ಮಹಿಮಾ ವಿಶೇಷಗಳನ್ನು ನಿರೂಪಿಸಿದೆ ಅವರ ಬಾಲ್ಯವನ್ನು ಕರ್ಣಾಕರ್ಣಿಕೆಯಾಗಿ ಪ್ರಚಲಿತವಾಗಿರುವ ಪ್ರತೀತಿಯ ಸಹಾಯದಿಂದ ಚಿತ್ರಿಸಿಕೊಳ್ಳಬೇಕಾಗಿದೆ.

ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನಲ್ಲಿರುವ ಅಬ್ಬೂರು ಶ್ರೀ ಬ್ರಹ್ಮಣ್ಯತೀರ್ಥರ ವೃಂದಾವನವಿರುವ ಪವಿತ್ರ ಸ್ಥಳ. ಕಣ್ವಾನದಿಯ ತಟದಲ್ಲಿರುವ ಈ ಮಠಾಧ್ವಮರ ಇಂದಿಗೂ ನೈಸರ್ಗಿಕವಾದ ಪ್ರಕೃತಿಯ ಸಂಪತ್ತಿನಿಂದ ಸುತ್ತುವರಿದು ರಮಣೀಯವಾಗಿದೆ. ಇಲ್ಲಿಯೇ ಸಮೀಪದ ಗುಡ್ಡದಲ್ಲಿ ಶ್ರೀ ಪುರುಷೋತ್ತಮತೀರ್ಥರ ಗುಹೆಯಿದೆ. ಶ್ರೀಪಾದರಾಜರು ಮತ್ತು ಶ್ರೀ ಬ್ರಹ್ಮಣ್ಯತೀರ್ಥರ ಮಾತೆಯರು ಸಹೋದರಿಯರಾದ ಪ್ರಯುಕ್ತ, ಶ್ರೀಪಾದರಾಜರು ತಮ್ಮ ಬಾಲ್ಯವನ್ನು ಈ ಅಬ್ಬೂರಿನಲ್ಲಿಯೇ ಕಳೆದರೆಂದು ಭಾವಿಸುವುದು ಸೂಕ್ತವಾಗಿದೆ[1] ಇವರ ತಂದೆ ಶೇಷಗಿರಿಯಪ್ಪ ; ತಾಯಿ ಗಿರಿಯಮ್ಮ. ಈ ಸಂಸಾರಿಗಳು ಅಷ್ಟೇನೂ ಸ್ಥಿತಿವಂತರಾಗಿರಲಿಲ್ಲ. ಲಕ್ಷ್ಮೀನಾರಾಯಣ ಎಂಬುದು ಶ್ರೀಗಳವರ ಪೂರ್ವಾಶ್ರಮದ ಹೆಸರು. ಬಾಲಕನು ಒಮ್ಮೆ, ಸಾಯಂಕಾಲದ ವೇಳೆಯಲ್ಲಿ ತನ್ನ ದನಕರುಗಳನ್ನು ಮನೆಗೆ ಹೊಡೆದುಕೊಂಡು ಹಿಂತಿರುಗಿ ಬರುತ್ತಿರುವಲ್ಲಿ ಶ್ರೀಗಳೊಬ್ಬರ ಮೇನೆಯು ಕಂಡುಬಂದಿತು. ದನ ಕಾಯಲು ಹೋಗಿದ್ದ ಲಕ್ಷ್ಮೀನಾರಾಯಣ ಮೊದಲ್ಗೊಂಡು ಆತನ ಸ್ನೇಹಿತರೆಲ್ಲರೂ ಮೇನೆಯನ್ನು ಕಂಡು

---

[1] ಶ್ರೀಪಾದರಾಜಮಠದವರು ಪ್ರಕಟಿಸಿರುವ ಶ್ರೀಗಳವರ ಚರಿತ್ರೆಯಲ್ಲಿ ಈ ಮಹಿಮರ ಸ್ಥಳ ದಕ್ಷಿಣದಲ್ಲಿರುವ ಶ್ರೀರಂಗವೆಂದು ಎಣಿಸಿದ್ದರೆ (ಶ್ರೀಪಾದರಾಜಚರಿತಾಮೃತಂ, ಪು. ೧), ಕೆಲವು ಗ್ರಂಥಗಳಲ್ಲಿ ಮುಳುಬಾಗಿಲು ಎಂದು ಹೇಳಿದೆ (*Mystic Teachings of The Haridasas of Karnataka*, 1939, p 30). ಆದರೆ ಬ್ರಹ್ಮಣ್ಯತೀರ್ಥರ ಬಾಂಧವ್ಯವನ್ನು ಅವಲಂಬಿಸಿ ಶ್ರೀಪಾದರಾಜರು ಅಬ್ಬೂರಿನಲ್ಲಿಯೇ ಇದ್ದಿರಬೇಕೆಂದು ಇಲ್ಲಿ ಗ್ರಹಿಸಿದೆ.

ಹಾಗೆಯೇ ಆಶ್ಚರ್ಯಚಕಿತರಾಗಿ ನಿಂತರು. ಮೇನೆಯಲ್ಲಿದ್ದ ಯತಿಗಳು, ಹೊರಗೆ ತಲೆ ಹಾಕಿ, ಆನತಿ ದೂರದಲ್ಲಿಯೇ ನಿಂತಿದ್ದ ಲಕ್ಷ್ಮೀನಾರಾಯಣನನ್ನು ಕರೆದು, 'ಮಗೂ ಅಬ್ಬೂರು ಇನ್ನೂ ಎಷ್ಟು ದೂರವಿದೆಯಪ್ಪ ?' ಎಂದು ಕೇಳಿದರು.

ಲಕ್ಷ್ಮೀನಾರಾಯಣನು ಶ್ರೀಗಳವರ ಪ್ರಶ್ನೆಗೆ ನೇರವಾಗಿ ಉತ್ತರ ಕೊಡದೆ 'ಇದೋ ಇಲ್ಲಿ ನನ್ನನ್ನು ನೋಡಿ. ಮನೆಗೆ ಹಿಂತಿರುಗುತ್ತಿರುವ ಈ ದನಕರುಗಳನ್ನು ನೋಡಿ. ಪಶ್ಚಿಮ ದಿಕ್ಕಿನಲ್ಲಿರುವ ಸೂರ್ಯನನ್ನು ನೋಡಿ. ಈಗಲಾದರೂ ಅಬ್ಬೂರು ಎಷ್ಟು ದೂರದಲ್ಲಿದೆಯೆನ್ನುವುದು ವೇದ್ಯವಾಯಿತೆ ?' ಎಂದು ನುಡಿದನು.

ಹೊತ್ತು ಇಳಿಯುತ್ತ ಬರಲು ಕತ್ತಲೆಗೆ ಮುಂಚೆ ಜಾನುವಾರುಗಳನ್ನು ಹಟ್ಟಿಗೆ ಕರೆದೊಯ್ಯುವುದು ಹಿಂದಿನಿಂದ ನಡೆದುಕೊಂಡು ಬಂದಿರುವ ಪದ್ಧತಿಯಷ್ಟೆ ! ಆದ್ದರಿಂದ, ಅಬ್ಬೂರು ತೀರ ಸಮೀಪದಲ್ಲಿಯೇ ಇದೆಯೆಂಬ ಅಂಶವನ್ನು ಲಕ್ಷ್ಮೀನಾರಾಯಣನು ಬಹಳ ಧ್ವನಿಪೂರ್ವಕವಾಗಿ ಹೇಳಿದ್ದನು

ಮೇನೆಯಲ್ಲಿದ್ದ ಶ್ರೀಗಳವರಿಗಾದರೋ ಬಾಲಕನ ಕುಶಾಗ್ರಮತಿಯನ್ನೂ, ಮುಖದ ವರ್ಚಸ್ಸನ್ನೂ ಕಂಡು ತುಂಬ ಸಂತೋಷವಾಯಿತು. ಹುಡುಗನನ್ನು ಮೇನೆಯಲ್ಲಿ ಕುಳಿತು, ತಮಗೆ ಅಬ್ಬೂರಿಗೆ ದಾರಿಯನ್ನು ತೋರಿಸುವಂತೆ ಕೋರಿದರು.

ಲಕ್ಷ್ಮೀನಾರಾಯಣನು ಶ್ರೀಗಳವರ ಮಾತಿಗೆ ಸಮ್ಮತಿಸದೆ, 'ಎಲ್ಲಿಯಾದರೂ ಉಂಟೆ ? ಈಗಾಗಲೇ ಇಲ್ಲಿ ನೆಲಸಿರುವ ಒಬ್ಬ ಸ್ವಾಮಿಗಳು ನಮ್ಮ ದೊಡ್ಡಮ್ಮನ ಮಗನಿಗೆ ಸಂನ್ಯಾಸವಿತ್ತು ತಮ್ಮ ಮಠಕ್ಕೆ ಸೇರಿಸಿಕೊಂಡಿದ್ದಾರೆ. ಅದೇ ನಮ್ಮ ಮನೆತನ ದಲ್ಲಿ ಸಾಕಷ್ಟು ಗಲಭೆಯನ್ನೆಬ್ಬಿಸಿದೆ. ಇನ್ನು ನಾನೂ ನಿಮ್ಮ ಜೊತೆಯಲ್ಲಿ ಕುಳಿತು ಬರುವುದೆಂದರೆ ನಮ್ಮ ತಾಯಿ ಹೆದರಿಯಾಳು ಆದ್ದರಿಂದ ಅದು ನನ್ನಿಂದ ಸಾಧ್ಯವಿಲ್ಲ' ಎಂದನು.

ಶ್ರೀಗಳವರು ಬಾಲಕನ ಮಾತಿಗೆ ಮನವೊಲಿದು 'ಆ ರೀತಿ ನಿಮ್ಮ ಅಣ್ಣನಿಗೆ ಸಂನ್ಯಾಸ ವನ್ನಿತ್ತ ಗುರುಗಳು ಯಾರು ?' ಎಂದು ಕೇಳಿದರು.

ಲಕ್ಷ್ಮೀನಾರಾಯಣನು 'ಆ ಗುರುಗಳ ಹೆಸರು ಪುರುಷೋತ್ತಮತೀರ್ಥರು. ಅವರ ಮಾತನ್ನು ಇಲ್ಲಿ ಯಾರೂ ಮೀರುವಂತಿಲ್ಲ' ಎಂದನು.

ಮೇನೆಯಲ್ಲಿದ್ದ ಶ್ರೀಗಳವರಾದರೋ ಶ್ರೀ ಸ್ವರ್ಣವರ್ಣತೀರ್ಥರು. ಅವರು ಪದ್ಮನಾಭ ತೀರ್ಥರ ಮಠದ ಪೀಳಿಗೆಯಲ್ಲಿ ಏಳನೆಯವರು. ಶ್ರೀರಂಗಪಟ್ಟಣದ ಬಳಿ ಕಾವೇರಿ ನದಿಯ ಸ್ನಾನಕ್ಕಾಗಿ ಬಂದವರು ಅಬ್ಬೂರಿನಲ್ಲಿರುವ ಶ್ರೀ ಪುರುಷೋತ್ತಮತೀರ್ಥರ ಪ್ರಖ್ಯಾತಿ ಯನ್ನು ಕೇಳಿ ಆ ಮಹಾನುಭಾವರ ಸಂದರ್ಶನಕ್ಕಾಗಿಯೇ ಅತ್ತ ಬಂದಿದ್ದರು.

ಅತ್ಯಲ್ಪ ಕಾಲದಲ್ಲಿಯೇ ಶ್ರೀ ಪುರುಷೋತ್ತಮತೀರ್ಥರ ಬಳಿಗೆ ಬಂದರು. ಅವರ ಸನಿಹದಲ್ಲಿ ವಿರಾಜಿಸುತ್ತಿದ್ದ ಬಾಲಯತಿಯಾದ ಶ್ರೀ ಬ್ರಹ್ಮಣ್ಯತೀರ್ಥರನ್ನು ಕಂಡು 'ಶ್ರೀಪಾದರೆ, ಇಂಥ ಅಪೂರ್ವ ವರ್ಚಸ್ಸುಳ್ಳ ಬಾಲಯತಿಯೊಬ್ಬನು ನಮ್ಮ ಸಂಸ್ಥಾನಕ್ಕೂ ದೊರೆತರೆ ನಾನು ಕೃತಾರ್ಥ' ಎಂದು ತಮ್ಮ ಆಸೆಯನ್ನು ವ್ಯಕ್ತಪಡಿಸಿದರು.

ಮಹಾಜ್ಞಾನಿಗಳಾಗಿದ್ದ ಶ್ರೀ ಪುರುಷೋತ್ತಮತೀರ್ಥರು 'ದೈವಾನುಗ್ರಹವಿದ್ದರೆ ಇಲ್ಲಿಯೇ ದೊರೆತರೂ ದೊರೆಯಬಹುದು' ಎಂದರು.

ಶ್ರೀ ಸ್ವರ್ಣವರ್ಣಯತಿಗಳಿಗೆ ಆ ಮಾತುಗಳನ್ನು ಆಲಿಸಿದ ಮಾತ್ರದಿಂದಲೇ ಮೈ ಪುಳಕಿತವಾಯಿತು. ತಾವು ದಾರಿಯಲ್ಲಿ ಬರುತ್ತಿರುವಾಗ್ಗೆ ತಮಗೂ ಲಕ್ಷ್ಮೀನಾರಾಯಣ ನೆಂಬ ಬಾಲಕನಿಗೂ ನಡೆದ ಸಂವಾದವನ್ನು ವಿವರಿಸಿ, ಆ ಹುಡುಗನನ್ನು ಬಾಯಿ ತುಂಬ ಕೊಂಡಾಡಿದರು. ಶ್ರೀ ಸ್ವರ್ಣವರ್ಣರ ಹೃದಯಾಭಿಲಾಷೆಯನ್ನು ಗ್ರಹಿಸಿದ ಶ್ರೀ ಪುರುಷೋತ್ತಮತೀರ್ಥರು, ಆ ಬಾಲಕನಾರಿರಬಹುದೆಂಬುದನ್ನು ಮನಸ್ಸಿನಲ್ಲಿಯೇ ಭಾವಿಸಿ ನೋಡಿ, ಶೇಷಗಿರಿ ಮತ್ತು ಗಿರಿಯಮ್ಮ ದಂಪತಿಗಳಿಗೆ ತಮ್ಮ ಮಗನನ್ನು ಕರೆದುಕೊಂಡು ಬೆಳಗಾಗುವ ವೇಳೆಗೆ ಬಂದು ತಮ್ಮನ್ನು ಕಾಣುವಂತೆ ಹೇಳಿಕಳುಹಿಸಿ ದರು.

ಶ್ರೀ ಪುರುಷೋತ್ತಮತೀರ್ಥರ ಸಂದೇಶವನ್ನು ಕೇಳಿದ ಆ ದಂಪತಿಗಳು ಕ್ಷಣಕಾಲ ಅವಾಕ್ಕಾದರು. ಗಿರಿಯಮ್ಮನಂತೂ, ಈ ಮೊದಲೇ ತನ್ನ ಮಗನಿಂದ ಅವನಿಗೂ ಶ್ರೀಗಳವರಿಗೂ ಆ ದಿನ ಸಂಜೆ ನಡೆದ ಸಂಭಾಷಣೆಯನ್ನೆಲ್ಲ ಕೇಳಿದ್ದರಿಂದ ಮನಸ್ಸು ಕಳವಳಕ್ಕೆ ಈಡಾಗಿದ್ದಿತು. ಶ್ರೀಗಳವರ ಆಜ್ಞೆಯಾದುದರಿಂದ ವಿಚಾರಮಾಡುವಂತಿರಲಿಲ್ಲ.

ದಂಪತಿಗಳು ತಮ್ಮ ಪುತ್ರ ಸಮೇತರಾಗಿ ಬಂದು ಶ್ರೀ ಪುರುಷೋತ್ತಮತೀರ್ಥರನ್ನು ಕಂಡರು.

ಅಲ್ಲಿಯೇ ಒಂದು ಕಡೆ, ಸ್ವರ್ಣವರ್ಣತೀರ್ಥರು ಪೀಠದ ಮೇಲೆ ಕುಳಿತಿದ್ದರು. ಅವರ ದೃಷ್ಟಿ ಲಕ್ಷ್ಮೀನಾರಾಯಣನ ಕಡೆಗೆ ನೆಟ್ಟಿತ್ತು.

ಪುರುಷೋತ್ತಮತೀರ್ಥರು ಶೇಷಗಿರಿಯನ್ನು ಕರೆದು 'ಅಯ್ಯಾ ಶೇಷಗಿರಿ, ನಿನ್ನ ಮಗನ ಬುದ್ಧಿಮಂತಿಕೆಯನ್ನು ಕೇಳಿ ನಮ್ಮ ಮನಸ್ಸಿಗೆ ತುಂಬ ಸಂತೋಷವಾಯಿತು. ಇದೀಗ ಅವನಿಗೆ ಬ್ರಹ್ಮೋಪದೇಶ ಮಾಡುವ ವಯಸ್ಸು. ನೀನು ಒಪ್ಪಿದಲ್ಲಿ ಅವನಿಗೆ ಬ್ರಹ್ಮೋಪದೇಶವನ್ನು ಮಾಡಿ, ಅವನ ವಿದ್ಯಾಭ್ಯಾಸ ಸರ್ವಸ್ವವನ್ನೂ ನೆರವೇರಿಸಲು, ಇಲ್ಲಿಗೆ ಶ್ರೀರಂಗದಿಂದ ದಯಮಾಡಿಸಿರುವ ಈ ಸ್ವರ್ಣವರ್ಣತೀರ್ಥರು ಸಿದ್ಧರಿದ್ದಾರೆ. ಅವನ ಮುಖದ ವರ್ಚಸ್ಸಿನಿಂದಲೇ ಅವನು ಅಸಾಧಾರಣ ಕೀರ್ತಿಶಾಲಿಯಾಗುವನೆಂದು ವಿದಿತವಾಗುತ್ತದೆ. ಮುಂದೆ ಶ್ರೀಗಳವರ ಮಠಕ್ಕೆ ಅವನನ್ನು ಉತ್ತರಾಧಿಕಾರಿಯನ್ನಾಗಿ ಸ್ವೀಕರಿಸಲೂ ಶ್ರೀಗಳವರ ಒಪ್ಪಿಗೆಯುಂಟು. ಯಾವುದನ್ನೂ ನಿನ್ನ ಪತ್ನಿಯಲ್ಲಿ ವಿಚಾರಿಸಿ ತಿಳಿಸು' ಎಂದರು.

ಆ ಕಾಲದಲ್ಲಿ ತಪೋಮಹಿಮರಾದ ಪುರುಷೋತ್ತಮತೀರ್ಥರನ್ನು ಕಂಡರೆ ಆ ಊರಿನ ಎಲ್ಲರಿಗೂ ಪರಮಭಕ್ತಿ. ಶ್ರೀಗಳವರ ಮಾತುಗಳನ್ನು ಕೇಳುತ್ತ ಕೇಳುತ್ತ ಗಿರಿಯಮ್ಮನಿಗೆ ಮಾತೃವಾತ್ಸಲ್ಯದಿಂದ ದುಃಖ ಒತ್ತರಿಸಿ ಬಂದಿತು. ಶೇಷಗಿರಿಗಾದರೋ ಮಗನ ಶ್ರೇಯೋಭಿವೃದ್ಧಿಗಾಗಿ ಶ್ರೀಗಳವರು ಹೇಳಿದಂತೆಯೇ ನಡೆದುಕೊಳ್ಳುವುದು ಸೂಕ್ತವೆನ್ನಿಸಿತು. ಅಧೀರಳಾಗಿದ್ದ ತನ್ನ ಪತ್ನಿಗೆ ಸಮಾಧಾನವನ್ನು ಹೇಳಿ, ಆಕೆಯ

ಅನುಮತಿಯನ್ನು ಪಡೆದನು. ಪುರುಷೋತ್ತಮತೀರ್ಥರ ಬಳಿಯಲ್ಲಿ 'ಶ್ರೀಗಳವರೆ, ನಮ್ಮ ವೃದ್ಧಾಪ್ಯದಲ್ಲಿ ನಮಗೆ ಆಶ್ರಯವಾಗಬಲ್ಲ ಕುಮಾರನನ್ನು ಯತಿಗಳಿಗೆ ಒಪ್ಪಿಸಿ ಕೊಟ್ಟಮೇಲೆ ನಮಗೆ ದಿಕ್ಕು ಯಾರು ?' ಎಂದು ತುಂಬು ವಿನಯದಿಂದ ಕೇಳಿಕೊಂಡನು

ಪುರುಷೋತ್ತಮತೀರ್ಥರು 'ಸ್ವರ್ಣವರ್ಣರು ನಿಮ್ಮ ಮಗನಿಗೆ ಅನುಗ್ರಹಿಸಿದ ಮೇಲೆ ನಿಮ್ಮಂಥ ಭಾಗ್ಯಶಾಲಿಗಳು ಬೇರೊಬ್ಬರಿಲ್ಲ. ಅವರ ಉದಾರಾಶ್ರಯದಲ್ಲಿ ನೀವೂ ಇದ್ದು ಕೃತಾರ್ಥರಾಗಬಹುದು' ಎಂದು ಅಭಯವಚನವಿತ್ತರು.

ಈ ರೀತಿ ಎಲ್ಲರ ಮನಸ್ಸೂ ಸಂತುಷ್ಟವಾದ ಬಳಿಕ, ಸ್ವರ್ಣವರ್ಣತೀರ್ಥರು ಬಾಲಕನಾದ ಲಕ್ಷ್ಮೀನಾರಾಯಣ ಮತ್ತು ಆತನ ಮಾತಾಪಿತೃಗಳೊಂದಿಗೆ ಶ್ರೀರಂಗಕ್ಕೆ ಹಿಂದಿರುಗಿದರು

೨

ಶ್ರೀ ಸ್ವರ್ಣವರ್ಣತೀರ್ಥರ ನೇತೃತ್ವದಲ್ಲಿ ಲಕ್ಷ್ಮೀನಾರಾಯಣನ ಬದುಕು ದಿನ ದಿನಕ್ಕೂ ಪ್ರವರ್ಧಿಸಿತು ಬ್ರಹ್ಮೋಪದೇಶವಾದ ಅನಂತರ ಬಾಲಕನಿಗೆ ತಕ್ಕ ವಿದ್ಯಾವ್ಯಾಸಂಗವೂ ನಡೆಯಿತು ಕ್ಷಿಪ್ರದಲ್ಲಿಯೇ ಶ್ರೀಗಳವರು ಲಕ್ಷ್ಮೀನಾರಾಯಣನಿಗೆ ಸಂನ್ಯಾಸ ದೀಕ್ಷೆಯನ್ನೂ ಕೊಟ್ಟು ತಮ್ಮ ಸಂಸ್ಥಾನದ ಉತ್ತರಾಧಿಕಾರಿಯೆಂಬುದಾಗಿ ನಿರ್ಧರಿಸಿದರು ಪೀಠಾಧಿಕಾರಿಗೆ ತಕ್ಕ ವೇದಾಂತ ವ್ಯಾಸಂಗಕ್ಕಾಗಿ ಲಕ್ಷ್ಮೀನಾರಾಯಣ ತೀರ್ಥರನ್ನು ಅಂದು ಸುಪ್ರಸಿದ್ಧರಾಗಿದ್ದ ಶ್ರೀ ವಿಬುಧೇಂದ್ರತೀರ್ಥರಲ್ಲಿಗೆ ಕಳುಹಿಸಿ ಕೊಟ್ಟರು ಇಂದು ರಾಯರಮಠವೆಂದು ವಿಖ್ಯಾತವಾಗಿರುವ ಸಂಸ್ಥಾನದ ಪೂರ್ವ ಪರಂಪರೆಗೆ ಸೇರಿದ ಮಹಾನುಭಾವರು ಇವರು. ಲಕ್ಷ್ಮೀನಾರಾಯಣತೀರ್ಥರು ಶ್ರೀಗಳವರಿಂದ ದ್ವೈತ ಸಿದ್ಧಾಂತ ಸಮಸ್ತವನ್ನೂ ಕಲಿತು ಬಹು ಬೇಗನೆ ಹಿರಿಯರ ಆದರ ವಿಶ್ವಾಸಗಳಿಗೆ ಪಾತ್ರರಾದರು ಒಮ್ಮೆ ಶ್ರೀ ವಿಬುಧೇಂದ್ರತೀರ್ಥರು ತಮ್ಮ ಶಿಷ್ಯರಾದ ಲಕ್ಷ್ಮೀನಾರಾಯಣತೀರ್ಥರೊಂದಿಗೆ ರಾಯಚೂರು ಜಿಲ್ಲೆಯಲ್ಲಿರುವ ಕೊಪ್ಪವೆಂಬ ನರಸಿಂಹಕ್ಷೇತ್ರದಲ್ಲಿರುವಾಗ, ಉತ್ತರಾದಿಮಠದ ಅಂದಿನ ಶ್ರೀಗಳವರಾಗಿದ್ದ ಶ್ರೀ ರಘುನಾಥತೀರ್ಥರು ಅಲ್ಲಿಗೆ ದಯಮಾಡಿಸಿದರು. ಉಭಯ ಯತಿವರ್ಯರೂ ಪರಸ್ಪರ ಕಲೆತು ಕುಶಲವೃತ್ತಾಂತವನ್ನು ಕೇಳಿ ಸುಖಿಸಿದರು. ಆಗ ಶ್ರೀ ವಿಬುಧೇಂದ್ರರು ತಮ್ಮಲ್ಲಿದ್ದ ಬಾಲಯತಿಗಳಾದ ಶ್ರೀ ಲಕ್ಷ್ಮೀನಾರಾಯಣತೀರ್ಥರನ್ನು ವಿದ್ಯಾಪಾರಂಗತರೆನ್ನಿಸಿದ್ದ ಶ್ರೀ ರಘುನಾಥತೀರ್ಥರಿಗೆ ಪರಿಚಯ ಮಾಡಿಕೊಟ್ಟು, ಅವರ ವಿದ್ಯಾಪರಿಶ್ರಮವನ್ನು ಅವಲೋಕಿಸಿ ಆಶೀರ್ವದಿಸಬೇಕೆಂದು ಕೋರಿದರು.

ಮಾರನೆಯ ದಿನವೇ ಕೊಪ್ಪದಲ್ಲಿ ಸಮಸ್ತ ವಿದ್ವಾಂಸರ ಸಭೆಯೊಂದು ನೆರೆಯಿತು. ಶ್ರೀ ಲಕ್ಷ್ಮೀನಾರಾಯಣತೀರ್ಥರು ಯತಿವರ್ಯರಿಬ್ಬರ ಸಮಕ್ಷಮದಲ್ಲಿ ಟೀಕಾಚಾರ್ಯರ ಸುಧಾಗ್ರಂಥವನ್ನು ಪಠಿಸಿ ಅಪೂರ್ವವಾದ ರೀತಿಯಲ್ಲಿ ಅದರ ವ್ಯಾಖ್ಯಾನವನ್ನು ಮಾಡಿ ಸಮಸ್ತರಿಗೂ ಸಂತೋಷವನ್ನುಂಟುಮಾಡಿದರು. ಶ್ರೀ ರಘುನಾಥತೀರ್ಥರಿಗಂತೂ

ಬಾಲಯತಿಗಳ ವಿದ್ವತ್ತನ್ನು ಕಂಡು ಪರಮಹಾನಂದವಾಯಿತು. ಲಕ್ಷ್ಮೀನಾರಾಯಣ ತೀರ್ಥರನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಆಗ ವಿನಯಸಂಪನ್ನರಾದ ಲಕ್ಷ್ಮೀ ನಾರಾಯಣತೀರ್ಥರು 'ತಮ್ಮಂತಹ ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾದವರು ಮಹಾಪುಣ್ಯಶಾಲಿಗಳೇ ಸರಿ' ಎಂದು ಶ್ರೀಗಳವರಿಗೆ ತಮ್ಮ ಭಕ್ತಿಯನ್ನು ಸಮರ್ಪಿಸಿ ದರು. ಬಾಲಯತಿಗಳ ಆ ಸೌಜನ್ಯವನ್ನು ಕಂಡು ಶ್ರೀ ರಘುನಾಥತೀರ್ಥರಿಗೆ ಮತ್ತಷ್ಟು ಆನಂದವಾಯಿತು. ಕೂಡಲೆ 'ನಾವು ಶ್ರೀಪಾದರಾದರೆ, ನೀವು ಶ್ರೀಪಾದರಾಜರೇ ಸರಿ' ಎಂದು ಉಬ್ಬಿ ಕೊಂಡಾಡಿದರು; ಅಂದಿನಿಂದ ಲಕ್ಷ್ಮೀನಾರಾಯಣತೀರ್ಥರ ಹೆಸರು ಶ್ರೀಪಾದರಾಜರೆಂದೇ ಬಳಕೆಗೆ ಬಂದು, ಅವರ ಸಂಸ್ಥಾನಕ್ಕೂ ಶ್ರೀಪಾದರಾಜರ ಮಠ ವೆಂದು ಹೆಸರಾಯಿತು. ಶ್ರೀ ಲಕ್ಷ್ಮೀನಾರಾಯಣತೀರ್ಥರ ಜೀವನದಲ್ಲಿ ಇದೊಂದು ಸುವರ್ಣ ಸಂದರ್ಭವೇ ಸರಿ. ಅವರ ಜೀವನದ ಘಟನೆಗಳನ್ನು ನಿರೂಪಿಸುವಲ್ಲಿ 'ಶ್ರೀ ಪೂರ್ಣಬೋಧ ಗುರುವಂಶಕಲ್ಪತರು'ವೆಂಬ ಗ್ರಂಥದಲ್ಲಿ ಈ ಸನ್ನಿವೇಶವನ್ನು ಹೀಗೆ ಚಿತ್ರಿಸಿದೆ :

ದೃಷ್ಟ್ವಾ ತದುಭಯಂ ಶ್ರೀ ಮದ್ರಘುನಾಥ ಮುನೀಶ್ವರಾಃ
ಸಂತುಷ್ಟಾಃ ಶ್ಲಾಘಯಾಂ ಚಕ್ರುರ್ಲಕ್ಷ್ಮೀನಾರಾಯಣಭಿಧಾ

'ಭೋ ಭೋ ಭವಂತಃ ಕುಶಲಾಃ ಪರಪಕ್ಷಾನುವಾದನೇ
ಏವಂ ಭವದ್ಭಿಃ ಶಾಸ್ತ್ರಸ್ಯಾಭ್ಯಾಸನಾನಾಂ ಚ ಸರ್ವದಾ

ಕೃತೇ ದುರ್ವಾದಿನೋ ಜಿತ್ವಾ ಸಿದ್ಧಾಂತ ಸ್ಥಾಪನೇನ ಚ
ವಿಶೇಷತೋ ಭವೇತ್ಯೇವಾಹ್ಯಾಚಾರ್ಯಾಣಾಂ ಹರೇಸ್ತಥಾ

ಇತ್ಯುಕ್ತಾ ಸ್ತೈರ್ಮುನಿವರ್ಯೈರ್ಲಕ್ಷ್ಮೀನಾರಾಯಣಾಭಿಧಾಃ
ಊಚುಃ 'ಭವಂತಃ ಶ್ರೀಪಾದಾಃ ನ ವಯಂ ಭವತಾಂ ಸಮಾಃ'

ಇತ್ಯುಕ್ತಾ ಪುನರೂಚುಸ್ತೇ 'ಶ್ರೀಪಾದಾ ಏವ ಭೋ ವಯಮ್
ಯೂಯಂ ಶ್ರೀಪಾದರಾಜಾಸ್ತು ಪಾಂಡಿತ್ಯಾತಿಶಯಾನ್ವಿತಾಃ'

ಏವಂ ತೇಷಾಂ ನಾಮಂ ದತ್ವಾ ಗಾಯಕೈಸ್ತು ಸಭಾತಲೇ
ಘೋಷಯಾಮಾಸುರತ್ಯಂತಂ ತೇಷು ಪ್ರೇಮಸಮನ್ವಿತಾಃ

ಶ್ರೀ ವಿಬುಧೇಂದ್ರತೀರ್ಥರ ಪಾದತಲದಲ್ಲಿ ಕುಳಿತು ದ್ವೈತ ವೇದಾಂತ ಸಮಸ್ತವನ್ನೂ ಹೃದ್ಗತ ಮಾಡಿಕೊಂಡು ಶ್ರೀಪಾದರಾಜರು (ಇಲ್ಲಿಂದ ಮುಂದೆ ಲಕ್ಷ್ಮೀನಾರಾಯಣ ತೀರ್ಥರೆನ್ನುವುದಕ್ಕೆ ಬದಲಾಗಿ ಈ ರೂಢನಾಮವನ್ನೇ ಬಳಸಿದೆ.) ಸ್ವರ್ಣವರ್ಣತೀರ್ಥ ರಲ್ಲಿಗೆ ಬಂದರು. ಕಾಲಾನಂತರದಲ್ಲಿ ಸ್ವರ್ಣವರ್ಣತೀರ್ಥರು ವೃಂದಾವನಸ್ಥರಾಗಲು ಶ್ರೀಪಾದರಾಜರು ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು. ಶ್ರೀ ಮಧ್ವಾಚಾರ್ಯರ ಅಗ್ರಶಿಷ್ಯರೆನ್ನಿಸಿದ್ದ ಶ್ರೀ ಪದ್ಮನಾಭತೀರ್ಥರೇ ಈ ಮಠದ ಮೂಲಪುರುಷರು. ಆ ಮಹಿ ಮರು ತಮ್ಮ ಗುರುಗಳಿಂದ ದತ್ತವಾದ ಶ್ರೀ ಗೋಪಿನಾಥನನ್ನು ಪೂಜಿಸುತ್ತ ಆನಂದ ತೀರ್ಥರಿಂದ ನೂತನವಾಗಿ ಸ್ಥಾಪಿತವಾಗಿದ್ದ ದ್ವೈತದರ್ಶನದ ಪ್ರಚಾರಕಾರ್ಯದಲ್ಲಿ

ನಿರತರಾಗಿದ್ದರು. ಶ್ರೀ ಆನಂದತೀರ್ಥರ ಅನಂತರ ಮೂಲ ಸಂಸ್ಥಾನದ ಮೂಲ ಸೀತಾ ರಾಮರನ್ನು ಅರ್ಚಿಸುವ ಮಹಾಭಾಗ್ಯ ಮೊದಲ ಬಾರಿಗೆ ಅವರಿಗೇ ಬಂದಿತು. ಶ್ರೀಪದ್ಮನಾಭತೀರ್ಥರ ಸಂಸ್ಥಾನಾಧಿಪತ್ಯವು ಇತ್ತ ಮುಂದುವರಿದು ಪ್ರತ್ಯೇಕಶಾಖೆಯಾಗಿ ಬೆಳೆಯಿತು. ಆ ಸಂಸ್ಥಾನದ ಯತಿವರ್ಯರಲ್ಲಿ ಸ್ವರ್ಣವರ್ಣರು ಏಳನೆಯವರಾದ್ದರಿಂದ, ಅವರ ಅನಂತರ ಪೀಠಾರೋಹಣ ಮಾಡಿದ ಶ್ರೀಪಾದರಾಜರು ಎಂಟನೆಯವರಾದರು.

ಶ್ರೀ ಸ್ವರ್ಣವರ್ಣತೀರ್ಥರ ತರುವಾಯ ಸಂಸ್ಥಾನಾಧಿಪತ್ಯವನ್ನು ವಹಿಸಿಕೊಂಡ ಶ್ರೀಪಾದರಾಜರು ಶ್ರೀರಂಗದಲ್ಲಿ ಕೆಲವು ವರ್ಷಗಳು ಇದ್ದಿರಬಹುದು. ಅವರು ಅಲ್ಲಿಂದ ಸಂಚಾರಕ್ಕೆ ಹೊರಟವರು ಮುಳುಬಾಗಿಲಿಗೆ ಬಂದಾಗ ಅಲ್ಲಿನ ಪ್ರಾಶಸ್ತ್ಯವನ್ನು ಅರಿತು ತಮ್ಮ ಮಠವನ್ನು ಅಲ್ಲಿಯೇ ಸ್ಥಿರವಾಗಿ ಸ್ಥಾಪಿಸಿದರು. ಆ ಕಾಲಕ್ಕೆ ಮುಳುಬಾಗಿಲು ವಿಜಯನಗರದ ಅರಸರ ಆಧಿಪತ್ಯಕ್ಕೆ ಒಳಪಟ್ಟು ತುಂಬ ಮಹತ್ವವನ್ನು ಪಡೆದಿದ್ದಿತು. ಶ್ರೀ ಅಕ್ಷೋಭ್ಯತೀರ್ಥರು ಅಂಗಾರದಿಂದಲೇ ಯೋಗಾನರಸಿಂಹನನ್ನು ಬರೆದು ಶ್ರೀ ವಿದ್ಯಾರಣ್ಯರೊಂದಿಗೆ ವಾದಮಾಡಿ ವಿಜಯ ಸಂಪಾದಿಸಿಕೊಂಡ ಸ್ಥಳವಿದೆಂದು ಪರಿಗಣಿತವಾಗಿದ್ದುದರಿಂದ ಇದು ಪವಿತ್ರಕ್ಷೇತ್ರವೆನ್ನಿಸಿತ್ತು. ಅಲ್ಲಿಯೇ ಇದ್ದ ನೃಸಿಂಹ ತೀರ್ಥ ಹೆಸರಿಗೆ ತಕ್ಕಂತೆ ಸರ್ವರಿಗೂ ಶುಭಪ್ರದವೆನ್ನಿಸಿತು. ವಿಜಯನಗರ ಸಾಮ್ರಾಜ್ಯದ ಮೂಡಬಾಗಿಲಿನಂತೆ ಶೋಭಿಸುತ್ತಿದ್ದ ಈ ಸ್ಥಳಕ್ಕೆ ಮುಳುಬಾಗಿಲು ಎನ್ನುವುದು ಅನ್ವರ್ಥನಾಮವಾಗಿತ್ತು. ಶ್ರೀಪಾದರಾಜರು ಇಲ್ಲಿ ನೆಲಸಿದ ಮೇಲೆ ಅದು ದ್ವೈತದರ್ಶನವನ್ನು ಕಲಿಸುವ ಪ್ರಮುಖ ಕೇಂದ್ರವೂ ಆಯಿತು. ದೇಶದ ನಾನಾ ಕಡೆ ಗಳಿಂದ ವಿದ್ಯಾಕಾಂಕ್ಷಿಗಳು ಇಲ್ಲಿಗೆ ಬಂದು ಶ್ರೀಪಾದರಾಜರ ಸಮ್ಮುಖದಲ್ಲಿ ಕುಳಿತು ವೇದಾಂತ ವಿದ್ಯೆಯನ್ನು ಕಲಿಯುತ್ತಿದ್ದರು.

ಈ ವೇಳೆಗೆ ಅಬ್ಬೂರಿನ ಶ್ರೀ ಬ್ರಹ್ಮಣ್ಯತೀರ್ಥರಿಂದ ಬಾಲ್ಯದಲ್ಲಿಯೇ ಸಂನ್ಯಾಸವನ್ನು ಪಡೆದ ಶ್ರೀ ವ್ಯಾಸತೀರ್ಥರು ಗುರುಸನ್ನಿಧ್ಯದಲ್ಲಿ ಸೇವಾತತ್ಪರರಾಗಿದ್ದರು ಶ್ರೀ ಬ್ರಹ್ಮಣ್ಯ ತೀರ್ಥರು ವೃಂದಾವನಸ್ಥರಾಗಲು ಆ ಮಠಾಧಿಪತ್ಯದ ಹೊಣೆಯನ್ನು ಹೊತ್ತುದಲ್ಲದೆ, ಸಂಸ್ಥಾನದ ಖ್ಯಾತಿಗೆ ತಕ್ಕಂತೆ ದೇಶಸಂಚಾರವನ್ನು ಕೈಕೊಂಡು ಪ್ರತಿವಾದಿಗಳನ್ನು ಗೆಲ್ಲುತ್ತ ದ್ವೈತಸಿದ್ಧಾಂತದ ಜಯಭೇರಿಯನ್ನೇ ಬಾರಿಸಿದರು. ಶ್ರೀ ವ್ಯಾಸತೀರ್ಥರು ಶ್ರೀಪಾದರಾಜರ ಬಳಿಯಲ್ಲಿ ಕೆಲವು ಕಾಲವಿದ್ದು ಮತ್ತಷ್ಟು ವ್ಯಾಸಂಗ ಮಾಡಬೇಕೆಂಬ ಅಭಿಲಾಷೆಯಿಂದ ಮುಳುಬಾಗಿಲಿಗೆ ಬಂದರು. ಈ ಉಭಯ ಯತಿವರೇಣ್ಯರ ಸಂದರ್ಶನ ಸಮಾವೇಶಗಳು ಅಪೂರ್ವ ರಮಣೀಯವೇ ಸರಿ ಅವರಿಬ್ಬರ ಪ್ರೀತಿ ವಿಶ್ವಾಸಗಳನ್ನಾಗಲಿ, ಗುರು-ಶಿಷ್ಯ ಬಾಂಧವ್ಯವನ್ನಾಗಲಿ ಹೇಳತೀರದು. ಶ್ರೀ ವ್ಯಾಸರಾಯರು ಶ್ರೀಪಾದ ರಾಜರನ್ನು ಕುರಿತು ರಚಿಸಿರುವ ಎರಡು ಕೀರ್ತನೆಗಳೂ, ಸಂಸ್ಕೃತದ ಪಂಚರತ್ನಮಾಲಿಕೆ ಯೆಂಬ ಸ್ತುತಿಯೂ ಆ ಗುರು ಸಾರ್ವಭೌಮರ ಬಗ್ಗೆ ನಮಗೆ ಸಮಕಾಲೀನ ಸಾಕ್ಷಿಗಳಾಗಿವೆ. ಶ್ರೀ ವ್ಯಾಸರಾಯರು ತಮ್ಮ ಗುರುಗಳ ವಿದ್ಯಾಪ್ರೌಢಿಮೆಯನ್ನು ಕುರಿತು ಹೀಗೆ ಹಾಡಿರು ತ್ತಾರೆ :

ವಾದಿಗಜ ಮಸ್ತಕಾಂಕುಶ ಸುಜನ ಬುಧಗೇಯ
ಮೇದಿನೀಸುರವಂದ್ಯ ಶ್ರೀಪಾದರಾಯ ಪ.

ಸಕಲ ಶಾಸ್ತ್ರ ಕಲಾಪ ಸಂನ್ಯಾಸಕುಲದೀಪ
ಸಕಲ ಸತ್ಯಸ್ಥಾಪ ಸುಜ್ಞಾನದೀಪ
ಪ್ರಕಟ ಪಾವನರೂಪ ಅರಿಕುಜನಮತಲೋಪ
ನಿಕಟವರ್ಜಿತ ಪಾಪ ಕೀರ್ತಿಪ್ರತಾಪ ೧

ಹರಿಪದಾಂಬುಜಭೃಂಗ ಪರಮತಾಹಿ ವಿಹಂಗ
ಪರಮಸುಗುಣಾಂತರಂಗ ಭವದುರಿತಭಂಗ
ಶರಣ ಕೀರ್ತಿತರಂಗ ಶತ್ರುತಿಮಿರ ಪತಂಗ
ಶರಣು ಶುಭಚರಿತಾಂಗ ಷಟ್ಶಾಸ್ತ್ರಸಂಗ ೨

ಸಿರಿಕೃಷ್ಣ ದಿವ್ಯಪಾದಾಬ್ಜ ಚಿಂತಾಲೋಲ
ವರ ಹೇಮವರ್ಣ ಮುನಿಪತಿಯ ಸುಕುಮಾರ
ಗುರುತಿಲಕ ಶ್ರೀಪಾದರಾಯ ಅಮಿತೋದ್ಧಾರ
ಶರಣಜನ ಸುರಧೇನು ಭಕ್ತಮಂದಾರ ೩

ಪ್ರಕೃತ ಕೀರ್ತನೆಯಲ್ಲಿ ಶ್ರೀ ವ್ಯಾಸರಾಯರು ತಮ್ಮ 'ಗುರುತಿಲಕ'ರನ್ನು ಕುರಿತು ಹೇಳಿರುವ ವಿಶೇಷಣಗಳಿಂದ ಶ್ರೀಪಾದರಾಜರು ಅಂದಿನ ವೇದಾಂತ ಸಾಮ್ರಾಜ್ಯದಲ್ಲಿ ಎಂತಹ ಉನ್ನತವಾದ ಸ್ಥಾನವನ್ನು ಗಳಿಸಿದ್ದರೆನ್ನುವುದನ್ನು ನಾವು ಗ್ರಹಿಸಬಹುದು. ಎಲ್ಲ ಯತಿಗಳಂತೆಯೇ ಅವರು ಷಟ್ಶಾಸ್ತ್ರಸಂಪನ್ನರೂ, ಸಕಲಶಾಸ್ತ್ರ ಕಲಾಪರೂ, ವಾದಿಭಯಂಕರರೂ ಮತ್ತು ಕೀರ್ತಿಪ್ರತಾಪರೂ ಆಗಿದ್ದರು. ವೇದಪಾರಂಗತರಾದ ಅನೇಕ ಬ್ರಾಹ್ಮಣರಿಗೆ ಆಶ್ರಯದಾತರೆನ್ನಿಸಿದ್ದರು. ಇಷ್ಟೇ ಅಲ್ಲದೆ, ಶ್ರೀಪಾದರಾಜರು 'ಭಕ್ತಮಂದಾರ'ರೂ 'ಹರಿಪದಾಂಬುಜಭೃಂಗ'ರೂ 'ಸಿರಿಕೃಷ್ಣ ದಿವ್ಯಪಾದಾಬ್ಜ ಚಿಂತಾಲೋಲ'ರೂ ಆಗಿದ್ದರೆಂಬ ಹೇಳಿಕೆಯಲ್ಲಿ, ಅವರು ಕೈಕೊಂಡಿದ್ದ ಕೀರ್ತನ ಕೈಂಕರ್ಯದ ಮಹತ್ವವು ಅಡಕವಾಗಿದ್ದಂತಿದೆ. 'ಶರಣಕೀರ್ತಿತರಂಗ' ಮತ್ತು 'ಶರಣಜನ ಸುರಧೇನು' ಎಂಬ ವಿಶೇಷಣಗಳನ್ನು ಶ್ರೀವ್ಯಾಸರಾಯರು ಪಾರಿಭಾಷಿಕಾರ್ಥದಲ್ಲಿ ಪ್ರಯೋಗಿಸಿರಬಹುದೆಂದು ಭಾವಿಸಿದರೆ, ಆಗತಾನೆ ಮೊದಲಾಗಿದ್ದ 'ಹರಿಶರಣರ' ಇಲ್ಲವೇ 'ಹರಿದಾಸರ' ತಂಡಕ್ಕೆ ಪ್ರಮುಖರೂ, ಇಷ್ಟದಾತರೂ ಆಗಿದ್ದರೆಂದು ಊಹಿಸಲವಕಾಶವಿದೆ. ಈ ವಿವರಗಳ ಜೊತೆಗೆ ಶ್ರೀಪಾದರಾಜರ ದೀಕ್ಷಾಗುರುಗಳಾದ ಹೇಮವರ್ಣರ ಹೆಸರನ್ನು ಹೇಳಿರುವುದು ತುಂಬ ಮುಖ್ಯವಾದುದು. ಶ್ರೀಪಾದರಾಜರು ತಾವಾಗಿ ತಮ್ಮ ದೀಕ್ಷಾಗುರುಗಳಾದ ಸ್ವರ್ಣವರ್ಣತೀರ್ಥರನ್ನಾಗಲಿ, ವಿದ್ಯಾಗುರುಗಳಾದ ವಿಬುಧೇಂದ್ರತೀರ್ಥರನ್ನಾಗಲಿ ಸ್ತುತಿಸಿರುವ ರಚನೆಗಳು ಈವರೆಗೆ ನಮ್ಮ ಗಮನಕ್ಕೆ ಬಂದಿಲ್ಲ. ಆದ್ದರಿಂದ, ಶ್ರೀ ವ್ಯಾಸರಾಯರ ಈ ಹೇಳಿಕೆ ತುಂಬ ಅಮೂಲ್ಯವಾದದ್ದು.

ಶ್ರೀ ವ್ಯಾಸರಾಯರು ಶ್ರೀಪಾದರಾಜರನ್ನು ಸ್ತುತಿಸುವ ಮತ್ತೊಂದು ಕೀರ್ತನೆ ಈ ರೀತಿಯಿದೆ :

ಮಹಿಮೆ ಸಾಲದೆ, ಇಷ್ಟೇ ಮಹಿಮೆ ಸಾಲದೆ ಪ.

ಅತಿಶಯನನ ಒಲುಮೆಯಿಂದ। ಮಹಿಯೊಳೊಪ್ಪ ಶ್ರೀಪಾದರಾಯರ ಅ.ಪ.

ಮುತ್ತಿನ ಕವಚ ಮೇಲ್ಕುಲಾವಿ। ರತ್ನ ಕೆತ್ತಿದ ಕರ್ಣಕುಂಡಲ।
ಕಸ್ತೂರಿ ತಿಲಕ ಶ್ರೀಗಂಧಲೇಪನ। ವಿಸ್ತಾರದಿಂದ ಮೆರೆದು ಬರುವ ೧

ವಿಪ್ರಹತ್ಯದೋಷ ಬರಲು। ಕ್ಷಿಪ್ರಶಂಖೋದಕದಿ ಕಳೆಯೆ।
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ। ಕಪ್ಪು ವಸನವ ಶುಭ್ರ ಮಾಡಿದ ೨

ಹರಿಗೆ ಸಮರ್ಪಿಸಿದ ನಾನಾ। ಪರಿಯ ಶಾಕಗಳನು ಭುಂಜಿಸೆ।
ನರರು ನಗಲು ಶ್ರೀಶಕೃಷ್ಣನ। ಕರುಣದಿಂದ ಹಸಿಯ ತೋರಿದ ೩

ಶ್ರೀಪಾದರಾಜರು ಎಂತಹ ಸಿದ್ಧಪುರುಷರೆಂಬುದನ್ನು ಸಮರ್ಥಿಸುವುದೇ ಈ ಕೀರ್ತನೆಯ ಗುರಿಯೆನ್ನಬಹುದು ದಿನಕಳೆದಂತೆಲ್ಲ ಶ್ರೀಪಾದರಾಜರು ತಮ್ಮ ಹಲವಾರು ಮಹಿಮೆಗಳಿಂದ ಜನಕ್ಕೆ ಬೆರಗನ್ನುಂಟುಮಾಡಿದರು. ಅವರ ಆ ಪವಾಡಗಳನ್ನು ಕೆಲವರು ಹಂಗಿಸಿದ್ದೂ ಉಂಟು. ಆಗ ಶ್ರೀ ವ್ಯಾಸರಾಯರು ಈ ರೀತಿ ತಮ್ಮ ಗುರುಗಳನ್ನು ಕೊಂಡಾಡಿರುವಂತೆ ಕಂಡುಬರುತ್ತದೆ. ಮುಳುಬಾಗಿಲಿನ ಪಾವಿತ್ರ್ಯವನ್ನು ಮನಗಂಡು ಅಲ್ಲಿಯೇ ನೆಲಸಿದ ಶ್ರೀಪಾದರಾಜರಿಗೆ ಅಲ್ಲಿಗೆ ಸಮೀಪದಲ್ಲಿದ್ದ ಸಾಳುವ ನರಸಿಂಹನು ರಾಜಮನ್ನಣೆಯನ್ನಿತ್ತು ಭಕ್ತಿಪೂರ್ವಕವಾಗಿ ಗೌರವಿಸಿದಂತೆ ತಿಳಿದುಬರುತ್ತದೆ. ಇದಕ್ಕೆ ಒಂದು ವಿಶೇಷ ಕಾರಣವೂ ಉಂಟು. ತಿರುಪತಿ ದೇವಸ್ಥಾನದ ಅರ್ಚಕನು ಅಂದಿನ ವಿಜಯನಗರದ ರಾಜಪ್ರತಿನಿಧಿಯಾದ ಸಾಳುವ ನರಸಿಂಹನನ್ನು ಅಲಕ್ಷಿಸಿ ಅಸಹನೀಯವಾದ ಕೆಲವು ದುಷ್ಕಾರ್ಯಗಳನ್ನು ಮಾಡಿದನು ದೇವಸ್ಥಾನದ ಪರಿಶುದ್ಧತೆಗೆ ವಿರುದ್ಧವಾಗಿ ವರ್ತಿಸಿದ ಆ ಅರ್ಚಕನನ್ನೂ ಮತ್ತು ಅವನ ಸಂತತಿಯನ್ನೂ ಸಾಳುವ ನರಸಿಂಹನು ಕುಪಿತನಾಗಿ ಸಂಹರಿಸಿದನೆಂದು ಪ್ರತೀತಿ. ಅನಂತರ ಆ ಬ್ರಹ್ಮಹತ್ಯಾದೋಷವನ್ನೂ ಹೇಗೆ ಪರಿಹಾರಮಾಡಿಕೊಳ್ಳುವುದೆಂದು ಅವನ ಮನಸ್ಸಿಗೆ ಬಹುಮಟ್ಟಿಗೆ ಬಾಧೆಯಾಯಿತು. ಈ ವೇಳೆಗೆ ಶ್ರೀಪಾದರಾಜರು, ಇಂತಹುದೇ ಒಂದು ಸಂದರ್ಭದಲ್ಲಿ ಬೇರೊಬ್ಬ ವ್ಯಕ್ತಿಗೆ ಸಂಭವಿಸಿದ್ದ ಬ್ರಹ್ಮಹತ್ಯಾದೋಷವನ್ನು ತಮ್ಮ ಶಂಖೋದಕದಿಂದ ಹೋಗಲಾಡಿಸಿದ್ದರು. ಆದನ್ನು ಕಂಡ ಕೆಲವು ಕುಹಕಿಗಳು 'ಶಂಖೋದಕದಿಂದ ಬ್ರಹ್ಮಹತ್ಯದಂತಹ ಮಹಾಪಾಪ ಪರಿಹಾರವಾಗುವುದುಂಟೆ ?' ಎಂದು ಹಂಗಿಸಿದರು. ಆಗ ಶ್ರೀಪಾದರಾಜರು ಆ ಕುಹಕಿಗಳನ್ನು ಬರಮಾಡಿಕೊಂಡು ಬಿಳಿಯ ಬಟ್ಟೆಯೊಂದನ್ನು ಗೇರೆಣ್ಣೆಯಲ್ಲಿ ಅದ್ದಿ ಆದರ ಕಪ್ಪನ್ನು ಹೋಗಲಾಡಿಸುವಂತೆ

ಅವರಿಗೆ ಸವಾಲು ಹಾಕಿದರು. ಕುಹಕಿಗಳಿಗೆ ಅದು ಸಾಧ್ಯವಾಗಲಿಲ್ಲ. ಆಗ ಶ್ರೀಗಳವರು ತಮ್ಮ ಶಂಖೋದಕವನ್ನು ಮಂತ್ರಪುರಸ್ಸರವಾಗಿ ಆ ಬಟ್ಟೆಯ ಮೇಲೆ ಪ್ರೋಕ್ಷಿಸಿದರು. ಕೂಡಲೆ ಅದು ಮೊದಲಿನಂತೆಯೇ ಶುಭ್ರವಸ್ತ್ರವಾಯಿತು. ಕುಹಕಿಗಳು ಕಂಗೆಟ್ಟು ತಮ್ಮ ಅಪಚಾರವನ್ನು ಕ್ಷಮಿಸಬೇಕೆಂದು ಕೋರಿ ಶ್ರೀಗಳವರಲ್ಲಿ ಶರಣಾದರು. ಈ ಸಂಗತಿ ಸುತ್ತುಮುತ್ತಲೂ ವ್ಯಾಪಿಸಿ, ಬ್ರಹ್ಮಹತ್ಯಾದೋಷದಿಂದ ಮನನೊಂದಿದ್ದ ಸಾಳುವ ನರಸಿಂಹನಿಗೂ ತಿಳಿಯಿತು. ಆತನು ಶ್ರೀಪಾದಂಗಳವರನ್ನು ಕಂಡು ಅವರಿಗೆ ತನ್ನ ಮನೋಯಾತನೆಯನ್ನೆಲ್ಲ ವಿವರಿಸಿದನು. 'ಪರಮಸುಗುಣಾಂತರಂಗ'ರೂ 'ಭವದುರಿತ ಭಂಗ'ರೂ ಆದ ಶ್ರೀಪಾದರಾಜರು ಆ ಮಂಡಲಾಧಿಪತಿಗೆ ಸಮಾಧಾನ ಹೇಳಿ, ಅವನ ಭೀತಿಯನ್ನು ಹೋಗಲಾಡಿಸಿ, ಉದ್ಧರಿಸಿದರು. ಶ್ರೀಗಳವರ ಆ ಕೃಪೆಗೆ ಪ್ರತಿಯಾಗಿ ಆ ಮಂಡಲಾಧಿಪತಿಯು ಅವರನ್ನು ತನ್ನ ಅಧಿಕಾರ ಪೀಠದಲ್ಲಿಯೇ ಕೂಡಿಸಿ ಸಮಸ್ತ ರಾಜಮರ್ಯಾದೆಗಳಿಂದ ಸನ್ಮಾನಿಸಿದನು ಶ್ರೀ ವ್ಯಾಸರಾಯರು ತಮ್ಮ ಗುರುಗಳ ಜೀವನದಲ್ಲಿ ನಡೆದ ಈ ಎರಡು ಪ್ರಮುಖ ಸಂಗತಿಗಳನ್ನೂ ತಮ್ಮ ಈ ಕೀರ್ತನೆಯ ಮೊದಲಿನ ಎರಡು ನುಡಿಗಳಲ್ಲಿ ಹೇಳಿ ಮಹೋಪಕಾರ ಮಾಡಿರುತ್ತಾರೆ. ಶ್ರೀ ವ್ಯಾಸರಾಯರು ತಮ್ಮ 'ಪಂಚರತ್ನಮಾಲಿಕೆ'ಯಲ್ಲಿಯೂ ಶ್ರೀಪಾದರಾಜರ ರಾಜವೈಭವವನ್ನು ಮತ್ತೊಮ್ಮೆ ಹೀಗೆ ಮೆಚ್ಚಿರುತ್ತಾರೆ .

ಬಿಭ್ರಾಣಂ ಕ್ಷೌಮವಾಸಃ ಕರಧೃತವಲಯಂ ಹಾರ ಕೇಯೂರ ಕಾಂಚೀ
ಗ್ರೈವೇಯ ಸ್ವರ್ಣಮಾಲಾ ಮಣಿಗಣಖಚಿತಾನೇಕ ಭೂಷಾಪ್ರಕರ್ಷಮ್
ಭುಂಜಾನಂ ಷಷ್ಟಿಶಾಕಂ ಹಯಗಜ ಶಿಬಿಕಾನರ್ಘ್ಯ ಶಯ್ಯಾರಥಾಢ್ಯಂ
ವಂದೇ ಶ್ರೀಪಾದರಾಜಂ ತ್ರಿಭುವನ ವಿದಿತಂ ಘೋರದಾರಿದ್ರ್ಯಶಾಂತ್ಯೈ

ಶ್ರೀಪಾದರಾಜರ ಮಠದ ಯತಿಪರಂಪರೆಗೆ ಸೇರಿದ ಶ್ರೀನಿಧಿತೀರ್ಥರು ತಮ್ಮ 'ಶ್ರೀಪಾದರಾಜಾಷ್ಟಕ'ದಲ್ಲಿ ಈ ಘಟನೆಯನ್ನು ಸುಸ್ಪಷ್ಟವಾಗಿ ಇಂತು ಚಿತ್ರಿಸಿರುತ್ತಾರೆ;

ನಮ್ಯದ್ವೀರ ನೃಸಿಂಹನಾಮ ನೃಪತೇರ್ಭೂದೇವಹತ್ಯಾ ವ್ಯಥಾಂ
ದೂರೀಕೃತ್ಯ ತದರ್ಪಿತೋಜ್ವಲಮಹಃ ಸಿಂಹಾಸನೇ ಸಂಸ್ಥಿತಃ
ಸೇವ್ಯೋ ಪೂರ್ವಕವಾಟನಾಮಕಪುರೇ ಸರ್ವೇಷ್ಟಸಿದ್ಧಿಪ್ರದಃ
ಸಃ ಶ್ರೀಪಾದಯತೀಶ್ವರಃ ಪ್ರತಿದಿನಂ ಭೂಯಾತ್ಬಹು ಶ್ರೇಯಸೇ

ಶ್ರೀ ವ್ಯಾಸರಾಯರು ತಮ್ಮ ಕೀರ್ತನೆಯ ಮೂರನೆಯ ನುಡಿಯಲ್ಲಿ ವರ್ಣಿಸಿರುವ ವೃತ್ತಾಂತವೂ ಇಷ್ಟೇ ಆಶ್ಚರ್ಯಪ್ರದವಾದುದು. ಶ್ರೀಪಾದರಾಜರು ದೈವಕೃಪೆಯಿಂದ ಸುಖಪ್ರಾರಬ್ಧದ ವರ್ಗಕ್ಕೆ ಸೇರಿದವರು. ಅವರು ಎಲ್ಲಿಯೇ ಇರಲಿ, ಪ್ರತಿನಿತ್ಯವೂ ಅಭ್ಯಂಗನವನ್ನು ಮಾಡಿಕೊಂಡು, ಅರುವತ್ತು ಬಗೆಯ ಶಾಕಾಹಾರವನ್ನು ಹರಿಗೆ ನಿವೇದಿಸಿ ತಾವೂ ಸೇವಿಸುತ್ತಿದ್ದರು. ಇದನ್ನು ಕಂಡ ಕೆಲವು ಅಸೂಯಾಪರರು 'ಸಂನ್ಯಾಸಿಗಳಿಗೂ ಈ ಸುಖಭೋಗಗಳಿಗೂ ಎಲ್ಲಿಂದೆಲ್ಲಿಗೆ ಸಂಬಂಧ' ಎಂದು ಅಲ್ಲಗಳೆ

ದರು. ಆಗ ಶ್ರೀಪಾದರಾಜರು ತಾವು ತಿಂದ ಆಹಾರವನ್ನೆಲ್ಲ ಆ ಅಸೂಯಾಪರರ ಎದುರಿಗೆ ಮತ್ತೆ ತೆಗೆದಿಡಲು ಆಗ ಅದು ಅವರಿಂದ ಭೋಜ್ಯವಾಗದೆ ಹಸಿಹಸಿಯಾಗಿ ಹಾಗೆಯೇ ಇತ್ತಂತೆ! ಮುಖ್ಯವಾಗಿ, ಶ್ರೀಪಾದರಾಜರ ಅನೇಕ ಮಹಿಮೆಗಳನ್ನು ಕಣ್ಣಾರೆ ಕಂಡ ಶ್ರೀ ವ್ಯಾಸರಾಯರು ಇವುಗಳನ್ನು ನಿರ್ದೇಶಿಸಿರುವುದರಿಂದ ಈ ಸಂಗತಿ ಗಳಿಗೆ ಬೆಲೆಯಿದೆ. ಈ ಗುರುಶಿಷ್ಯರ ಬಾಂಧವ್ಯವಂತೂ ಆದರ್ಶಪ್ರಾಯವಾದದ್ದು. ಶ್ರೀ ವ್ಯಾಸರಾಯರು ತಮ್ಮ ಗುರುಗಳ ಪಾಂಡಿತ್ಯ, ಪ್ರತಿಭೆ ಮತ್ತು ಪವಾಡಗಳನ್ನು ಮನವುಬ್ಬಿ ಹೊಗಳಿದ್ದರೆ, ಶ್ರೀಪಾದರಾಜರು ತಮ್ಮ ಶಿಷ್ಯರಾದ ವ್ಯಾಸರಾಯರನ್ನು ಕುರಿತು 'ಇದಿರದಾವನು ನಿನಗೀ ಧರೆಯೊಳು ಪದುಮನಾಭನ ದಾಸ ಪರಮೋಲ್ಲಾಸಾ' (ಕೀ. ೬), 'ಸಾಸಿರ ಜಿಹ್ವೆಗಳುಳ್ಳ ಶೇಷನೆ ಕೊಂಡಾಡಬೇಕು ವ್ಯಾಸಮುನಿರಾಯರ ಸಂನ್ಯಾಸದಿರವ' (ಕೀ. ೫೭) ಎಂದು ಹಿಗ್ಗಿನಿಂದ ಹಾಡಿರುತ್ತಾರೆ.

ಶ್ರೀಪಾದರಾಜರಿಗೆ ಶ್ರೀ ವ್ಯಾಸರಾಯರ ಮೇಲಿದ್ದ ಅಭಿಮಾನಕ್ಕೆ ಮತ್ತೊಂದು ಮುಖ್ಯ ಪ್ರಸಂಗವನ್ನು ಉದಾಹರಿಸಬಹುದು. ಒಮ್ಮೆ, ಶ್ರೀಗಳವರು ಕಾರಣಾಂತರ ದಿಂದ ತಮ್ಮ ಸಂಸ್ಥಾನದ ಪೂಜಾಕಾರ್ಯವನ್ನು ಮಾಡುವಂತೆ ಶ್ರೀ ವ್ಯಾಸರಾಯರಿಗೆ ಹೇಳಿದರು. ಶ್ರೀ ವ್ಯಾಸರಾಯರು ಸಂತೋಷದಿಂದ ಒಪ್ಪಿ ಪೂಜೆಗೆ ಕುಳಿತರು. ಪೂಜಾ ವಿಗ್ರಹಗಳನ್ನೆಲ್ಲ ಒಂದೊಂದನ್ನಾಗಿ ಅಣಿಗೊಳಿಸಿದರು ಅಲ್ಲಿದ್ದ ಸಂಪುಟಗಳಲ್ಲಿ ಒಂದರ ಮುಚ್ಚಳವನ್ನು ಅಂದಿನವರೆಗೆ ಯಾರೂ ತೆರೆದಿರಲಿಲ್ಲ. ಶ್ರೀ ವ್ಯಾಸರಾಯರು ಕ್ರಮವಾಗಿ ಅದನ್ನು ಕೈಗೆ ತೆಗೆದುಕೊಂಡು ಮುಚ್ಚಳವನ್ನು ಅನಾಯಾಸವಾಗಿ ತೆಗೆದರು. ಅದನ್ನು ತೆರೆದ ಕೂಡಲೆ ವೇಣುಗೋಪಾಲನು ಕೊಳಲನ್ನು ಬಾರಿಸುತ್ತ ಕುಣಿಯಲಾರಂಭಿಸಿ ದನು ಅದನ್ನು ಕಂಡು ಪುಳಕಿತರಾದ ಶ್ರೀ ವ್ಯಾಸರಾಯರು ಅಲ್ಲಿಯೇ ಇದ್ದ ಸಾಲಿಗ್ರಾಮ ಗಳನ್ನು ತಾಳಗಳಂತೆ ಬಡಿಯುತ್ತ, ಶ್ರೀಕೃಷ್ಣನೊಂದಿಗೆ ಮೈಮರೆತು ತಾವೂ ಕುಣಿಯು ಲಾರಂಭಿಸಿದರು. ಸುತ್ತಮುತ್ತಲಿದ್ದ ಮಠದ ಶಿಷ್ಯರೆಲ್ಲ ಇದನ್ನು ಕಂಡು ಬೆರಗಾದರು. ಶ್ರೀ ವ್ಯಾಸರಾಯರ ಪೂಜೆಯೇನೋ ತುಂಬ ಸೋಜಿಗವಾಗಿದೆಯೆಂದು ಎಣಿಸಿ, ಕೂಡಲೆ ಶ್ರೀಪಾದರಾಜರ ಬಳಿಗೆ ಹೋಗಿ ವಿಜ್ಞಾಪಿಸಿಕೊಂಡರು. ಶ್ರೀಪಾದರಾಜರು ಒಡನೆಯೇ ಪೂಜೆ ನಡೆಯುತ್ತಿದ್ದ ಎಡೆಗೆ ಬಂದರು ಆಗಲೂ ಶ್ರೀ ವ್ಯಾಸರಾಯರು ಅರಿವಿಲ್ಲದೆ ಕುಣಿಯುತ್ತಲೇ ಇದ್ದರು ಅವರ ಎದುರಿನಲ್ಲಿ ವೇಣುಗೋಪಾಲನು ನರ್ತಿಸುತ್ತಿದ್ದನಷ್ಟೆ. ಶ್ರೀಪಾದರಾಜರ ದೃಷ್ಟಿ ಅತ್ತ ಬೀಳುವುದೇ ತಡ, ಪರಮಾತ್ಮನು ಯಾವ ಭಂಗಿಯಲ್ಲಿ ತಾನು ನಿಂತಿದ್ದನೋ ಅದೇ ಭಂಗಿಯಲ್ಲಿ ನಿಂತನು. ಎಂದರೆ, ಬಲಗಡೆ ಕಾಲಿನ ಮೇಲೆ ಎಡಗಾಲನ್ನಿಟ್ಟು, ಆ ನಿಂತ ಭಂಗಿಯಲ್ಲಿಯೇ ಅಪೂರ್ವವಾದ ರೀತಿಯಲ್ಲಿ ನಿಂತನು. ಶ್ರೀಪಾದರಾಜರು ತಮ್ಮ ಶಿಷ್ಯರ ಮಹಾಭಾಗ್ಯಕ್ಕೆ ಮನಮೆಚ್ಚಿ 'ವ್ಯಾಸರಾಯರೆ! ನೀವು ಮಹಾಪುಣ್ಯವಂತರು. ಭೀಮಾನದಿಯ ತೀರದಲ್ಲಿ ದೊರೆತ ಈ ಎರಡು ಸಂಪುಟ ಗಳಲ್ಲಿ ಒಂದರಲ್ಲಿದ್ದ ರಂಗವಿಠಲನು ನಮಗೆ ಎಂದೋ ಅನುಗ್ರಹ ಮಾಡಿದನು. ಈ ಎರಡ ನೆಯ ಸಂಪುಟದಲ್ಲಿದ್ದ ವೇಣುಗೋಪಾಲನು ಈವರೆಗೂ ಯಾರಿಗೂ ಅನುಗ್ರಹಿಸದೆ

ಇಂದು ನಿಮ್ಮನ್ನು ಮನಸಾರೆ ಮೆಚ್ಚಿಕೊಂಡಿದ್ದಾನೆ. ಈ ಅಮೂಲ್ಯ ವಿಗ್ರಹವನ್ನು ನೀವೇ ತೆಗೆದುಕೊಳ್ಳಿ. ಆ ಪರಮಾತ್ಮನ ಸೇವೆಯನ್ನು ತಪ್ಪದಂತೆ ನಡೆಸಿಕೊಂಡು ಬನ್ನಿ' ಎಂದು ಅಭಯಪ್ರದಾನ ಮಾಡಿದರು. ಮುರಲೀಲೋಲನಾದ ಶ್ರೀಕೃಷ್ಣನನ್ನೂ ಮತ್ತು ತಮ್ಮ ಮರದ ಗೋಪೀನಾಥನನ್ನೂ ಶ್ರೀ ವ್ಯಾಸರಾಯರು ಪೂಜಿಸುತ್ತಿದ್ದ ಆ ಸಂದರ್ಭ ವನ್ನು ಕುರಿತು ಶ್ರೀಪಾದರಾಜರು ಒಂದು ಉಗಾಭೋಗವನ್ನೇ ಹಾಡಿರುವಂತಿದೆ (ಅನು ಬಂಧ ೪–ಉ ೩) ಶ್ರೀಪಾದರಾಜರು ತಮ್ಮ ಅಂಕಿತದೇವತೆಯಾದ ಶ್ರೀ ರಂಗವಿಠಲ ನನ್ನು ಪಂಢರಾಪುರದ ಭೀಮಾನದಿ ತೀರದಲ್ಲಿ ಪಡೆದದ್ದೇ ಒಂದು ಸೋಜಿಗ. ಅದರ ಅಂದವನ್ನೂ, ತಮಗೆ ಆದ ಆನಂದವನ್ನೂ ಒಂದು ಕೀರ್ತನೆಯಲ್ಲಿ ಬಹಳ ಚೆನ್ನಾಗಿ ವ್ಯಕ್ತ ಪಡಿಸಿದ್ದಾರೆ (ಅನುಬಂಧ ೪–ಕೀ. ೪) ಶ್ರೀಪಾದರಾಜರ ಜೀವನದಲ್ಲಿ ಇಂತಹ ಮಹಿಮೆ ಗಳು ಮೇಲಿಂದ ಮೇಲೆ ನಡೆದಿವೆ ಆದ್ದರಿಂದ, ಶ್ರೀ ವ್ಯಾಸರಾಯರು ಹೇಳಿರುವಂತೆ ಈ ಒಂದೆರಡನ್ನು ಪ್ರಸ್ತಾಪಿಸಿ 'ಮಹಿಮೆ ಸಾಲದೆ, ಇಷ್ಟೇ ಮಹಿಮೆ ಸಾಲದೆ' ಎಂದು ನಾವೂ ಬೆರಗಾಗಿ ವಿರಮಿಸುವುದು ಲೇಸು. ಪರಮ ವೈಷ್ಣವಭಕ್ತರಾದ ಇವರನ್ನು ಧ್ರುವಾಂಶರೆಂದು ಭಾವಿಸುವುದುಂಟು.

ಶ್ರೀಪಾದರಾಜರು ಇದೇ ರೀತಿಯಾಗಿ ಅತ್ಯಂತ ವೈಭವದಿಂದ ತಮ್ಮ ಸಂಸ್ಥಾನದ ಆಧಿಪತ್ಯವನ್ನು ನಿರ್ವಹಿಸಿಕೊಂಡು ದ್ವೈತಸಿದ್ಧಾಂತ ಸಾಮ್ರಾಜ್ಯದಲ್ಲಿ ಸುಪ್ರಸಿದ್ಧರಾಗಿ ದ್ದರು. ಒಂದು ದಿನ, ತಮ್ಮ ಶಿಷ್ಯರಿಗೆ ಪಾಠ ಹೇಳುತ್ತ ಕುಳಿತಿರುವಲ್ಲಿ ಮೇಲಿನಿಂದ ಪುಷ್ಪಗಳುದುರಿದುವು ಕತ್ತೆತ್ತಿ ನೋಡಿದಾಗ, ಅವರು ತಮಗೆ ಶ್ರೀಪಾದರಾಜರೆಂದು ಅಭಿಧಾನವಿತ್ತ ಶ್ರೀ ರಘುನಾಥತೀರ್ಥರು ವೈಕುಂಠಯಾತ್ರೆಯನ್ನು ಬೆಳಸಿದ್ದನ್ನು ಕಂಡರು. ಕೋಮಲ ಅಂತರಂಗವುಳ್ಳ ಅವರು ತಮಗೆ ಆ ಸುಕೃತ ಎಂದು ಲಭಿಸುವುದೆಂದು ಗುರುಗಳತ್ತ ಹಂಬಲಿಸಿ ದೃಷ್ಟಿ ಬೀರಲು, ಶ್ರೀ ರಘುನಾಥತೀರ್ಥರು ಅಲ್ಲಿಂದಲೇ ಸಂಜ್ಞೆ ಮಾಡಿ ತಿಳಿಸಿದರು. ಇದ್ದಕ್ಕಿದ್ದಂತೆ ಪಾಠವನ್ನು ನಿಲ್ಲಿಸಿ, ಗಗನದತ್ತಲೇ ನಿಟ್ಟಿಸುತ್ತಿದ್ದ ಗುರುಗಳನ್ನು ಕಂಡು, ಶಿಷ್ಯರೆಲ್ಲರೂ ಏನು ವೃತ್ತಾಂತವೆಂದು ಕೇಳಲು ಶ್ರೀಪಾದರಾಜರು ಸಮಸ್ತವನ್ನೂ ಅವರಿಗೆ ವಿವರಿಸಿದರು. ಶ್ರೀ ರಘುನಾಥತೀರ್ಥರು ಪರಂಧಾಮಕ್ಕೆ ತೆರಳಿದ ದಿನ ಮಾರ್ಗಶಿರ ಬಹುಳ ಪಾಡ್ಯಮಿಯಾದರೆ, ಶ್ರೀಪಾದರಾಜರು ಅಲ್ಲಿಂದ ಎರಡು ವರ್ಷ ಆರು ತಿಂಗಳುಗಳ ಬಳಿಕ, ಎಂದರೆ ಜ್ಯೇಷ್ಠ ಶುದ್ಧ ಚತುರ್ದಶಿಯಂದು ಶ್ರೀಹರಿಯ ಪಾದಾರವಿಂದವನ್ನು ಸೇರಿದರು. ಅವರ ವೃಂದಾವನವು ಕೋಲಾರ ಜಿಲ್ಲೆಯಲ್ಲಿರುವ ಮುಳುಬಾಗಿಲಿನಲ್ಲಿದೆ ಈ ಪವಿತ್ರ ಸ್ಥಳಕ್ಕೆ ಒಪ್ಪುವಂತೆ ನೃಸಿಂಹ ತೀರ್ಥವು ಇಂದಿಗೂ ಪುಣ್ಯಪ್ರದವೆನ್ನಿಸಿದೆ ಶ್ರೀಪಾದರಾಜರಿಗೆ ಗಂಗಾಮಾತೆ ಅಲ್ಲಿಯೇ ಕಂಡುಬಂದ ಸಂಗತಿ ಇಂದಿಗೂ ಪ್ರಚಲಿತವಾಗಿದೆ. ಈ ಪ್ರಶಾಂತ ಪ್ರದೇಶದಲ್ಲಿ ಒಂದು ಕಡೆ, ಶ್ರೀ ಅಕ್ಷೋಭ್ಯತೀರ್ಥರು ಅಂಗಾರದಲ್ಲಿಯೇ ಬರೆದ ಯೋಗಾನರಸಿಂಹದೇವರಿ ದ್ದರೆ, ಇನ್ನೊಂದು ಕಡೆ, ಶ್ರೀ ವ್ಯಾಸರಾಯರು ಪ್ರತಿಷ್ಠಿಸಿದ ಆಂಜನೇಯನ ವಿಗ್ರಹವಿದೆ. ಶ್ರೀ ವ್ಯಾಸರಾಯರು ತಮ್ಮ ವ್ಯಾಸಂಗ ಕಾಲದಲ್ಲಿ ಕೂಡುತ್ತಿದ್ದ ಪುಟ್ಟ ಗುಹೆಯೊಂದಿದೆ.

ಶ್ರೀಪಾದರಾಜರು ಭೌತಿಕ ದೇಹದಿಂದ ಮುಕ್ತರಾಗಿದ್ದರೂ, ಅವರ ತೇಜಃಪುಂಜವಾದ ಆತ್ಮಶಕ್ತಿ ಇಂದಿಗೂ ಈ ವೃಂದಾವನಸಾನ್ನಿಧ್ಯದಲ್ಲಿದೆಯೆಂದು ಜನಗಳ ದೃಢವಾದ ನಂಬಿಕೆ. ಈ ವೃಂದಾವನಕ್ಕೆ ಸೇವೆ ಸಲ್ಲಿಸಿದವರಿಗೆ ಸರ್ವ ಅಭೀಷ್ಟಗಳೂ ನೆರವೇರುವು ದೆಂಬುದಾಗಿ ಶ್ರೀ ವ್ಯಾಸರಾಯರೇ ಹೀಗೆ ಭರವಸೆಯಿತ್ತಿರುವರು :

ಯದ್ವೃಂದಾವನ ಸೇವಯಾ ಸುವಿಮಲಾಂ ವಿದ್ಯಾನ್ ಪಶೂನ್ ಸಂತತಿಂ
ಧ್ಯಾನ ಜ್ಞಾನಮನಲ್ಪ ಕೀರ್ತಿನಿವಹಂ ಪ್ರಾಪ್ನೋತಿ ಸೌಖ್ಯಂ ಜನಃ
ವಂದೇ ನರಸಿಂಹತೀರ್ಥನಿಲಯಂ ಶ್ರೀವ್ಯಾಸರಾಟ್ ಪೂಜಿತಂ
ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಂ

ಶ್ರೀ ವಿಜಯದಾಸರು ಶ್ರೀಪಾದರಾಜರ ಅನುಗ್ರಹವು ಎಷ್ಟು ಮಂಗಳಪ್ರದವೆಂಬು ದನ್ನು ಹೀಗೆ ನಿರೂಪಿಸಿದ್ದಾರೆ·

ಇವರ ಪ್ರಸಾದವಾದರೆ ವ್ಯಾಸಮುನಿರಾಯ
ಕವಿರಾಯ ಪುರಂದರದಾಸರು ಮಿಗಿಲಾ
ದವರ ಕರುಣವಿನ್ನು ಸಿದ್ಧಿಸುವುದು ಕೇಳಿ
ನವಭಕುತಿ ಪುಟ್ಟುವುದು ವ್ಯಕ್ತವಾಗಿ
ತವಕದಿಂದಲಿ ಚರಮದೇಹವೆ ಬರುವುದು
ದಿವಿಜರು ಒಲಿದು ಸತ್ಕರ್ಮ ಮಾಡಿಸುವರು
ಕವಿನುತ ನಮ್ಮ ವಿಜಯವಿಠಲರೇಯ
ದಿವಾರಾತ್ರಿಗಳಲಿ ಅವರ ಕೂಡಾಡುವ.

ನರಕ ನರಕದಲ್ಲಿ ಹೊರಳುವ ಮನುಜನೆ
ಧರೆಯೊಳಿವರ ಚರಿತೆ ಅದುಭುತ ಒಂದೊಂದು
ನಿರುತದಲ್ಲಿ ನೋಡು ತುಂಬಿ ಸೂಸುತಲಿದೆ
ಅರುಣೋದಯದಲೆದ್ದು ಶ್ರೀಪಾದರಾಯರ
ಸ್ಮರಿಸಿದ ಮಾನವನಿಗೆ ಸರ್ವಸಂಪದವು
ಪರಗತಿಯಾಗುವುದು ಪರಿಹಾಸವಲ್ಲ ಕೇಳು
ಸುರಭೂಸುರಪ್ರಿಯ ವಿಜಯವಿಠ್ಠಲನು
ಕರುಣದಿಂದಲಿ ಮಹಾ ಉನ್ನತ ಪದವೀವ.

ಹೀಗೆ ಶ್ರೀಪಾದರಾಜರು ಚನ್ನಪಟ್ಟಣದ ಅಬ್ಬೂರಿನಲ್ಲಿ ಜನಿಸಿ, ಬಾಲ್ಯವನ್ನು ಕಳೆದು, ಶ್ರೀರಂಗಕ್ಷೇತ್ರದಲ್ಲಿ ಸ್ವರ್ಣವರ್ಣತೀರ್ಥರಿಂದ ಸಂನ್ಯಾಸವನ್ನು ಸ್ವೀಕರಿಸಿ, ಹಲವು ಕಾಲ ಅಲ್ಲಿದ್ದು, ಆ ಮಠದ ಅಧಿಕಾರವನ್ನು ವಹಿಸಿಕೊಂಡ ಬಳಿಕ ಮುಳು ಬಾಗಿಲಿಗೆ ಬಂದು ಅಲ್ಲಿ ಕಡೆಯವರೆಗೂ ನೆಲೆಯಾಗಿ ನಿಂತರು. ಶ್ರೀಗಳವರು ಕೇವಲ ಆರು ವರ್ಷಗಳಿಗೇ ಸಂನ್ಯಾಸವನ್ನು ಸ್ವೀಕರಿಸಿ, ಸುಮಾರು ತೊಂಬತ್ತೆಂಟು ವರ್ಷಗಳ ಕಾಲ ಜೀವಿಸಿದ್ದು ( ಕ್ರಿ. ಶ. ೧೪೦೪-ಕ್ರಿ. ಶ. ೧೫೦೨), ಬಹು ದೀರ್ಘಕಾಲ ಮಠದ

ಆಧಿಪತ್ಯವನ್ನು ವಹಿಸಿಕೊಂಡು ಅದರ ಪುರೋಭಿವೃದ್ಧಿಗೆ ಕಾರಣರಾದರು. ಪದ್ಮನಾಭ ತೀರ್ಥರಿಂದ ಮೊದಲಾದ ಈ ಮಠದ ಪರಂಪರೆಯಲ್ಲಿ ಶ್ರೀಪಾದರಾಜರಂಥ ಮಹಿಮರು ಪೀಠಾರೋಹಣ ಮಾಡಿದ ಬಳಿಕ, ಆ ಸಂಸ್ಥಾನಕ್ಕೆ ಶ್ರೀಪಾದರಾಜರ ಮಠವೆಂದೂ, ಇಲ್ಲವೇ ಮುಳುಬಾಗಿಲಿನ ಮಠವೆಂದೂ ಹೆಸರಾಯಿತು. ಅಲ್ಲಿಂದ ಇಲ್ಲಿಯ ವರೆಗೆ ಅನೇಕ ಯತಿಶ್ರೇಷ್ಠರು ಈ ಪೀಠವನ್ನು ಅಲಂಕರಿಸಿರುತ್ತಾರೆ. ಈಗ ಸಂಸ್ಥಾನಾಧಿಪತ್ಯವನ್ನು ವಹಿಸಿರುವ ಶ್ರೀ ಸತ್ಯನಿಧಿತೀರ್ಥರು ಈ ಪೀಳಿಗೆಯಲ್ಲಿ ಮೂವತ್ತೆರಡನೆಯವರಾಗಿ ದ್ದಾರೆ [1]

## ೨. ಕೃತಿಗಳ ಅವಲೋಕನ

ಶ್ರೀಪಾದರಾಜರು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಬಲ್ಲಿದರಾಗಿದ್ದರು. ಅವರು 'ವಾಗ್ವಜ್ರ'ವೆಂಬ ಸಂಸ್ಕೃತ ಗ್ರಂಥವನ್ನು ರಚಿಸಿದುದಾಗಿ ತಿಳಿದುಬರುತ್ತದೆ. ಈ ಗ್ರಂಥವು ಈವರೆಗೆ ಸಮಗ್ರವಾಗಿ ಮುದ್ರಣವಾಗಿಲ್ಲ*. ಶ್ರೀಪಾದರಾಜಮಠದವರು ಮುದ್ರಿಸಿರುವ 'ಶ್ರೀಪಾದರಾಜಚರಿತಾಮೃತ'ದಲ್ಲಿ ಈ ಗ್ರಂಥದ ಒಂದು ಭಾಗವನ್ನು ಉಲ್ಲೇಖಿಸಿ ಬಹು ಸಂಕ್ಷಿಪ್ತವಾಗಿ ಪರಿಚಯಮಾಡಿಕೊಟ್ಟಿರುತ್ತಾರೆ. ಟೀಕಾಚಾರ್ಯರ 'ಸುಧಾ' ಮೊದಲಾದ ಸಿದ್ಧಾಂತ ಗ್ರಂಥಗಳನ್ನು ಅವಲಂಬಿಸಿ ಬರೆದುದಾಗಿ ತಿಳಿಸಿರುತ್ತಾರೆ. ಇಲ್ಲಿ ಉಲ್ಲೇಖಿಸಿರುವ ಉಪಕ್ರಮಭಾಗದೊಂದಿಗೆ ಶ್ರೀಪಾದರಾಜರ ಹೆಸರನ್ನು ಸೂಚಿಸುವ ಗ್ರಂಥಭಾಗವನ್ನೂ ಉದಾಹರಿಸಿದ್ದರೆ ಚೆನ್ನಾಗಿತ್ತು.[2] ಈ ಗ್ರಂಥವನ್ನು ಕುರಿತು ಪ್ರಸ್ತಾಪಿಸುತ್ತಾ ಡಾ. ಬಿ. ಎನ್. ಕೃಷ್ಣಮೂರ್ತಿಶರ್ಮ ಅವರು, ಮೈಸೂರಿನ 'ಪ್ರಾಚ್ಯಪುಸ್ತಕ ಭಂಡಾರ'ದಲ್ಲಿರುವ ಇದೇ ಹೆಸರಿನ ಒಂದು ಕೃತಿಯನ್ನು ಅವಲಂಬಿಸಿ, "ಈ ಗ್ರಂಥದ ಹೆಸರು 'ವಾಗ್ವಜ್ರ' ಅಥವಾ 'ನ್ಯಾಯಸುಧೋಪನ್ಯಾಸ ವಾಗ್ವಜ್ರ' ಇದು ೩೫೦೦ ಶ್ಲೋಕ ಗಳುಳ್ಳ ಸುಸ್ಪಷ್ಟವಾದ ಮತ್ತು ಚಿತ್ತಾಕರ್ಷಕವಾದ ಒಂದು ವ್ಯಾಖ್ಯಾನಗ್ರಂಥ. ವಿಚಾರ ಪ್ರತಿಪಾದನೆ ಪರಿಪೂರ್ಣವಾಗಿದೆ. ಶೈಲಿ ಮನೋಹರವಾಗಿದೆ. ಗ್ರಂಥಕರ್ತೃವು ಅನೇಕ ಕಡೆಗಳಲ್ಲಿ 'ನ್ಯಾಯಸುಧಾ' ಗ್ರಂಥದಿಂದ ಒಟ್ಟೊಟ್ಟಿಗೆ ಭಾಗಗಳನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ. ಅನೇಕ ರೀತಿಗಳಲ್ಲಿ ಇಷ್ಟು ಆಕರ್ಷಕವಾಗಿದ್ದರೂ ಇದು ಸಾಂಪ್ರದಾಯಿಕ ವರ್ಗದಲ್ಲಿ ಹೆಚ್ಚು ಪ್ರಚಲಿತವಾಗಿಲ್ಲ. ಪರಂಪರಾನುಗತಿಕವಾಗಿ ಇದು ಶ್ರೀಪಾದರಾಜರ ದೆಂದು ಹೇಳುವುದನ್ನೂ ಸಹ ಕೆಲವರು ಶಂಕಿಸುವುದುಂಟು" ಎಂದು ಅಭಿಪ್ರಾಯ ಪಟ್ಟಿರುತ್ತಾರೆ.[3]

---

[1] ನೋಡಿ : ಶ್ರೀಪಾದರಾಜಚರಿತಾಮೃತಂ, ೧೯೬೫, ಪು ೬೪.

[2] ಅದೇ, ಪು. ೪೮-೫೧.

[3] *A History of the Dvaita School of Vedanta and Its Literature*, Vol. II, 1961, pp. 251-252.

ಪ್ರಕೃತ ಗ್ರಂಥವು ಕಾಗದದ ಹಸ್ತಪ್ರತಿ (C 1560). ಇದರಲ್ಲಿ ೧೫೪ ಪುಟಗಳಿವೆ. ದೇವನಾಗರಿ ಲಿಪಿಯಲ್ಲಿ ಬರೆದಿದೆ. ಗ್ರಂಥದ ಮೇಲ್ಭಾಗದಲ್ಲಿ ಇದು ಶ್ರೀಪಾದರಾಜಕೃತವೆಂದು ಇದನ್ನು ನಕಲು

ಶ್ರೀಪಾದರಾಜರು ರಚಿಸಿರುವ ಕನ್ನಡ ಕೃತಿಗಳಂತೂ ಈವರೆಗೆ ಉಳಿದುಕೊಂಡು ಬಂದಿರುವುದು ನಮ್ಮ ಭಾಗ್ಯವೇ ಸರಿ. ಶ್ರೀಪಾದರಾಜರು ಪೂಜೆಯ ಕಾಲದಲ್ಲಿ ದೇವರನ್ನು ಸ್ತುತಿಸುವುದಕ್ಕಾಗಿ ಒಂದು ಭಜನಮಂಡಲಿಯನ್ನು ಏರ್ಪಡಿಸಿ ಆ ಮೂಲಕ ಈ ಕೃತಿಗಳನ್ನು ಪ್ರಚಾರಕ್ಕೆ ತಂದರೆಂದು ಪ್ರತೀತಿ. ಆವರೆಗೆ ಯಾವ ಮಾಧ್ವಮಠದಲ್ಲಿಯೂ ಕಂಡುಬಾರದ ಈ ಒಂದು ಹೊಸ ಪದ್ಧತಿಯನ್ನು ಅವರೇ ಏರ್ಪಡಿಸಿದರೆಂದು ತಿಳಿದು ಬರುತ್ತದೆ. ಎಷ್ಟೋ ವೇಳೆ, ತಾವೂ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಈ ಭಾಗವತ ಸಮೂಹದೊಂದಿಗೆ ಕುಣಿಯುತ್ತ ಭಗವಂತನನ್ನು ಕೊಂಡಾಡುತ್ತಿದ್ದರೆಂದು ಹೇಳುವುದುಂಟು. ಮುಖ್ಯವಾಗಿ, ಈ ರಚನೆಗಳು ಕನ್ನಡ ಹರಿದಾಸ ಸಾಹಿತ್ಯಕ್ಕೆ ಅಪೂರ್ವವಾದ ಕೊಡುಗೆಯಾಗಿರುವುದರಿಂದ ಇವುಗಳಿಗೆ ವಿಶೇಷವಾದ ಪ್ರಾಶಸ್ತ್ಯವುಂಟು. ಮುಂದಿನ ಪರಂಪರೆಯ ಮೇಲೆ ಇವು ಎಂಥ ಪ್ರಭಾವವನ್ನು ಬೀರಿರಬಹುದೆಂಬುದನ್ನು ಪರಿಶೀಲಿಸಬಹುದು. ಶ್ರೀಪಾದರಾಜರು ತಮ್ಮ ಅಂತರಂಗಿಕವಾದ ಭಕ್ತಿಯ ವಿವಿಧ ಮುಖಗಳನ್ನು ಇಲ್ಲಿ ಹೃದಯ ತುಂಬಿ ಹಾಡಿರುತ್ತಾರೆ. ಈ ಕೀರ್ತನ ಸಮುದಾಯದಲ್ಲಿ ಅವರ ಆತ್ಮಶೋಧನೆ, ಭಗವಂತನ ಆರಾಧನೆ, ದ್ವೈತಮತದ ತತ್ತ್ವಪ್ರತಿಪಾದನೆ ಮತ್ತು ಲೋಕನೀತಿಗಳು ಕಂಡುಬರುತ್ತವೆ. ಇವುಗಳ ಸ್ವರೂಪವನ್ನೂ ಕನ್ನಡ ಭಕ್ತಿಸಾಹಿತ್ಯದ ಈ ಪ್ರಕಾರದ ವೈವಿಧ್ಯ ವೈಶಿಷ್ಟ್ಯಗಳನ್ನೂ ವಿಹಂಗಮಾವಲೋಕನಕ್ರಮವನ್ನು ಅನುಸರಿಸಿ ಇಲ್ಲಿ ವಿಚಾರ ಮಾಡಲಾಗಿದೆ.

## ಆತ್ಮಶೋಧನೆ

ಭಕ್ತಿಸಾಹಿತ್ಯದಲ್ಲಿ ಭಕ್ತನ ಆತ್ಮಶೋಧನೆ ಪ್ರಮುಖ ಪಾತ್ರವಾದ್ದರಿಂದ ಆತನ ಆತ್ಮಾನುಭವಕ್ಕೆ ಅಗ್ರಸ್ಥಾನ ಸಲ್ಲುತ್ತದೆ. ಮೊದಲು ಭಕ್ತನಾದವನು ತನ್ನ ಸುಖದುಃಖಗಳನ್ನೆಲ್ಲ ಭಗವಂತನಲ್ಲಿ ನಿವೇದಿಸಿಕೊಂಡು, ಪಶ್ಚಾತ್ತಾಪದ ಮೂಲಕ ಪರಿಶುದ್ಧನಾಗಿ

---

ಮಾಡಿದವರು ಬರೆದಿರುವಂತಿದೆ ಏಕೆಂದರೆ ಗ್ರಂಥದ ಒಳಗಡೆ ಎಲ್ಲಿಯೂ ಶ್ರೀಪಾದರಾಜರ ಹೆಸರನ್ನು ಸೂಚಿಸಿಲ್ಲ ಪ್ರಾರಂಭದಲ್ಲಿ 'ಶ್ರೀಮನ್ನ್ಯಾಯಸುಧಾಗ್ರಂಥಾತ್ ಕ್ರಿಯತೇತ್ವರ್ಥ ಸಂಗ್ರಹಃ । ವಾಗ್ವಜ್ರಾಖ್ಯ ಮಹಾಗ್ರಂಥಂ ನಿರ್ಮಾತುಂ ತರ್ಕಸಂಗ್ರಹಮ್' ಎಂದೂ, ಅಂತ್ಯದಲ್ಲಿ 'ಅವಧಾನಿ ಕುಲೋತ್ಪನ್ನ ಶ್ರೀಮಾಚಾರ್ಯಣುಸೂನುನಾ । ಶ್ರೀಮತ್ಕುಲೇನಲಿಖಿತಂ ವಾಗ್ವಜ್ರಸ್ಯತು ಪುಸ್ತಕಮ್' ಎಂದೂ ನಿರೂಪಿಸಲಾಗಿದೆ. ಆದ್ದರಿಂದ, ಈ ಗ್ರಂಥವನ್ನು ಅವಧಾನಿಕುಲೋತ್ಪನ್ನರಾದ ಶ್ರೀಮಾಚಾರ್ಯರ ಕನಿಷ್ಠಪುತ್ರರು ಬರೆದರೆಂದೋ ಇಲ್ಲವೇ ನಕಲುಮಾಡಿದರೆಂದೋ ಹೇಳಬೇಕಾಗುತ್ತದೆ—ಟೀಕಾಚಾರ್ಯರ ಶ್ರೀಮನ್ನ್ಯಾಯಸುಧಾ ಗ್ರಂಥದಿಂದ ಕೆಲವು ಭಾಗಗಳನ್ನು ಆರಿಸಿಕೊಂಡು ವ್ಯಾಖ್ಯಾನ ಬರೆಯಲಾಗಿದೆ ಗ್ರಂಥವು ಬಹುಮಟ್ಟಿಗೆ ಗದ್ಯದಲ್ಲಿಯೇ ಇದ್ದು ವಿರಳವಾಗಿ ಶ್ಲೋಕಗಳು ಬರುತ್ತವೆ ಪದ್ಯಕ್ಕೆ ಹೆಸರೊಂದನ್ನು ಬಿಟ್ಟರೆ, ಇದು ಶ್ರೀಪಾದರಾಜಕೃತವೆಂದು ಖಚಿತವಾಗಿ ಹೇಳಲು ಆಂತರಿಕ ಪ್ರಮಾಣಗಳೇನೂ ಅಲ್ಲ (ಈ ವಿಷಯವನ್ನು ಸಂಗ್ರಹಿಸುವಲ್ಲಿ ನನಗೆ ನೆರವಾದ ಶ್ರೀ ಆರ್ ಜಿ ಮಾಳಗಿ ಅವರಿಗೂ ಗ್ರಂಥವನ್ನು ಅವಲೋಕಿಸಲು ಅವಕಾಶವಿತ್ತ ಪುಸ್ತಕ ಭಂಡಾರದ ಮುಖ್ಯಾಧಿಕಾರಿಗಳಿಗೂ ನಾನು ಕೃತಜ್ಞನಾಗಿದ್ದೇನೆ.)

* ಈ ಪುಸ್ತಕ ಪ್ರಕಟವಾಗಿದೆ (೧೯೭೬) - ಕ್ರ. ರಾ ಭೀ ಮದ್ವೇಶರಾವ್

ಭಕ್ತನಿಗೆ ಭಗವಂತನ 'ಚರಣರತಿ' ದೊರೆಯುವತನಕ ಈ ಮೊರೆ ಕರೆಗಳಿಗೆ ಕಡೆಯಿಲ್ಲ. 'ಹರಿಯೇ ನಿನ್ನ ಒಮ್ಮೆ ನೆನೆದವ ನರಕವ ಹೊಗನಂತೆ, ಆನು ಒಮ್ಮೆ ಇಮ್ಮೆ ನೆನೆವೆನಯ್ಯ' ಎಂದು ಒಂದು ಬಾರಿ ಪರಿತಪಿಸಿದರೆ, ಮತ್ತೊಮ್ಮೆ 'ಕರುಣದಿ ತನುಮನಧನಂಗಳೆಲ್ಲವು ನಿನ್ನ ಚರಣಕಮಲಕೊಪ್ಪಿಸಿದ ಬಳಿಕ, ಮರಳಿ ಎನ್ನ ಮರುಳು ಮಾಡುವರೆ, ಸರಕು ಒಪ್ಪಿಸಿದ ಮ್ಯಾಲೆ ಸುಂಕವುಂಟೆ ದೇವಾ, ಕರುಣಾಕರ ನಿನ್ನ ಚರಣದಡಿಯೊಳಿಟ್ಟು ಕಾಯೊ ರಂಗವಿಠಲ' ಎಂದು ಅನನ್ಯಶರಣಾಗುವರು.

ಹರಿದಾಸರಿಗೆ ಮುಖ್ಯವಾಗಿ ಬೇಕಾಗಿರುವುದು ಭೋಗಭಾಗ್ಯಗಳಲ್ಲ; ಒಡವೆ ಒಡ್ಯಾಣ ಗಳಲ್ಲ, 'ಆಗಬೇಕು ರಾಜ್ಯಭೋಗಗಳೆನಗೆಂದು ಈಗ ನಾನು ಬೇಡ ಬಂದುದಿಲ್ಲ ನಾಗ ಶಯನ ರಂಗವಿಠಲ ನಾ ನಿನ್ನ ಬಾಗಿಲ ಕಾಯುವ ಭಾಗ್ಯ ಸಾಕೆಂದರೆ, ಇದನಾದರು ಕೊಡದಿದ್ದರೆ ನಿನ್ನ ಪದಕಮಲವ ನಂಬಿ ಭಜಿಸುವುದೆಂತೊ' ಎಂದು ಪ್ರಶ್ನಿಸುವರು. 'ನಾ ನಿನಗೇನು ಬೇಡುವುದಿಲ್ಲ—ಎನ್ನ ಹೃದಯಕಮಲದೊಳು ನೆಲಸಿರು ಹರಿಯೆ' ಎಂದು ವಿನಂತಿ ಮಾಡಿಕೊಂಡು, ತಮ್ಮ ಅವಯವಾದಿಗಳು ಆ ಭಗವಂತನ ಸೇವೆಯಿಂದ ಸಾರ್ಥಕ ವಾಗಲೆಂದು ಹಾರೈಸುವರು. ವಯಸ್ಸಾದರೂ ವೈರಾಗ್ಯವಂಕುರಿಸದಂತಿರಲು 'ಎನ್ನ ಮನ ವಿಷಯಂಗಳಲಿ ಮುಣುಗಿತೊ, ಎನ್ನ ತನುವು ವೃದ್ಧಾಪ್ಯ ಐದಿತೊ ಅಂತಕನ ಕರೆ ಬಾಹೊ ಹೊತ್ತಾಯಿತೊ, ಕಾಲವಿಳಂಬನವಿನಿತಿಲ್ಲವಯ್ಯಾ ವ್ಯಾಳೆ ಅರಿತು ಬಿನ್ನಹ ಮಾಡಿದೆ, ಹೀಗೆ ತರಳರ ಬಿಡುವ ತಾಯಿಗಳುಂಟೆ—ನೀ ಕರುಣಾನಿಧಿಯೆಂಬ ಬಿರುದು ಸಲ್ಲಿಸು ದೇವ' ಎಂದು ಬಲವಾಗಿ ಮರೆಹೊಗುವರು. ಚಂಚಲಚಿತ್ತದ ಪರದಾಟವನ್ನು ಬಲ್ಲ ಅವರು 'ನಾನೇ ಸಜ್ಜನನಾದರೆ ಇಂಥ ಹೀನ ವಿಷಯಂಗಳಿಗೆರಗುವೆನೇನಯ್ಯ ?' ಎಂದು ಹಲವಾರು ದುರಾಚಾರಗಳನ್ನು ಉಲ್ಲೇಖಿಸಿ, 'ದುರಿತ ಗಜ ಪಂಚಾನನ, ನರಹರಿಯೆ ದೇವರ ದೇವ ಕಾಯೊ ಗೋವಿಂದ' ಎಂದು ಸಕಲಸಂಕಷ್ಟಪರಿಹಾರಕನನ್ನು ಆಶ್ರಯಿಸುವರು.

ಭಕ್ತನಿಗೆ ಭಗವಂತನೆಷ್ಟು ಪ್ರಿಯನೋ ಅವನ ದಾಸರೂ ಅಷ್ಟೇ ಬೇಕಾದವರು. 'ಉತ್ತಮರ ಸಂಗಯೆನಗಿತ್ತು ಸಲಹೋ' ಎಂದು ಸತ್ಸಂಗದ ಸೌಭಾಗ್ಯವನ್ನು ನಿವೇದಿಸಿ ಕೊಂಡು, 'ನೀನೆ ಬಲ್ಲಿದನೋ ರಂಗಾ ನಿನ್ನ ಭಕ್ತರು ಬಲ್ಲಿದರೋ' ಎಂದು ವಿಸ್ಮಯಪಡು ವರು. ಏಕೆಂದರೆ, ಪರಮಾತ್ಮನು ಸರ್ವದಾ ಭಕ್ತಪರಾಧೀನನಾಗಿದ್ದಾನೆ. ಧರ್ಮರಾಯನ ಮನೆಗೆ ಕರೆದಲ್ಲಿ ಹೋಗುವನು; ಅರ್ಜುನನ ರಥಕ್ಕೆ ಸಾರಥಿಯಾಗಲು ಹಿಂತೆಗೆಯುವವ ನಲ್ಲ. ಬಲಿಯ ಮನೆಯ ಬಾಗಿಲನ್ನು ಕಾಯಲು ಅಣಿಯಾದಂತೆಯೇ, ತನ್ನನ್ನು ಬಾಣ ದಿಂದ ಹೊಡೆದು, ಆ ತರುವಾಯ ಹೊಗಳಿ ಹಾಡಿದ ಭಕ್ತ ಭೀಷ್ಮನಿಗೆ ಅಭಯವೀಯಲೂ ಸಿದ್ಧ. ಬಾಲಕನಾದ ಪ್ರಹ್ಲಾದನಿಗಾಗಿ ಅವತಾರವೆತ್ತಿ ಬರುವ ಅವನ ಭಕ್ತವಾತ್ಸಲ್ಯ ಅತಿಶಯವಾದದ್ದು.

ಈ ರೀತಿ ಶ್ರೀಪಾದರಾಜರು ಭಕ್ತನ ಆಸೆ ಆಕಾಂಕ್ಷೆಗಳನ್ನೂ, ಆತುರ ಆತಂಕಗಳನ್ನೂ ಬಿಡಿಬಿಡಿಯಾಗಿ ಬಣ್ಣಿಸಿರುವರು; ಭಗವಂತನ ಕೃಪೆಯ ರಹಸ್ಯವನ್ನು ಅವರು ಚೆನ್ನಾಗಿ

ಆರು ಗತಿ ನಿನಗಧಿಕರಾರು ಧಾರುಣಿಯೊಳಗೆ
ತೋರಿಸೈ ಕರುಣನಿಧಿಯೆ ಕೃಷ್ಣ
ಈರೇಳು ಲೋಕಕಾಧಾರವಾದವಗೆ ಬಲು
ಭಾರವಾದವನೆ ನಾನು ಕೃಷ್ಣ
ಮಿೂರಿ ನುಡಿಯಲು ಹದಿನಾರೆರಡು ಪಲ್ಗಳು
ಬೇರು ಕಳಿಕಳಿಯಿತೋ ಕೃಷ್ಣ
ತೋರು ಬಂಕಾಪುರದ ಧಾರುಣಿಪುರವಾಸ
ವೀರ ನರಸಿಂಹದೇವ ಕೃಷ್ಣ

ಎಂಬುದಾಗಿ ಬಂಕಾಪುರದ ನರಸಿಂಹನ ಸಾನ್ನಿಧ್ಯದಲ್ಲಿ ಈ ಮೊರೆ ಗಂಗಾ ಪ್ರವಾಹದಂತೆ ಹರಿದಿದೆ.[1] ಭಕ್ತನು ತನ್ನ ಅಜ್ಞಾನಕ್ಕಾಗಿ ತನ್ನನ್ನು ತಾನೇ ನಿಂದಿಸಿಕೊಳ್ಳುವಲ್ಲಿ,

ಹರಿ ನಾರಾಯಣನೆಂದು ಕರವೆತ್ತಿ ಮುಗಿದೊಮ್ಮೆ ಮೈ
ಮರೆದು ನಟಿಸಲಿಲ್ಲ ಕೃಷ್ಣ
ಹರಿಸ್ಮರಣೆ ಸ್ಮರಿಸಿ ಸಿರಿತುಳಸಿ ಪುಷ್ಪವನು
ಕರವೆತ್ತಿ ನೀಡಲಿಲ್ಲ ಕೃಷ್ಣ
ಸರ್ವಜ್ಞರಾಯರು ವಿರಚಿಸಿದ ಗ್ರಂಥವನು
ದರುಶನವೆ ಮಾಡಲಿಲ್ಲ ಕೃಷ್ಣ
ಸ್ಮರಿಸಲಾರದ ಪಾಪ ಸ್ಮರಣೆಪೂರ್ವಕ ಮಾಡಿ
ಸ್ಥಿರಭಾರನಾದೆನಲ್ಲೋ ಕೃಷ್ಣ

ಎಂದು ನೊಂದುಕೊಳ್ಳುವರು.

ಇಲ್ಲಿ ಮೊದಲನೆಯ ಪಂಕ್ತಿಯಲ್ಲಿ ಹರಿದಾಸನೊಬ್ಬನ ಚರ್ಯೆಯನ್ನು ಬಹು ಚೆನ್ನಾಗಿ ನಿರೂಪಿಸಿದೆ. ಅವನು ಭಗವಂತನಿಗೆ ಕೈಯೆತ್ತಿ ನಮಸ್ಕರಿಸುವುದಲ್ಲದೆ ಮೈಮರೆತು ಕುಣಿಯಬೇಕಂತೆ! ಶ್ರೀಪಾದರಾಜರು ರೂಢಿಗೆ ತಂದರೆನ್ನುವ ಭಾಗವತ ಪಂಥದವರ ಭಾವವಿನ್ಯಾಸಗಳನ್ನು ಈ ಪಂಕ್ತಿಯಲ್ಲಿ ನಾವು ಮನಗಾಣಬಹುದು.

ಭಕ್ತನಿಗೆ ಭಗವದ್ದರ್ಶನವಾಗದಿರಲು ಇನ್ನು ಬದುಕಿ ಪ್ರಯೋಜನವಿಲ್ಲವೆಂದು ಅವನು ಪ್ರಾಣಸಮರ್ಪಣೆ ಮಾಡಲೂ ಹಿಂತೆಗೆಯುವುದಿಲ್ಲ. ಈ ಮನೋಧರ್ಮದ ನಿಲುವೇನೆಂಬುದನ್ನು ಶ್ರೀಪಾದರಾಜರು ಒಂದು ನುಡಿಯಲ್ಲಿ ಹೀಗೆ ನುಡಿದಿರುತ್ತಾರೆ.

ಉರಿಯೊಳಗೆ ಬಿದ್ದು ಶರೀರವನು ಕಳೆಯಲೊ
ಪರುವತವನೇರ್ಯುರುಳಲೋ ಕೃಷ್ಣ
ಗರಳ ಮಡುವನೆ ಧುಮುಕಿ ಉರಗ ಫಣ ತುಳಿಯಲೊ
ಎರಡೊಂದು ಶೂಲಕ್ಕಾಯಲೋ ಕೃಷ್ಣ

[1] ಶ್ರೀಪಾದರಾಜರು ಬಂಕಾಪುರಕ್ಕೆ ತೆರಳಿದಾಗ ಅಲ್ಲಿ ಅವರನ್ನು ಮರೆಹೊಕ್ಕ ದಟ್ಟದರಿದ್ರನ ಪರವಾಗಿ ಈ ಕೃತಿಯನ್ನು ರಚಿಸಿದರೆಂದೂ, ಆತನು ಇದನ್ನು ಪ್ರತಿನಿತ್ಯವೂ ಪಠಿಸಿ ಕಡೆಗೆ ತನ್ನ ಇಷ್ಟಾರ್ಥವನ್ನು ಪಡೆದನೆಂದೂ ಹೇಳುವುದುಂಟು—'ಭಕ್ತ ಶ್ರೀಪಾದರಾಜರು', ಹಂಡೆ ಗುರು ವೇದವ್ಯಾಸದಾಸ, ೧೯೫೭, ಪು. ೪೬.

ಕೊರಳಿಗ್ಹಗ್ಗವ ಹಾಕಿ ಮರವೇರಿ ಕರಬಿಡಲೋ
ಕರಗಸದಿ ಶಿರಗೊಯ್ಯಲೋ ಕೃಷ್ಣ
ಕರುಣವಾರುಧಿ ಎನ್ನ ಕರಪಿಡಿದು ಸಲಹದಿರೆ
ಧರೆಯೊಳುದ್ಧರಿಪರ್‍ಯಾರೋ ಕೃಷ್ಣ

ಚಿತ್ತವಿಹ್ವಲತೆಯ ವಿವಿಧ ಸ್ತರಗಳನ್ನು ಇಲ್ಲಿನ ಒಂದೊಂದು ಪಂಕ್ತಿಯಲ್ಲಿಯೂ ಕಾಣಬಹುದು. ಕಟ್ಟಕಡೆಯ ನುಡಿಯಲ್ಲಿ 'ಎಷ್ಟು ಹೇಳಲಿ ಎನ್ನ ಕಷ್ಟಕೋಟಿಗಳನ್ನು, ಸುಟ್ಟೀಗ ಬೆಯ್ಯುತಿಹವೋ ಕೃಷ್ಣ, ಕಷ್ಟಬಟ್ಟ ಮಗನೆಂದು ದೃಷ್ಟಿ ನೀರೊರೆಸೆನ್ನ ಪೊಟ್ಟೆಯೊಳ್ಪಿಡಿವರ್‍ಯಾರೋ ಕೃಷ್ಣ' ಎಂಬ ಮಾತುಗಳಲ್ಲಿ ತಾಯಿಯಾದವಳು ಕಳವಳ ಪಡುತ್ತಿರುವ ತನ್ನ ಮಗನ ಕಣ್ಣೀರನ್ನು ಒರೆಸಿ, ತನ್ನ ಮಡಲಿನಲ್ಲಿಟ್ಟು ಸಮಾಧಾನ ಪಡಿಸುವಂತೆ ಭಗವಂತನೂ ಭಕ್ತನನ್ನು ಸಲಹಬೇಕೆಂಬ ಕೋರಿಕೆ ಮನವೊಪ್ಪುವಂತಿದೆ. ಈ ನಿಡಿದಾದ ರಚನೆಯ ಹಿನ್ನೆಲೆ ಎಂತೇ ಇರಲಿ, ಒಟ್ಟು ಕೃತಿಯಲ್ಲಿ ಹೊಮ್ಮಿ ಬಂದಿರುವ ಹೃದಯದ ಆವೇಗ ಆವೇಶಗಳೂ, ಆತ್ಮನಿಂದೆ ಆತ್ಮಸಮರ್ಪಣೆಗಳೂ ಅತಿಶಯವಾಗಿವೆ.

## ಭಗವಂತನ ಆರಾಧನೆ

ಶ್ರೀಪಾದರಾಜರು ಭಗವಂತನನ್ನು ಯಾವ ಯಾವ ನಿಲುವಿನಿಂದ ಕಂಡುಕೊಂಡಾಡಿದ್ದಾರೆನ್ನುವುದನ್ನು ಅವರ ಹಲವಾರು ಕೀರ್ತನೆಗಳ ಮೂಲಕ ತಿಳಿಯಬಹುದು ಭಕ್ತನಾದವನ ಭಕ್ತಿ ನವವಿಧ ಭಕ್ತಿಮಾರ್ಗದಲ್ಲಿ ಪ್ರವಹಿಸಿ ಪ್ರಕಟವಾಗುವುದು. ಇಲ್ಲವೇ, ಆತನು ಭಗವಂತನನ್ನು ಯಾವ ರೀತಿ ಚಿಂತಿಸಿ ಧ್ಯಾನಿಸುತ್ತಾನೆ ಎನ್ನುವುದನ್ನು ಅನುಸರಿಸಿ ವಿಶ್ಲೇಷಿಸಬಹುದು. ಆತನ ಪಾಲಿಗೆ ಭಗವಂತನು ಒಡೆಯನೆನ್ನಿಸಿದರೆ ಭಕ್ತನ ಮಾತು ದಾಸ್ಯಪರವಾಗುವುದು ; ಗೆಳೆಯನೆನ್ನಿಸಿದರೆ ಆತನ ವಾಣಿ ಸಖ್ಯಮುಖವಾಗುವುದು ; ಇನಿಯನೆನ್ನಿಸಿದರೆ ನುಡಿವ ನುಡಿಯೆಲ್ಲವೂ ಮಧುರಮಯವಾಗುವುದು ; ಎತ್ತಿ ಆಡಿಸುವ ಕಂದನಾಗಿ ಕಂಡುಬಂದರೆ ದಾಸರ ವಾಣಿ ವಾತ್ಸಲ್ಯದ ವಾಹಿನಿಯಾಗುವುದು. ಈ ಎಲ್ಲ ಸಂಬಂಧಗಳಿಗೂ ಮೀರಿ ಭಗವಂತನ ಲೀಲಾ ವಿನೋದಗಳನ್ನು ಕಂಡು ಭಕ್ತನು ಆಶ್ಚರ್ಯ ಚಕಿತನಾಗಿಯೋ ಇಲ್ಲವೇ ಮೂಕ ವಿಸ್ಮಿತನಾಗಿಯೋ ಕ್ಷಣಕಾಲ ಅನಿರ್ವಚನೀಯವಾದ ಸುಖವನ್ನು ಅನುಭವಿಸಿ, ಆ ಬಳಿಕ ಪ್ರಶಾಂತಚಿತ್ತದಿಂದ ತನ್ನ ಅನುಭವವನ್ನು ಸಾರಿ ಹೇಳಿದರೆ ಆತನ ವಚನಗಳೆಲ್ಲವೂ ಶಾಂತಭಾವವನ್ನು ಪ್ರತಿಬಿಂಬಿಸುವ ಹೊನ್ನುಡಿಗಳಾಗ ಬಲ್ಲುವು. ಪ್ರಕೃತದಲ್ಲಿ ಶ್ರೀಪಾದರಾಜರ ಭಕ್ತ ಮನೋಧರ್ಮವು ಯಾವ ತೆರನಾಗಿ ತೋರಿ ಬಂದಿದೆಯೆನ್ನುವುದನ್ನು ಇಲ್ಲಿ ಪರಿಶೀಲಿಸಿದೆ.

ಹರಿದಾಸರ ಹಾಡುಗಳಲ್ಲಿ ದಾಸ್ಯಭಾವಕ್ಕೆ ಅಗ್ರಸ್ಥಾನವೆನ್ನುವುದಕ್ಕೆ ಪ್ರತಿಯೊಬ್ಬ ದಾಸರ ಆತ್ಮನಿವೇದನಾತ್ಮಕವಾದ ರಚನೆಗಳೇ ಸಾಕ್ಷಿ. ಇದನ್ನು ಈಗಾಗಲೇ ನಾವು

ಶ್ರೀಪಾದರಾಜರ ಆತ್ಮಶೋಧನೆಯು ವಿಭಾಗದಲ್ಲಿ ಸಾಕಷ್ಟು ಕಂಡಿರುತ್ತೇವೆ. ಅವರು ತಮ್ಮ ಇಷ್ಟದೇವತೆಯಾದ ಶ್ರೀ ರಂಗವಿಠಲನನ್ನು ಸ್ತುತಿಸುವ ಒಂದು ಕೀರ್ತನೆ ಇದೀಗ ಹೊಚ್ಚ ಹೊಸದಾಗಿ ಬೆಳಕಿಗೆ ಬಂದಿರುವುದು ನಮ್ಮ ಭಾಗ್ಯ. ಶ್ರೀಪಾದರಾಜರು ಕೀರ್ತನ ರಚನೆಯನ್ನು ಕೈಕೊಂಡ ಮೊದಮೊದಲಿನಲ್ಲಿ ತಮ್ಮ ಸಂಸ್ಥಾನದ ಆರಾಧ್ಯದೇವತೆಯಾದ ಗೋಪೀನಾಥನ ಅಂಕಿತದಲ್ಲಿ ಕೃತಿಗಳನ್ನು ರಚಿಸಿದರೆಂದೂ, ಪಂಢರಾಪುರದ ಬಳಿಯಲ್ಲಿ ದೊರೆತ ಸಂಪುಟವೊಂದರಲ್ಲಿ ರಂಗವಿಠಲನ ಸಂದರ್ಶನವಾದ ಅನಂತರ ರಂಗವಿಠಲಾಂಕಿತ ದಲ್ಲಿಯೇ ಬರೆಯಲು ಆರಂಭಿಸಿದರೆಂದೂ ಶ್ರೀ ಬೇಲೂರು ಕೇಶವದಾಸರು ಅಭಿಪ್ರಾಯ ಪಟ್ಟಿರುತ್ತಾರೆ.[1] ಆದರೆ ಈವರೆಗೆ ನಾವು ಪರಿಶೀಲಿಸಿದ್ದಲ್ಲಿ ಶ್ರೀಪಾದರಾಜರದೆಂದು ಗೋಪೀನಾಥಾಂಕಿತದಲ್ಲಿ ಯಾವುದೂ ಗಮನಕ್ಕೆ ಬಂದಿಲ್ಲ. ಶ್ರೀಪಾದರಾಜರು ಯತ್ಯಾ ಶ್ರಮವನ್ನು ಕೈಕೊಂಡ ಬಳಿಕ ಅನೇಕ ವರ್ಷಗಳವರೆಗೆ ಸ್ವರ್ಣವರ್ಣರ ಸಾನ್ನಿಧ್ಯದಲ್ಲಿ ಶ್ರೀರಂಗದಲ್ಲಿ ನೆಲಸಿದ್ದರಷ್ಟೆ. ಆ ಫಲವಾಗಿ ದಕ್ಷಿಣಾಧೀಶನಾದ ಶ್ರೀರಂಗದ ಸ್ವಾಮಿ ಯನ್ನು ಕುರಿತ ಅವರ ಹಲವಾರು ರಚನೆಗಳಿವೆ. (ಅವರ 'ರಂಗವಿಠಲ' ಎಂಬ ಮುದ್ರಿಕೆ ಇಂದಿಗೂ ಸಂಸ್ಥಾನದಲ್ಲಿ ಪೂಜೆಗೊಳ್ಳುತ್ತಿರುವ ರಂಗವಿಠಲನನ್ನೇ ಕುರಿತುದಾದರೂ, ಈ ಮೊದಲೇ ಅವರಿಗೆ ಪರಮಪ್ರಿಯವಾದ ಶ್ರೀರಂಗದ ರಂಗನಾಥಸ್ವಾಮಿಗೂ ಪ್ರಕಾರಾಂತವಾಗಿ ಅನ್ವಯಿಸಿದರೂ ಅನ್ವಯಿಸಬಹುದು. ವಿಠಲವಾಚಕ ಶಬ್ದವಿರುವುದ ರಿಂದ ಇದನ್ನು ಖಂಡಿತವಾಗಿ ಹೇಳಬರುವಂತಿಲ್ಲ. ಏನೇ ಆಗಲಿ, ಶ್ರೀರಂಗದಲ್ಲಿದ್ದಾಗ ಅವರು ಪ್ರತಿನಿತ್ಯವೂ ಕೇಳಿ ಆನಂದಿಸಿರಬಹುದಾದ ಆಳ್ವಾರರ ತಮಿಳು ಪ್ರಬಂಧಗಳು ಶ್ರೀಪಾದರಾಜರು ತಮ್ಮ ಮಾತೃಭಾಷೆಯಲ್ಲಿಯೇ ಕೀರ್ತನೆಗಳನ್ನು ರಚಿಸುವಲ್ಲಿ ಸಾಕಷ್ಟು ಸ್ಫೂರ್ತಿಶಕ್ತಿಯಾಗಿದೆಯೆನ್ನುವುದನ್ನು ನಾವು ನಿರಾಕರಿಸುವಂತಿಲ್ಲ ) ಶ್ರೀರಂಗವಿಠಲನನ್ನು ಕುರಿತ ಅವರ ಕೀರ್ತನೆಯಲ್ಲಿ (ಅನುಬಂಧ ೪–ಅಧಿಕ ಕೃತಿಗಳು–ಕೀ. ೪) ಆ ಪರಮಾತ್ಮನ ಅಪ್ರಾಕೃತ ಶರೀರ ಸೌಂದರ್ಯವನ್ನು ಮುಡಿಯಿಂದ ಮೊದಲಾಗಿ ಅಡಿಯವರೆಗೆ ಬಿಡಿ ಬಿಡಿಯಾಗಿ ವರ್ಣಿಸಿದೆ. ಪಲ್ಲವಿಯಲ್ಲಿಯೇ 'ಶ್ರೀರಂಗವಿಠಲನ ಶ್ರೀಮಕುಟಕೆ ಶರಣು' ಎಂದು ಸ್ವಾಮಿಗೆ ಎರಗಿ, ಶ್ರೀಪಾದರಾಜರು ಕ್ರಮಕ್ರಮವಾಗಿ ಇತರ ಅಂಗಗಳ ಲಾವಣ್ಯ ವನ್ನು ಕೊಂಡಾಡಿರುತ್ತಾರೆ. ಇದು ನಿಂತ ನಿಲುವಿನ ಮೂರ್ತಿಯ ತುಂಬು ಸೊಬಗಿನ ಚಿತ್ರವೇ ಸರಿ. (ಈ ಎಲ್ಲ ವಿವರಗಳೊಂದಿಗೆ ಈ ರಂಗವಿಠಲನು ಅವರಿಗೆ ಪ್ರಾಪ್ತವಾದ ಸಂದರ್ಭವನ್ನೂ ಸೂಚಿಸಿದ್ದರೆ ಇಂದು ಐತಿಹ್ಯವಾಗಿ ಉಳಿದು ಬಂದಿರುವ ಈ ಸಂಗತಿ ಇತಿಹಾಸವಾಗಿಯೇ ಮೆರೆಯುತ್ತಿತ್ತು) :

ಕುಂದ ಕುಟ್ಮಲ ಪೋಲ್ವ ದಂತಪಂಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ಚಂದ್ರಿಕಾನಿಭ ಮುದ್ದು ಮಂದಹಾಸಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು

---

[1] ಕರ್ಣಾಟಕ ಭಕ್ತವಿಜಯ, ೧೯೬೩, ಭಾಗ ೧, ಪು. ೮೭.

ಎಂಬ ಮನೋಹರವಾದ ವರ್ಣನೆಯನ್ನಾಗಲಿ,

ರನ್ನ ಗಂಟೆಗಳಿರುವ ನಿನ್ನ ಕಟಿಗೆ ಶರಣು
ಪೊನ್ನ ಕದಳೀ ಪೋಲ್ವ ತೊಡೆಗಳಿಗೆ ಶರಣು
ಪುನ್ನಾಗ ಕರಗೆತ್ತದ್ವಯನಿತಂಬಕೆ ಶರಣು
ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು

ಎಂಬ ಸುಂದರವಾದ ಉಪಮಾನಗಳನ್ನಾಗಲಿ, ಗಮನಿಸಿದರೆ ಶ್ರೀಪಾದರಾಜರು ಈ ಕೀರ್ತನೆಯನ್ನು ಎಷ್ಟು ತನ್ಮಯರಾಗಿ ಹಾಡಿರುವರೆಂಬುದನ್ನು ಗ್ರಹಿಸಬಹುದು.

ಶ್ರೀರಂಗದ ರಂಗನಾಥನ ಬಗ್ಗೆ ಅವರು ವ್ಯಕ್ತಪಡಿಸಿರುವ ಭಕ್ತಿಭಾವ ಅಸಾಧಾರಣ ವಾದದ್ದು. 'ಕಂಗಳಿದ್ಯಾತಕೆ ಕಾವೇರಿ ರಂಗನ ನೋಡದ' ಎಂಬ ಅವರ ಕೀರ್ತನೆ ಈಗಾಗಲೇ ಸಾಕಷ್ಟು ಪ್ರಸಿದ್ಧವಾಗಿದೆ. ಈ ಕೀರ್ತನೆಯ ಒಂದೊಂದು ನುಡಿಯೂ ಶ್ರೀರಂಗಕ್ಷೇತ್ರದ ಮಾಹಾತ್ಮ್ಯೆಯನ್ನು ತಿಳಿಸುತ್ತದೆ ಅಲ್ಲಿರುವ ಚಂದ್ರಪುಷ್ಕರಿಣಿ, ವಿರಜಾ ನದಿಸದೃಶವಾದ ಕಾವೇರಿ ನದಿ, ವೈಕುಂಠ ಸಮಾನವಾದ ದೇವಾಲಯ, ಪರವಾಸುದೇವ ನೆಂದು ವಿಶಿಷ್ಟವಾಗಿ ಕರೆಯಲ್ಪಡುವ ಶ್ರೀರಂಗನಾಥಸ್ವಾಮಿಯ ಮೂರ್ತಿ, ಅಲ್ಲಿನ ರಥೋತ್ಸವದ ವೈಭವ ಮೊದಲಾದುವುಗಳನ್ನು ಶ್ರೀಪಾದರಾಜರು ಎಂದೆಂದಿಗೂ ಮರೆಯದಂತೆ ಮನಮುಟ್ಟಿ ಹೊಗಳಿರುತ್ತಾರೆ. 'ರಂಗನಾಥನ ನೋಡುವ ಬನ್ನಿ ಶ್ರೀರಂಗನ ದಿವ್ಯ ವಿಮಾನದಲ್ಲಿಹನ' ಎಂಬಲ್ಲಿಯೂ ಶ್ರೀರಂಗದ ಗೋಪುರದಲ್ಲಿರುವ ಪರವಾಸುದೇವನನ್ನೇ ಕುರಿತುದೆಂದು ತಿಳಿದುಬರುತ್ತದೆ. 'ನಾರಾಯಣ ನಿನ್ನ ನಂಬಿದೆ— ಲಕ್ಷ್ಮೀನಾರಾಯಣ ನಿನ್ನೊರತು ಪೊರೆವ ದೈವವೆಲ್ಲಿದೆ' ಎಂದು ಲಕ್ಷ್ಮೀನಾರಾಯಣನನ್ನು ಸ್ತುತಿಸುವಲ್ಲಿಯೂ ಕಡೆಯ ನುಡಿಯಲ್ಲಿ 'ರಂಗನಗರ ಉತ್ತುಂಗನೆ' ಎಂಬ ಸಂಬೋಧನೆ ಯಲ್ಲಿಯೂ ಅವರ ಮನಸ್ಸು ಮತ್ತೆ ಮತ್ತೆ ಶ್ರೀರಂಗದತ್ತಲೇ ಸುಳಿಯುವಂತಿದೆ 'ರಕ್ಷ ಮಾಂ ರಂಗೇಶ' ಎಂಬ ಇತ್ತೀಚೆಗೆ ದೊರೆತ ಕೃತಿಯೊಂದರಲ್ಲಿ ಸ್ಪಷ್ಟವಾಗಿ 'ಸರ್ವಲಕ್ಷಣ ಪರಿಪೂರ್ಣ ಪರಮೇಶ—ದಕ್ಷಿಣಾಧೀಶ' ಎಂಬ ಮಾತು ಬರುತ್ತದೆ.

ತಿರುಪತಿಯಲ್ಲಿರುವ ಶ್ರೀನಿವಾಸನನ್ನು ಸ್ಮರಿಸುವಲ್ಲಿ, ಶ್ರೀಪಾದರಾಜರು ರಚಿಸಿರುವ 'ಭೂಷಣಕೆ ಭೂಷಣ ಇದು ಭೂಷಣ ಶೇಷಗಿರಿವಾಸ ಶ್ರೀ ವರದವೆಂಕಟೇಶ' ಎಂಬ ದೇವರ ನಾಮವೂ ತುಂಬ ಜನಪ್ರಿಯವಾದುದು. ಈ ಪಲ್ಲವಿಯಿಂದ ಮೊದಲಾಗುವ ಈ ಕೀರ್ತನೆಯಲ್ಲಿ ಮುಂದೆ ಬರುವ ಚರಣಗಳಲ್ಲಿ ಮನುಷ್ಯನ ಒಂದೊಂದು ಅವಯವವೂ ಹೇಗೆ ಪರಮಾತ್ಮನ ಸ್ತುತಿ, ತೀರ್ಥಯಾತ್ರೆ, ದಾನಧರ್ಮಗಳಿಂದ ಪುನೀತವಾಗಬಲ್ಲು ದೆಂಬುದನ್ನು ಹೇಳಿರುತ್ತಾರೆ 'ಆಲಯಕೆ ಭೂಷಣ ತುಲಸಿ ವೃಂದಾವನ' ಎಂಬ ಪಂಕ್ತಿ ಯಲ್ಲಿ ಧರ್ಮಾನುಯಾಯಿಗಳ ಗೃಹದ ಲಕ್ಷಣವೇನು ಎಂಬ ಕಲ್ಪನೆ ಅಡಕವಾಗಿದೆ. ಮುಳುಬಾಗಿಲಿಗೂ ತಿರುಪತಿಗೂ ಬಹು ನಿಕಟ ಬಾಂಧವ್ಯ. ಇಂದಿಗೂ ತಿರುಪತಿಯಿಂದ ಹಿಂತಿರುಗಿ ಬರುವವರು ಮುಳುಬಾಗಿಲಿನ ಪ್ರಾಣದೇವರನ್ನೂ ಆ ದೇವಸ್ಥಾನದ ಪ್ರಾಕಾರದಲ್ಲಿರುವ ಇತರ ದೇವತಾಮೂರ್ತಿಗಳನ್ನೂ ಸಂದರ್ಶಿಸಿ ಬರುವ ಸಂಪ್ರದಾಯ

ವಿದೆ. 'ಸ್ಮರಿಸಿದವರನು ಕಾಯ್ವ ನಮ್ಮ ಸೂರ್ಯರ್ಾನೇಕ ಪ್ರಭಾವ, ಸುರಮುನಿಗಳ ಸಂಜೀವ ಶ್ರೀವೆಂಕಟ ನಮ್ಮ ಪೊರೆವ' ಎಂಬ ಮತ್ತೊಂದು ಕೀರ್ತನೆಯಂತೂ ಶ್ರೀವೆಂಕಟೇಶನನ್ನು ಕುರಿತ ಒಂದು ಉತ್ತಮಸ್ತೋತ್ರ. 'ವೈಕುಂಠದಿಂದ ಬಂದು ಶೇಷಾಚಲ ದಲ್ಲಿ ನಿಂದು ಭಕ್ತರ ಪಾಲಿಪೆನೆಂದು' ಅಭಯವೀಯುವ ಶ್ರೀನಿವಾಸದೇವರು ಹೇಗೆ ತನ್ನ ಲೀಲೆಯನ್ನು ಮೆರೆಯುತ್ತಿರುವನೆಂಬುದನ್ನು ವಿಶೇಷಣಗಳ ಮೂಲಕ ವಿಸ್ತರಿಸಿದ್ದಾರೆ. ಹೀಗೆಯೇ 'ಹರೇ ವೆಂಕಟ ಶೈಲವಲ್ಲಭ ಪೊರೆಯಬೇಕು ಎನ್ನ' ಎಂದು ಆತನಲ್ಲಿ ಸಂಪೂರ್ಣ ವಾಗಿ ಶರಣುಹೋಗಿರುತ್ತಾರೆ.

ಶ್ರೀಪಾದರಾಜರು 'ದುರಿತಗಜಪಂಚಾನನ ನರಹರಿಯೆ ದೇವರ ದೇವ ಕಾಯೋ ಗೋವಿಂದ' ಎಂಬಲ್ಲಿ ನರಸಿಂಹನನ್ನು ಪ್ರಾಸಂಗಿಕವಾಗಿ ಸ್ಮರಿಸಿದ್ದಾರೆ. 'ಬಂಕಾಪುರದ ಧಾರುಣಿಪುರವಾಸ ವೀರನರಸಿಂಹ' ದೇವನನ್ನು ಕಂಡಾಗ ಅವರ ಆರ್ತಭಾವ ಮುಗಿಲನ್ನೇ ಮುಟ್ಟುತ್ತದೆ. ಈಗಾಗಲೇ ಇದರ ಪರಿಚಯವನ್ನು ಮಾಡಿಕೊಡಲಾಗಿದೆ. 'ಶ್ರೀ ಲಕ್ಷ್ಮೀ ನೃಸಿಂಹ ಪ್ರಾದುರ್ಭಾವ ದಂಡಕ'ವೆಂಬ ದೀರ್ಘ ಕೃತಿಯಲ್ಲಿ ಈ ನರಸಿಂಹನ ಮೇಲಣ ಭಕ್ತಿ ತುಂಬು ಹೊನಲಿನಂತೆ ಹರಿದಿದೆ. ಭಾಗವತದ ಸಪ್ತಮಸ್ಕಂಧದ ಎಂಟನೆಯ ಅಧ್ಯಾಯವನ್ನು ಅವಲಂಬಿಸಿ ಬರೆದಿರುವ ಈ ಕೃತಿ ಮೂಲದ ಉನ್ನತ ಭಾವನೆಗಳನ್ನೆಲ್ಲ ಒಳಗೊಂಡಿರುವುದಲ್ಲದೆ, ಸಂದರ್ಭೋಚಿತವಾಗಿ ಲೇಖಕರ ಸ್ವಾತಂತ್ರ್ಯದೃಷ್ಟಿಯನ್ನೂ ವ್ಯಕ್ತಪಡಿಸುತ್ತದೆ. ಶ್ರೀಪಾದರಾಜರ ವೃಂದಾವನವಿರುವ ಸ್ಥಳಕ್ಕೂ ನೃಸಿಂಹವನವೆಂದು ಹೆಸರು. ಅಲ್ಲಿ ಯೋಗಾನರಸಿಂಹದೇವರಿರುವುದರಿಂದ ಅದಕ್ಕೆ ಆ ಹೆಸರು ಉಚಿತವಾಗಿದೆ. (ಈ ಎಲ್ಲ ಅಂಶಗಳನ್ನೂ ಗಮನಿಸಿದರೆ ಶ್ರೀಪಾದರಾಜರಿಗೆ ನರಸಿಂಹದೇವರಲ್ಲಿ ವಿಶೇಷ ವಾದ ಒಂದು ಭಕ್ತಿಭಾವವಿರುವಂತಿದೆ. ಬಹುಶಃ ಅವರು ನರಸಿಂಹದೇವರ ಒಕ್ಕಲಿಗೆ ಸೇರಿದವರೋ ಏನೋ ಎಂಬ ಸಂದೇಹವುಂಟಾಗುತ್ತದೆ. ಅವರ ಪೂರ್ವಾಶ್ರಮದ ಮನೆತನಕ್ಕೆ ಸಂಬಂಧಿಸಿದ ವಿವರಗಳೇನಾದರೂ ಇದ್ದಲ್ಲಿ ಈ ವಿಷಯ ಸ್ಪಷ್ಟವಾಗ ಬಲ್ಲುದು.)

ಶ್ರೀಕೃಷ್ಣನ ವಿಚಾರವನ್ನು ತೆಗೆದುಕೊಂಡರೆ ಶ್ರೀಪಾದರಾಜರ ಕೃತಿಗಳ ಬಹುಭಾಗ ಇದಕ್ಕೆ ವಿಾಸಲಾಗಿದೆಯೆನ್ನಬಹುದು ಕನ್ನಡದಲ್ಲಿ ಗೋಪಿಗೀತ, ಭ್ರಮರಗೀತ ಮತ್ತು ವೇಣುಗೀತಗಳನ್ನು ರಚಿಸಿದ ರಸಿಕರಲ್ಲಿ ಅವರಿಗೆ ಅಗ್ರಮರ್ಯಾದೆ ಸಲ್ಲುತ್ತದೆ. ಶ್ರೀಕೃಷ್ಣನ ಬಾಲ್ಯ ಮತ್ತು ಯೌವನಗಳ ಲೀಲಾವಿಲಾಸಗಳನ್ನು ಶ್ರೀಪಾದರಾಜರು ವಿಧವಿಧವಾಗಿ ವರ್ಣಿಸಿರುತ್ತಾರೆ. ತಾವಾಗಿಯೋ ಇಲ್ಲವೇ ಗೋಪಿಯ ಪರವಾಗಿಯೋ ಅವರು ಅನೇಕ ಕೃತಿಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಒಂದೆರಡು ರಚನೆಗಳಿಗೆ ಅವರಿಗೆ ಭಾಗವತವೇ ಮುಖ್ಯ ಆಧಾರವೆನ್ನಿಸಿದರೆ, ಇತರ ರಚನೆಗಳಿಗೆ ಅವರ ರಸಾನುಭವವೇ ಸಾಕ್ಷಿಯಾದಂತಿದೆ. ಈ ಶ್ರೀಕೃಷ್ಣದರ್ಶನವನ್ನು ಇಲ್ಲಿ ಸ್ವಲ್ಪ ವಿವರವಾಗಿಯೇ ಪರಿಶೀಲಿಸಬಹುದು.

## ವಾತ್ಸಲ್ಯಭಾವ ನಿರೂಪಣೆ

ಹರಿದಾಸರಿಗೆ ಶ್ರೀಕೃಷ್ಣನ ಚರಿತ್ರೆಯಲ್ಲಿ ಅವನ ಬಾಲ್ಯವೆಂದರೆ ಅಚ್ಚುಮೆಚ್ಚು. ಭಾಗವತದ ದಶಮಸ್ಕಂಧವನ್ನೆಲ್ಲ ಇಲ್ಲಿ ಧಾರಾಳವಾಗಿ ಬಳಸಿರುವ ಹಲವಾರು ನಿದರ್ಶನ ಗಳಿವೆ. ಶ್ರೀಪಾದರಾಜರು ಬಾಲಕೃಷ್ಣನನ್ನು 'ಪೋಪು ಹೋಗೋಣ ಬಾರೊ ರಂಗ ಪೋಪು ಹೋಗೋಣ ಬಾರೊ, ಎಂದು ಕರೆಯುವ ಕೀರ್ತನೆ ಕನ್ನಡಿಗರ ಮನವನ್ನು ಈಗಾಗಲೆ ಸೂರೆಗೊಂಡಿದೆ. ಇಲ್ಲಿ ಮಕ್ಕಳ ಮಾತಾದ 'ಪೋಪು' ಎನ್ನುವುದರ ಬಳಕೆ ಯಂತೂ ಈ ಕೀರ್ತನೆಗೆ ಒಪ್ಪುವಂತಿದೆ ಶ್ರೀಕೃಷ್ಣನು ಎಳೆಯ ಮಗುವೆಂದು ಕಣ್ಣಿಗೆ ಕಂಡರೂ ಅವನು ದೇವರ ಅವತಾರವೆಂಬುದನ್ನು ಅವರ ಅಂತರಂಗವು ಮರೆಯುವುದಿಲ್ಲ. ಆದಕ್ಕಾಗಿಯೇ ಒಡಗೂಡಿ ಹೋಗಲು ಕರೆಯುವವನ ಮುಂದೆ, ಅವನ ರಾಮಾವತಾರದ ವಿಷಯವನ್ನೂ ಕೃಷ್ಣಾವತಾರದ ಹಿರಿಮೆಯನ್ನೂ ಪ್ರಸ್ತಾಪಿಸುವರು ಅನೇಕ ಸಂದರ್ಭ ಗಳಲ್ಲಿ ಒಂದೇ ಕೀರ್ತನೆಯಲ್ಲಿ ಈ ಎರಡು ಅವತಾರಗಳನ್ನು ಸಂಯೋಜಿಸಿರುವುದು ವಿಶಿಷ್ಟವಾದ ನಿರೂಪಣೆ ಎನ್ನಬಹುದು ಕಂದ ಕೃಷ್ಣಯ್ಯನನ್ನು ಕಂಡರೆ ಗೋಪಿಯಾದ ಯಶೋದೆಗೆ ಎಷ್ಟು ಆನಂದವೋ ಅಷ್ಟೇ ಆತಂಕವೂ ಅವಳನ್ನು ಬಾಧಿಸುವುದುಂಟು. ಆ ತಾಯಿಯ ಅಕ್ಕರೆಯನ್ನು ಶ್ರೀಪಾದರಾಜರು ಬಹಳ ಸರಳವಾಗಿ ಚಿತ್ರಿಸಿರುತ್ತಾರೆ. ತುಂಟನಾದ ಕೃಷ್ಣನು ಮನೆಯಲ್ಲಿ ನಿಲ್ಲದೆ ಎಲ್ಲೆಲ್ಲಿಯೋ ಅಲೆದಾಡಿ ಆಟವಾಡಿ ಬಂದಾಗ ಆಕೆ 'ಎಲ್ಲ್ಯಾಡಿ ಬಂದ್ಯೋ ಎನ್ನ ರಂಗಯ್ಯ ನೀ ಎಲ್ಲ್ಯಾಡಿ ಬಂದ್ಯೋ ಎನ್ನ ಕಣ್ಣ ಮುಂದಾಡದೆ' ಎಂದು ಹಂಬಲಿಸುವಳು. ಅವನಿಗೆ ಬೇಕಾದ ಹಾಲು, ಸಕ್ಕರೆ, ಜೊತೆ ಗಾರರೆಲ್ಲ ಮನೆಯಲ್ಲಿಯೇ ಇದ್ದರೂ ಅವನು ಕದ್ದು ಹೋಗುವುದನ್ನು ಆಕೆ ಸಹಿಸಲಾರಳು. 'ಅಷ್ಟದಿಕ್ಕಿಲಿ ಅರಸಿ ಕಾಣದೆ ಬಹಳ ದೃಷ್ಟಿಗೆಟ್ಟೆನು ನಿನ್ನ ನೋಡದೆ' ಎಂದು ತನಗಾದ ತಳಮಳವನ್ನೂ ಅವನ ಮುಂದೆ ಹೇಳಿಕೊಳ್ಳುವಳು. ಒಮ್ಮೆ ಅವನು ಆಟವಾಡಿ ಹಿಂತಿರುಗಿ ದಾಗ ಕೃಷ್ಣನ ಹಣೆ ಬೆವರಿಟ್ಟಿತಂತೆ! ಸಾಲದ್ದಕ್ಕೆ ಅವನ ಮೇಲೆ ಹಲವಾರು ಅಪವಾದ ಗಳು ಬೇರೆ! ಬೆರಳ ಉಂಗುರ, ಕೊರಳ ಪದಕಗಳು ಮಾಯವಾಗಿದ್ದವು! ಯಾರಿಗೆ ಕೊಟ್ಟು ಬಂದನೋ ಎಂಬ ಸಿಟ್ಟು ಅವಳಿಗೆ! ಎಳೆಯ ಕಂದ ಬೀದಿಗೆ ಹೋದರೆ ಕಂಡವರ ದೃಷ್ಟಿ ತಾಕೀತೆಂದು ಅವಳಿಗೆ ಎಲ್ಲೂ ಇಲ್ಲದ ಕಳವಳ. ಕೃಷ್ಣನನ್ನು ಅಲಂಕರಿಸಿ 'ದೃಷ್ಟಿ ತಾಕೀತೋ ಬೀದಿ ಮೆಟ್ಟಬ್ಯಾಡವೋ ಸೃಷ್ಟಿಯ ನಾರಿಯರೆಲ್ಲ ಕಣ್ಣಿಟ್ಟು ಹೀರುವರೋ ನಿನ್ನ' ಎಂದು ಬುದ್ಧಿ ಹೇಳುವಳು. ಶ್ರೀಕೃಷ್ಣನು ಶೃಂಗಾರ ಶೇಖರನಾಗಿ ಹೊಂಗೊಳಲನ್ನು ಬಾರಿಸುತ್ತ ಎತ್ತ ಸುಳಿದರೂ ಅತ್ತ ಹೆಂಗಳ ಮೊತ್ತ ಅವನನ್ನು ಮುತ್ತದೆ ಇರದು! ಆದಕ್ಕಾಗಿಯೇ ಅವಳು ಮತ್ತೆ ಮತ್ತೆ ಮಗನಿಗೆ ಹಿತೋಕ್ತಿಗಳನ್ನು ಒತ್ತಿ ಒತ್ತಿ ಹೇಳುವಳು. ಅವನಾದರೋ ಅಮ್ಮನ ಮಾತನ್ನು ಸುಮ್ಮನೆ ಕೇಳುವವನಲ್ಲ! ಭಕ್ತಿಭಾವದಿಂದ ಪುಳಕಿತರಾದ ಗೋಪಿಯರಿಗೆ ಅವನ ಪಾದದರ್ಶನವಾದರೆ ಸಾಕು, ತಾವು ಕೃತಾರ್ಥರಾದೆವೆಂದು ಬಗೆಯುವರು. 'ಇಕ್ಕೋ ನೋಡೆ ರಂಗನಾಥನ ಚಿಕ್ಕ ಪಾದವ, ಸಿಕ್ಕಿತೆ ಶ್ರೀಲಕ್ಷ್ಮೀಪತಿಯ ದಿವ್ಯ ಪಾದವ' ಎಂದು ಅವರು ಪರಸ್ಪರ ಮಾತ

ನಾಡಿಕೊಂಡು ಆ ಪುಟ್ಟ ಪಾದದ ಮಾಹಾತ್ಮ್ಯೆಯನ್ನೆಲ್ಲ ಕೊಂಡಾಡಿ ಧನ್ಯರಾಗುವರು. ಅವರ ಆ ಹೊಗಳಿಕೆಯಲ್ಲಿ ಪರಮಾತ್ಮನ ಪಾದಲಕ್ಷಣ ಮೊದಲ್ಗೊಂಡು, ಆ ಮೂಲಕ ಆತನು ನೆರವೇರಿಸಿದ ಅನೇಕ ಘಟನಾವಳಿಗಳೆಲ್ಲ ಕೇಳಿ ಬರುವುವು. ಈ ಮಾಲಿಕೆಯಲ್ಲಿ ರಾಮಾಯಣ ಭಾಗವತಗಳ ಪ್ರಸಂಗಗಳು ಉಲ್ಲೇಖವಾಗಿವೆ ಕೃಷ್ಣನ ಪಾದದರ್ಶನಕ್ಕಾಗಿ ಕೆಲವು ಗೋಪಿಯರು ಹಗಲಿರುಳೂ ಹಾರೈಸಿದರೆ, ಅವನ ಹಾವಳಿಗಾಗಿ ಬೇಸತ್ತು ಯಶೋದೆಯಲ್ಲಿಗೆ ಬಂದು, 'ನಿನ್ನ ಮಗನ ಲೀಲೆಯು ತಾಳಲಾರೆವೆ ನಾವು, ತರಳನ ದುಡುಕು ಹೇಳಬಾರದೆ ಗೋಪಾಲಕೃಷ್ಣಗೆ ಬುದ್ಧಿ ಅಮ್ಮ' ಎಂದು ಅವನ ಕುಚೇಷ್ಟೆಗಳನ್ನು ಪಟ್ಟಿಮಾಡಿ ಹೇಳುವರು ಯಶೋದೆಗೆ ಅವುಗಳನ್ನು ಕೇಳಿ ಕೇಳಿ ರೋಸಿಹೋಗಿ 'ಏಕೆ ದೂರುವಿರೇ ರಂಗಯ್ಯನ ಏಕೆ ದೂರುವಿರೇ' ಎಂದು ಮಗನ ಪರವಾಗಿಯೇ ಮಾತನಾಡಿ ಅವರ ಬಾಯನ್ನು ಮುಚ್ಚಿಸುವಳು. ಈ ಅಪವಾದ ಆಕ್ಷೇಪಣೆಗಳು ಕೃಷ್ಣನಿಗೆ ಗೊತ್ತಿಲ್ಲದೆ ಇಲ್ಲ. ಅವನೂ ಸಹ ಯಶೋದೆಯ ಬಳಿಗೆ ಬಂದು 'ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ ಇಲ್ಲದ ಸುದ್ದಿ ಪುಟ್ಟಿಸಿ ಕಳ್ಳನೆಂದು ದೂರು ತಾರೆ ಗೋಪಿ ಎನ್ನ ಕೊಲ್ಲಬೇಕೆಂದು ಬಗೆಯೆ' ಎಂದು, ಅವರ ಆಪಾದನೆಗಳೆಲ್ಲ ನಿರಾಧಾರವೆಂದೂ ತಾನು ಕೇವಲ ಏನೂ ಅರಿಯದವನೆಂದೂ ವಾದಿಸುವನು. ಈ ವಾದ ಪ್ರತಿವಾದಗಳಿಗೆ ಕೊನೆಮೊದಲೆಲ್ಲಿ ? ಕೃಷ್ಣನ ಮಾಹಾತ್ಮ್ಯೆಯನ್ನು ಬಲ್ಲವರಿಗೆ ಅವನ ಆಗಮನವೆಂದು ಆದೀತೋ ಎಂದು ಒಂದೇ ಸಮನೆ ನಿರೀಕ್ಷೆ ಮಾಡುವರು. 'ಬಾರೋ ನಮ್ಮ ಮನೆಗೆ ಗೋಪಾಲಕೃಷ್ಣ' ಎಂದು ಅವರ ಹಂಬಲನ್ನು ವಿವರಿಸುವ ದಾಸರು, ಒಮ್ಮೆ 'ಬಾರೋ ಮನೆಗೆ ಗೋವಿಂದ, ನಿನ್ನಂಘ್ರಿ ಕಮಲವ ತೋರೋ ಎನಗೆ ಮುಕುಂದ, ನಲಿದಾಡು ಮನದಲಿ ಆನಂದ ನಂದನ್ನ ಕಂದ' ಎಂದು ಆಹ್ವಾನಿಸಿ 'ಕರಪದುಮ ಶಿರದಲಿ ನೀಡೋ ಭಕ್ತಪ್ರಸನ್ನ .ಕೂಡಿನೊ ತವ ದಾಸಜನರೊಳು' ಎಂದು ಬೇಡುವರು ದೇವಾನುದೇವತೆಗಳು ಕೃಷ್ಣನನ್ನು ತೊಟ್ಟಿಲಲ್ಲಿ ಇಟ್ಟು ತೂಗುವ ಚಿತ್ರವಂತೂ ತುಂಬ ರಮಣೀಯವಾಗಿದೆ. ಭಗವಂತನಿಗೆ ತಕ್ಕ ಅಪೂರ್ವವಾದ ಬ್ರಹ್ಮಾಂಡದ ತೊಟ್ಟಿಲನ್ನು ಕಟ್ಟಿ, ಅವನ ದಶಾವತಾರದ ಲೀಲೆಗಳನ್ನು ಅವನಿಗೇ ಒಪ್ಪಿಸಿ ಮಲಗಿಸುವ ಚಿತ್ರ ಭವ್ಯವಾಗಿದೆ. ಇದೇ ಅನುಭವವನ್ನು 'ಲಾಲಿ ಗೋವಿಂದ ಲಾಲಿ ಕೌಸಲ್ಯಾ ಬಾಲ ಶ್ರೀರಾಮ ಲಾಲಿ' ಎಂಬ ಮತ್ತೊಂದು ಲಾಲಿಪದದಲ್ಲಿ ಶ್ರೀಪಾದರಾಜರು ನಿರೂಪಿಸಿದ್ದರೂ, ಅಲ್ಲಿ ಜೋಗುಳ ಹೇಳುವವರು ಮರ್ತ್ಯಲೋಕದ ಚತುರ್ವಿಧ ಭಾಮಿನಿಯರು ಶ್ರೀಪಾದರಾಜರು ರಚಿಸಿರುವ ಈ ವಿಭಾಗದ ಕೀರ್ತನೆಗಳಲ್ಲಿ ಕೃಷ್ಣನ ಬಾಲ್ಯ ಮಿತ್ರನಾದ ಗೋವಳಿಗನೊಬ್ಬನು ಅವನನ್ನು ಕುರಿತು 'ಮರೆತೆಯೇನೊ ರಂಗಾ ಮಂಗಳಾಂಗ ತುರುಕರು ಕಾಯ್ವಲ್ಲಿ ತೊಂಡನಾಗಿದ್ದೆನ್ನ' ಎಂದು ದೇವರ ಬಾಲ್ಯವನ್ನು ನನಪು ಮಾಡಿಕೊಡುವ ಪ್ರಸಂಗ ಮನೋಹರವಾಗಿದೆ. ಗೋಪಾಲಕನಾದ ಗೋವಿಂದನ ವೇಷಭೂಷಣಗಳನ್ನೆಲ್ಲ ಇಲ್ಲಿ ವಿವರಿಸಿ (ಕೀ. ೪೨) ಕಡೆಗೆ ಅವನು ಲಕ್ಷ್ಮೀಸಮೇತನಾಗಿ ಲಕ್ಷ್ಮೀನಾರಾಯಣನೆನ್ನಿಸಿದ ಬಳಿಕ ಅವನನ್ನು ಜನರು ಕಾಣುವ ಪರಿಯೇ ಬೇರೆ.

ಎಂಬುದಾಗಿ ಪ್ರಶಂಸಿಸುವನು. ಇಲ್ಲಿ ಮುಗ್ಧ ಗೋಪಾಲಕನ ಸ್ನಿಗ್ಧವಾದ ಮನಸ್ಸಿನ ಕಲ್ಪನೆ ನವೀನವೆನ್ನಿಸಿ ಮನವೊಲಿಯುವಂತಿದೆ. ಶ್ರೀಪಾದರಾಜರ ಈ ವಾತ್ಸಲ್ಯವಾಹಿನಿ ಇಲ್ಲಿ ಕಿರುತೊರೆಯಾಗಿ ಕಂಡುಬಂದರೆ, ಮುಂದೆ ಶ್ರೀವ್ಯಾಸರಾಯರ ಕೃತಿಗಳಲ್ಲಿ ಮೈ ತುಂಬಿಕೊಂಡು, ಪುರಂದರದಾಸರ ರಚನೆಗಳಲ್ಲಿ ರಸದ ಹೆದ್ದೊರೆಯಾಗಿ ಹರಿಯುತ್ತದೆ.

## ಮಧುರಭಾವ ನಿರೂಪಣೆ

ಶ್ರೀಪಾದರಾಜರು ಚಿತ್ರಿಸಿರುವ ಗೋಕುಲವನ್ನು ಪ್ರವೇಶಿಸಿದೊಡನೆಯೆ ನಮಗೆ ಅಲ್ಲಿನ ಗೋಪಿಯರು ಮತ್ತು ಶ್ರೀಕೃಷ್ಣರ ಮಧುರ ಬಾಂಧವ್ಯವು ಎಷ್ಟು ಗಾಢವಾದದ್ದು ಎನ್ನುವುದು ವ್ಯಕ್ತವಾಗುತ್ತದೆ ಶ್ರೀಪಾದರಾಜರು ರಚಿಸಿರುವ ವೇಣುಗೀತಗಳು ಮತ್ತು ಭ್ರಮರಗೀತಗಳು ಹೆಸರುವಾಸಿಯಾದುವು ಇಲ್ಲಿನ ವೇಣುಗೀತಗಳಲ್ಲಿ ಶ್ರೀಕೃಷ್ಣನಿಗೂ ಗೋಪಿಯರಿಗೂ ಎಂತಹ ದೈವಿಕ ಸ್ನೇಹವಿತ್ತೆನ್ನುವುದನ್ನು ಮನಗಾಣಬಹುದು. ಭಾಗವತದಲ್ಲಿ ಸುಪ್ರಸಿದ್ಧವಾಗಿರುವ ವೇಣುಗೀತದ (ಸ್ಕಂ X, ಅ. ೩೫) ನಿರೂಪಣೆ ಯಂತೆಯೇ ಇವು ರಚಿತವಾಗಿದ್ದರೂ ಅದರ ಪ್ರತಿಕೃತಿಯಲ್ಲವೆನ್ನುವುದನ್ನು ಗಮನಿಸ ಬಹುದು.

> ತುರುಗಾಯ ಬಂದ ಗೋಪಿಯ ಕಂದ
> ಆನಂದದಿಂದ ಪ.
> ಸುರ ನರ ತರು ಮೃಗ ಜಲಚರ ಮೋಹಿಸೆ
> ತರಳೇರ ಮನಸೂರೆಯಾಗೆ ಕೊಳಲಿನಿಂದ ಅ ಪ.

ಎಂದು ಆರಂಭವಾಗುವ ಒಂದು ವೇಣುಗೀತದಲ್ಲಿ, ಶ್ರೀಕೃಷ್ಣನ ಮುರಲೀನಾದದಿಂದ ದೇವಾನುದೇವತೆಗಳ ಜೊತೆಗೆ ಸಂತೋಷವಡುತ್ತಿದ್ದ ಗೋಪಿಯರು ಆ ಆನಂದಾತಿ ರೇಕದಲ್ಲಿ ಹೇಗೆ ತಬ್ಬಿಬ್ಬಾದರು ಎಂಬ ಚಿತ್ರ ಚಿತ್ತಾಕರ್ಷಕವಾಗಿ, ಎರಡು ನುಡಿಗಳಲ್ಲಿ ಪೂರ್ತಿಯಾಗಿ ಮೂಡಿ ಬಂದಿದೆ ಆ ಗೋಪಿಯರು 'ತಂದೆಯ ಕಂದನೆಂದು ಕೊಂಕು ಳೊಳಿಟ್ಟು ಕಂದನ ಕೆಳಗಿಟ್ಟು' ಹೊರಗೋಡಿ ಬಂದರಂತೆ! ತಮ್ಮ ಆಭರಣಗಳನ್ನೆಲ್ಲ ಅಸ್ತವ್ಯಸ್ತವಾಗಿ ತೊಟ್ಟರಂತೆ! ಅವರು 'ಮುರಳಿಯ ಸ್ವರಕೆ ಮೋಹಿತರಾಗೆ, ಕರು ಗಳನ್ನು ತಂದು ಕರದಿಂದಲೆತ್ತಿ ತೊಟ್ಟಿಲೊಳಗೆ ಇರಿಸುತ್ತ ಹಾಲ ಬೆರಸುತ್ತ ಮಜ್ಜಿಗೆ ಮೊಸರಿನೊಳಗೆ, ಪರಮಾತ್ಮನ ನೆನೆದು, ಬಿಸಿಲು ಚಳಿ ಮಳೆಯೊಳಗೆ' ಹೊರಗೆ ಹೊರಟು ಬಂದರಂತೆ! ಈ ರೀತಿ ಮೈಮರೆತು ಬಂದ ಮಾನಿನಿಯರ ಎದುರಿಗೆ ಮದನ ಶತ ಕೋಟಿತೇಜನಾದ ಶ್ರೀಕೃಷ್ಣನು ನಿಂತು 'ಅಧರಾಮೃತಪಾನ ಮಾಡಿರೆಂದ ಬಾಯಾರದಿ ರೆಂದ, ಬದಿಯಲ್ಲಿ ಬಂದು ಕುಳ್ಳಿರಿಯೆಂದ, ಅವರಿವರನೆ ನೋಡ್ದ, ಚದುರೇರ ಮೋಹಕನೆ ನಾನೆಂದ ವಾದ್ಯದ ರವದಿಂದ'. ಈ ದಿವ್ಯಸಮಾಗಮವನ್ನು ಸಮಾಕ್ಷಿಸಿದ ರಂಭೆ, ಊರ್ವಶಿ, ಮೇನಕೆಯರು ನಾಟ್ಯವಾಡಿ ನಲಿದರು. ಈ ಎಲ್ಲದರ ಪರಮಲಕ್ಷ್ಯ ವನ್ನೂ ಶ್ರೀಪಾದರಾಜರು ಈ ಗೀತದ ಕಟ್ಟಕಡೆಯ ಸಾಲಿನಲ್ಲಿ ಒರುವ 'ಮಧುಸೂದನ

ಭಕ್ತರ ಕಾಯ್ದುವುದಕೀ ವಿಧದೊಳಗಾಡಿದ' ಎಂಬ ಮಾತಿನಲ್ಲಿ ಸಾಧಿಸಿದ್ದಾರೆ ಎನ್ನಬಹುದು. ಇದೆಲ್ಲವೂ ಪರಮಾತ್ಮನು ತನ್ನ ಭಕ್ತರಿಗಾಗಿ ತಾನು ಕೈಕೊಂಡ ಒಂದು ಲೀಲೆ ಎನ್ನುವಲ್ಲಿ ಒಟ್ಟು ಸನ್ನಿವೇಶವೇ ದಿವ್ಯಭಾವವನ್ನು ಗಳಿಸುತ್ತದೆ.

'ರಂಗ ಕೊಳಲನೂದುತ ಬಂದ ಯಶೋದೆಯ ಕಂದ ಕೊಳಲ ಧ್ವನಿಗೆ ವಿರಹವು ನಾರಿಯರಿಗೆ ಕಳವಳವಾಗಲು ಕಳವಳಿಸುತ ಬಂದ' ಎಂದು ಆರಂಭವಾಗುವ ಮತ್ತೊಂದು ಗೀತದಲ್ಲಿಯೂ ಬಹುಮಟ್ಟಿಗೆ ಆನಂದಾತಿರೇಕದ ಚಿತ್ರವೇ ಕಂಡುಬರುತ್ತದೆ. ಇಲ್ಲಿ ಗೋಪಿಯರು ಮಾತ್ರವೇ ಮುಗ್ಧರಾಗುವರಲ್ಲದೆ, 'ಹಂಗ, ವಿಹಂಗ, ಭುಜಂಗ, ನವಿಲು, ಸಾರಂಗ, ಗಿಣಿಯು, ಮಾತಂಗ ಮರಿಯು, ಕುರಂಗ'ಗಳು ಪರಮಾತ್ಮನ ಪಾದಗಳಿಗೆ ಬಂದು ಎರಗುವುವು. ಅಷ್ಟೇ ಅಲ್ಲ; 'ಆ ರಂಗನೂದ್ವ ಸಾರಂಗ ಕೇಳಿ ರುಷಿಪುಂಗ'ವರೂ ಬಂದು ಒಡಗೂಡುವರು. ಗೋಪಿಯರು ಬಂಗಾರದ ಬಟ್ಟಲಿನಲ್ಲಿ ಹಾಲನ್ನು ತುಂಬಿ ಕೊಂಡು ಆಮೋದದಿಂದ 'ಮಂಗಳ ಮಹಿಮ ನೀನೆಂದು ಅತಿ ಭಕುತಿಯೊಳಂದು' ತುಂಗವಿಕ್ರಮನಿಗಿತ್ತು ನಮಸ್ಕರಿಸಿದರು. ಅವರ ಆದರಾಭಿಮಾನಿಗಳಿಗೆ ಮನಸೋತ ಮುರಲೀಧರನು ಅವನತರಾಗಿದ್ದ ಅವರನ್ನು ಕೈಹಿಡಿದು ಮೇಲೆತ್ತಿದೊಡನೆಯೇ ಅವರು ಪುಳಕಿತರಾದರು. ಆ ಮಧುರಮಿಲನವನ್ನು ಕಂಡ ದೇವತೆಗಳು ಪುಷ್ಪವೃಷ್ಟಿ ಕರೆದರು. 'ಮಂದೋರದ್ಧರನಲ್ಲೆ ಮನವಿಟ್ಟ' ಆ ಮಾನಿನಿಯರಿಗೆ ಶ್ರೀ ಕೃಷ್ಣನ ಮುರಲೀನಾದದ ಮಾಧುರ್ಯಕ್ಕೆ ಮತ್ತಷ್ಟು ಜೇನು ಬೆರೆತಂತೆ ಸುತ್ತಮುತ್ತಲೂ ಚಂದ್ರೋದಯದ ಅನುಭವವಾಯಿತಂತೆ! ತಾವು ತಂದ ಗಂಧ, ಕಸ್ತೂರಿಗಳನ್ನು ರಂಗನ ಕೊರಳಿಗಿಟ್ಟು ಕೃತಾರ್ಥರಾದೆವೆಂದು ಅವರು ಹಿಗ್ಗುತ್ತಿರಲು, 'ರಂಗವಿಠಲ ದಯದಿಂದ' ಆ ಪುರಂಧ್ರಿಯರನ್ನು ಕಂಡು ನಲಿವಾಂತನು. (ಶ್ರೀಪಾದರಾಜರ ಈ ಎರಡು ವೇಣುಗೀತಗಳೂ ಏಕೈಕ ಆಕರದಲ್ಲಿ ಕಂಡುಬರುತ್ತಿರುವುದು ತುಂಬ ಸೋಜಿಗವೇ ಸರಿ ಈವರೆಗೆ ಇವುಗಳಲ್ಲಿ ಅಂಕಿತಪಲ್ಲಟವಾದ ಯಾವ ನಿದರ್ಶನವೂ ಕಂಡುಬಂದಿಲ್ಲವಾದ್ದರಿಂದ ಇವುಗಳನ್ನು ಅವರ ರಚನೆಗಳೆಂದೇ ಇಲ್ಲಿ ಸ್ವೀಕರಿಸಲಾಗಿದೆ.)

ಶ್ರೀಪಾದರಾಜರ ಈ ವೇಣುಗೀತಗಳಿಗೆ ಭಾಗವತದ ಕೆಲವು ಪಂಕ್ತಿಗಳು ಪ್ರೇರಣೆಯನ್ನಿತ್ತಿರುವಂತಿವೆ. ದೇವಾನುದೇವತೆಗಳು ಈ ರಮ್ಯ ದೃಶ್ಯದಲ್ಲಿ ಹೇಗೆ ಭಾಗವಹಿಸಿದರೆಂಬಲ್ಲಿ 'ವ್ಯೋಮಯಾನವನಿತಾಃ ಸಹ ಸಿದ್ಧೈರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ಕಾಮಮಾರ್ಗಣ ಸಮರ್ಪಿತ ಚಿತ್ತಾಃ ಕಶ್ಮಲಂ ಯಯುರಪಸ್ಮೃತನೀವ್ಯಃ' 'ಸವನಶಸ್ತದುಪಧಾರ್ಯ ಸುರೇಶಾಃ ಶಕ್ರ ಶರ್ವ ಪರಮೇಷ್ಠಿ ಪುರೋಗಾಃ' ಎಂಬ ಸಂಸ್ಕೃತ ವಾಕ್ಯಗಳ ಪ್ರಭಾವವನ್ನು ಗಮನಿಸಬಹುದು. ಗೋಪಿಯರು ಮಾತ್ರವಲ್ಲದೆ ಮೃಗಪಕ್ಷಿಗಳು ಕೊಳಲಿನ ನಾದಕ್ಕೆ ಮಾರುಹೋದವು ಎಂಬಲ್ಲಿ 'ವೃಂದಶೋ ವ್ರಜವೃಷಾ ಮೃಗಗಾವೋ ವೇಣುವಾದ್ಯಹೃತಚೇತಸ ಆರಾತ್ ದಂತದಷ್ಟ ಕವಲಾ ಧೃತಕರ್ಣಾ ನಿದ್ರಿತಾ ಲಿಖಿತಚಿತ್ರಮಿವಾಸನ್' ಎಂಬ ಮೂಲದ ಮಾತಿನ ನೆನಪೇ ಬರುವಂತಿದೆ. ಆದರೆ ಮೂಲದಲ್ಲಿಲ್ಲದ ಅನೇಕ ವಿವರಗಳಿಂದಲೂ, ಪ್ರಾಸಾನುಪ್ರಾಸಗಳ ಕನ್ನಡ

ನುಡಿಗಳ ಬೆಡಗಿನಿಂದಲೂ ಈ ಕನ್ನಡ ಕೀರ್ತನೆಗಳು ವಿಶಿಷ್ಟವಾಗಿವೆ.

ಶ್ರೀಕೃಷ್ಣ ಗೋಪಿಯರ ಸಮಾಗಮದ ಸಂದರ್ಭಕ್ಕಿಂತಲೂ ಅವರ ಅಗಲಿಕೆಯಿಂದ ಉಂಟಾಗುವ ವಿರಹಯಾತನೆಯ ಮೂಲಕ ದಿವ್ಯ ಪ್ರೇಮದ ಸ್ವರೂಪವೆಂತಹುದೆಂಬು ದನ್ನು ನಿರೂಪಿಸುವುದರಲ್ಲಿ ಶ್ರೀಪಾದರಾಜರ ಮನಸ್ಸು ಹೆಚ್ಚು ಆಸಕ್ತಿವಹಿಸಿರುವಂತಿದೆ. ಏಕೆಂದರೆ, ಇಲ್ಲಿ ತೋರಿಬರುವ ಇತರ ಕೀರ್ತನೆಗಳೆಲ್ಲ ಈ ವಿರಹವೇದನೆಯ ವಿವರಣೆಯೇ ಆಗಿದೆ. ಶ್ರೀಕೃಷ್ಣ ಬಲರಾಮರು ಅಕ್ರೂರನೊಡನೆ ಮಧುರೆಗೆ ತೆರಳುವ ಸುದ್ದಿ ಹಿಂದಿನ ದಿನವೇ ಗೋಪಿಯರ ಕಿವಿಯ ಮೇಲೆ ಬೀಳಲು, ಆಗಲೇ ಅವರು ಪರಸ್ಪರವಾಗಿ ಮಾತಾಡಿಕೊಂಡು ಮರುಗಲಾರಂಭಿಸುವರು. 'ಕೇಳಿದ್ಯಾ ಕೌತುಕವನ್ನು ಕೇಳಿದ್ಯಾ' ಎಂದು ಒಬ್ಬ ಗೋಪಿ ಇನ್ನೊಬ್ಬಳನ್ನು ಕರೆದು ಕೇಳುವಳು. ಆಕೆ, 'ಕೇಳಿದೆ ನಿನಗಿಂತ ಮುನ್ನ ಆಹಾ ಚಾಳಿಕಾರ ಕೃಷ್ಣ ಪೇಳದೆ ಮಧುರೆಗೆ ಕೋಳಿ ಕೂಗದ ಮುನ್ನ ನಾಳೆ ಪಯಣವಂತೆ' ಎಂದು ಉತ್ತರವೀಯುವಳು. ಅನಂತರ ಅಕ್ರೂರನ ಆಗಮನದ ವಾರ್ತೆ, ಕಂಸನ ಮನೆಯಲ್ಲಿ ಏರ್ಪಟ್ಟ ಬಿಲ್ಲ ಹಬ್ಬಕ್ಕಾಗಿ ರಾಮಕೃಷ್ಣರಿಗೆ ಬಂದಿರುವ ಆಹ್ವಾನ, ಕೃಷ್ಣನ ಜನ್ಮರಹಸ್ಯ ಮೊದಲಾದವುಗಳನ್ನು ಆ ಗೋಪಿಯರು ಪ್ರಸ್ತಾಪಿಸುವರು.

ಕೃಷ್ಣನನ್ನು ಕ್ಷಣಕಾಲವೂ ಅಗಲಿರಲಾರದ ಆ ಗೋಪಿಯರಿಗೆ ಅವನ ಅಗಲಿಕೆಯನ್ನು ಹೇಗೆ ಸಹಿಸುವುದೆಂದು ಅಸಹನೀಯವಾದ ಯಾತನೆಯಾಗುವುದು. 'ಮಾನನಿಧಿ ಶ್ರೀಕೃಷ್ಣ ಮಧುರೆಗೈದುವನಂತೆ ಏನು ಪಥವಮ್ಮ ನಮಗೆ' ಎಂದು ತಮಗೆ ತಾವೇ ಪ್ರಶ್ನಿಸಿಕೊಳ್ಳುವರು. ಮರುಕ್ಷಣದಲ್ಲಿಯೇ ಅವರಲ್ಲಿ ಕೆಲವರು 'ಮಾನವೇನಿನ್ನಿದಕೆ ಮಾನಿನಿಯರೆಲ್ಲರು ಆಣೆಯನ್ನು ಕಟ್ಟಿವನಿಗಡ್ಡ ನಿಲ್ಲುವ ಬನ್ನಿ' ಎಂದು ಸಲಹೆ ಮಾಡು ವರು. ಆ ಸೂಚನೆಗೆ ಸಮ್ಮತಿಸಿ ಎಲ್ಲರೂ ಬಂದು ಶ್ರೀಕೃಷ್ಣನನ್ನು ಆ ಸರಿ ರಾತ್ರಿ ಯಲ್ಲಿಯೇ ಕಾಣುವರು ಶ್ರೀಕೃಷ್ಣನು ಕಾರಣವೇನೆಂದು ಕೇಳಲು ಆ ಗೋಪಿಯರು ಇಂತು ಅವನಲ್ಲಿ ಮೊರೆಯಿಡುವರು :

ಹಲವು ಕಾಲವು ನಿನ್ನ ಸ್ನೇಹ ಸುಖವ ಹಾರೈಸಿಕೊಂಡಿರುತಿಹ
ಲಲನಾವ್ಯೂಹವ ಬಿಟ್ಟು ಅಕ್ರೂರನೊಡನೆ ನೀ ಮಧುರೆಗೆ ಪೋದರೆ
ಕಳೆಯಲಾಪೆವೇ ಕಾಂತ ಕೇಳು ದಿನವ ಈ ಕಂತುವಿನ ಬಾಧೆಗೆ
ಘಳಿಗೆಯೊಂದು ಯುಗವಾಗಿ ತೋರುತಿಹುದೋ ಜಲಜಾಕ್ಷ ನೀನಿಲ್ಲದೆ
ಬ್ಯಾಡ ಮಧುರೆಗೆ ಪೋಗಬ್ಯಾಡೆಲವೊ ಶ್ರೀಕೃಷ್ಣ
ಬೇಡಿಕೊಂಬೆವೊ ದೈನ್ಯದಿ
ನೋಡು ನಮ್ಮಾಳ್ಕೆ ದಯಮಾಡು ಮದನಂಗೀಡು
ಮಾಡುವುದೇನುಚಿತವಲ್ಲೋ ಮಾಧವ ಕೃಪಾಕರನೆ

ಎಂದು ಬಗೆಬಗೆಯಿಂದಾಗಿ ಬಿನ್ನೈಸಿಕೊಳ್ಳುವರು.

ಶ್ರೀಕೃಷ್ಣನಾದರೋ ಅವರ ಸರಳ ಸ್ವಭಾವಕ್ಕೆ ಮಾರುವೋಗಿ,

ಬಾಲಭಾವದಲಿಂದಲಂಗಸುಖವ ಬಹುಬಗೆಯಲಿಂದುಳುಹಿದೆ
ಲೋಲಲೋಚನೆ ನಿಮ್ಮ ಬಿಟ್ಟು ಪುರದ ನಾರೇರಿಗಾನೊಲಿದರೆ

ನೀಲಕಂಠನು ಮೆಚ್ಚ ನೋಡು ನಿಜವ ನಿಮಗ್ಯಾತಕೀ ಸಂಶಯ
ಕಾಲಕ್ಷೇಪವನಲ್ಲಿ ಮಾಡೆ ಕಿಂಚಿತ್ಕಾಲದೊಳಾನೈದುವೆ
ಪಾಲಿಸಿರೆನಗಪ್ಪಣೆಯ ಪಾಟಲ ಸುಗಂಧಿಯರೆ
ಕಾಲಹರಣವ ಮಾಡದೆ
ನಾಳೆ ಉದಯಕೆ ಪೋಗಿ ನಾಲ್ಕೆಂಟು ದಿನದೊಳು
ವ್ಯಾಳೆಗಿಲ್ಲಿಗೆ ಬರುವೆ ಕಾಳಾಹಿವೇಣಿಯರೆ

ಎಂದು ನೀಲಕಂಠನ ಹೆಸರನ್ನು ಹೇಳಿ ಭರವಸೆಯ ಮಾತುಗಳನ್ನು ಆಡುವನು. ನೀಲ ಮೇಘಶ್ಯಾಮನಿಗೆ ನೀಲಕಂಠನಲ್ಲದೆ ಬೇರಾರು ತಕ್ಕ ಸಾಕ್ಷಿ!

ಗೋಪಿಯರಾದರೋ ಮಧುರೆಯಲ್ಲಿರುವ ಹೆಂಗಸರು ಅತಿ ನಿಪುಣರೆಂದೂ ಅವರ ಮಾಯಾಜಾಲದಲ್ಲಿ ಕೃಷ್ಣನು ಸಿಕ್ಕಿಬಿದ್ದ ಬಳಿಕ, ಅವನು ತಮ್ಮಂತಹ ಹಳ್ಳಿಗಾಡಿನ ಹೆಣ್ಣು ಮಕ್ಕಳನ್ನು ನೆನೆಯುವುದು ಅಸಂಭವವೆಂದೂ ಶಂಕಿಸುವರು. 'ಬಿಲ್ಲ ಹಬ್ಬವೆ ಸುಳ್ಳು ಬಿಸರುಹಾಕ್ಷಿಯರಿಕ್ಷುಬಿಲ್ಲಿನುತ್ಸವಕೆ ನಿನ್ನ ಖುಲ್ಲ ಅಕ್ರೂರನನು ಕಳುಹಿ'ರುವನೆಂದೂ ವಾದಿಸುವರು. ಶ್ರೀಕೃಷ್ಣನು 'ಇಲ್ಲದಪವಾದ ಈ ಸುಳ್ಳು ಸುದ್ದಿಗಳ ನೀವೆಲ್ಲಿ ಸೃಜಿಸಿದಿರಿ ಸರಿಯಿಲ್ಲ ನಿಮಗಿಳೆಯೊಳಗೆ' ಎಂದು ಅವರ ಆತಂಕ ಆಕ್ಷೇಪಣೆಗಳನ್ನು ಅಲ್ಲಗಳೆಯುವನು. ಶ್ರೀಕೃಷ್ಣನ ಮನಸ್ಸನ್ನು ಪರಿವರ್ತಿಸುವ ಸಲುವಾಗಿ ಅವನನ್ನು ಬಾಯಿ ತುಂಬ ಕೊಂಡಾಡುವರು. ತಾವು ಕ್ರೂರನಾದ ಮಾರನಿಗೆ ಗುರಿಯಾಗಬೇಕಾಗುವುದೆಂದು ಗೋಳಿಡುವರು. ಅವರ ಪವಿತ್ರ ಪ್ರೇಮವನ್ನೂ ಸರಳ ಹೃದಯವನ್ನೂ ಬಲ್ಲ ಶ್ರೀಕೃಷ್ಣನು ಮೇಲಿಂದ ಮೇಲೆ ಸಮಾಧಾನದ ಮಾತುಗಳನ್ನು ಹೇಳುವನು. ಎಷ್ಟು ಹೇಳಿದರೂ ಅವರು ಸಗ್ಗದಿರಲು ಆಗ ಶ್ರೀಕೃಷ್ಣನು,

ಪರಿಪರಿಯಲಿ ನಿಮ್ಮ ಪಾರಿಸಿ ನೋಡೆ ಮುನ್ನ
ಕರುಣಕೆ ಕೊರತಿಲ್ಲ ಕಾಂತೆ ಕೇಳೆನ್ನ ಸೊಲ್ಲ
ತ್ವರಿತದಿ ಬಾರದಲೆ ತಡೆದು ನಾ ನಿಂತರಲ್ಲೆ
ಸರಸಿಜಭವ ಮಾರರಾಣೆ ಕಾಣೆ ಪ್ರವೀಣೆ

ಎಂದು ತನ್ನ ಮಕ್ಕಳಾದ ಬ್ರಹ್ಮ ಮತ್ತು ಮನ್ಮಥರ ಮೇಲೆ ಆಣೆಯಿಟ್ಟು ಹೇಳುವನು.

ಆ ಜಾಣೆಯರು ಆ ಆಣೆಗೂ ಒಂದು ಸದುತ್ತರವನ್ನು ಕೊಡುವರು :

ಮಾರನೆಂಬುವನಂದೆ ಮಡಿದನು ಶಿವನ ಮೂರನೆ ಕಣ್ಣಲಿ
ನಾರೇರಿಲ್ಲದೆ ನಾಭಿಯಿಂದ ಪಡೆದ ಆ ಬ್ರಹ್ಮನೆಂಬಾತನ
ನಾರಿ ಈರ್ವ ಕುಮಾರರಾಣೆ ಹರಿಯು ತಾನಿಟ್ಟನೇನೆಂಬೆವೆ
ಮಾರಿ ಹೊರಗಿನ ಹೊರಗೆ ಹೋಯಿತೆಂಬೊ ತೀರಾಯಿತೋ ಭಾವುಕಿ

ಮನ್ಮಥನು ಎಂದೋ ಶಿವನ ಹಣೆಗಣ್ಣಿನ ಉರಿಗೆ ಸಿಕ್ಕಿ ದಗ್ಧನಾಗಿ ಅನಂಗನೆನ್ನಿಸಿದ್ದಾನೆ. ಬ್ರಹ್ಮನಾದರೋ ಅಪೂರ್ವ ರೀತಿಯಲ್ಲಿ ಜನ್ಮವೆತ್ತಿರುವವನು. ಅವನಿಗಾಗಿ ಅತ್ತು ಕರೆಯುವ ಹೆತ್ತ ತಾಯಿಯೂ ಇಲ್ಲ! ಎಂದ ಮೇಲೆ ಇಂಥವರ ಮೇಲೆ ಆಣೆಯಿಟ್ಟು

ಫಲವೇನು ಎಂದು ಗೋಪಿಯರು ವ್ಯಂಗ್ಯವಾಗಿ ಹಂಗಿಸುವರು. ಶ್ರೀಕೃಷ್ಣನು ಮಾತನ್ನು ಮುಂದುವರಿಸದಿರಲು, ಅವರೇ,

ಹಲವು ಮಾತುಗಳ್ಯಾಕೆ ಜಲಜಾಕ್ಷ ನಿನ್ನ ಪದ
ನಳಿನಗಳ ನೆರೆ ನಂಬಿಹ
ಒಲುಮೆಯಲ್ಲಿರುತಿಪ್ಪ ಲಲನೆಯರೆಲ್ಲರನು
ಸಲಹೊ ಸಲಹದೆ ಮಾಣು ರಂಗವಿಠಲರೇಯ

ಎಂದು ಒಂದೇ ಮನಸ್ಸಿನಿಂದ ಪರಮಾತ್ಮನಲ್ಲಿ ಅನನ್ಯ ಶರಣಾಗುವರು.

ಪ್ರಕೃತ ಗೀತೆಗೆ 'ಶೃಂಗಾರ ಪಾರಿಜಾತ'ವೆಂಬ ಹೆಸರೂ ಉಂಟು. ಈ ರಚನೆಗೆ 'ವೃತ್ತನಾಮ'ವೆಂದು ಹೆಸರು ಕನ್ನಡಕ್ಕೆ ಅವರೆಗೆ ಅಪರಿಚಿತವಾದ ಈ ಬಂಧವನ್ನು ಶ್ರೀಪಾದರಾಜರು ಜಯದೇವನ 'ಗೀತಗೋವಿಂದ'ದ ಸರಣಿಯನ್ನು ಅನುಸರಿಸಿ ಬರೆದಿರಬಹುದೋ ಏನೋ ! ಇಲ್ಲಿ ಉಕ್ತವಾಗಿರುವ 'ಶ್ಲೋಕ' ಹಾಗೂ 'ಪದ'ಗಳ ಲಕ್ಷಣವೂ ಪರಿಚಿತ ಪ್ರಕಾರಗಳಿಗೆ ಹೊರತಾಗಿದೆ. ಇಲ್ಲಿ ಕಂಡುಬರುವ ಸಂಭಾಷಣಾ ಸಂವಿಧಾನ, ಶ್ರೀಕೃಷ್ಣ ಮತ್ತು ಗೋಪಿಯರ ಪರಿಶುದ್ಧ ಪ್ರೇಮ, ಪರಸ್ಪರ ಹಾವಭಾವ ಗಳು ಸಹಜವಾಗಿ ಮನಸೆಳೆಯುವಂತಿವೆ.

ಶ್ರೀಕೃಷ್ಣನು ಮಧುರೆಗೆ ಹೊರಟ ಬಳಿಕ, ಗೋಪಿಯರು ಪಡುವ ಯಾತನೆ ಹೇಳ ತೀರದು. ಈ ವಿರಹದ ಚಿತ್ರವನ್ನು ಶ್ರೀಪಾದರಾಜರು ಮೇಲಿಂದ ಮೇಲೆ ನಿರೂಪಿಸಿರು ತ್ತಾರೆ. ಕಂದಿ ನೊಂದ ಗೋಪಿಯರು ಬೃಂದಾವನಕ್ಕೆ ಬಂದರೆ ಅಲ್ಲಿರುವ ಸಚರಾಚರ ಗಳೆಲ್ಲವೂ ಅವರಿಗೆ ಶ್ರೀಕೃಷ್ಣನ ನೆನಪನ್ನೇ ಉಂಟುಮಾಡುತ್ತವೆ.

ಈ ವನದೆಡೆಗಳು ಈ ಲತೆವನಗಳು
ಈ ನದಿಪುಳಿನಗಳೀ ಶಶಿಶಿಲೆಗಳು
ಈ ಸುರತರು ನೆಳಲು ಶುಕ ಪಿಕ ರವ
ಯಾಕೆ ಮಾಧವನ ಮರೆಯಲೀಯದಿವೆ ಕೆಳದಿ
ಆ ಮುಗುಳುನಗೆಯ ಆ ಸೊಬಗ
ಈ ಸುರತರು ನೆಳಲೀ ರತಿಯ
ಈ ಸುರತವನರಿದ ಬಾಲೆಯರೆಂತೊ
ಈ ಸುಗುಣಮಯ ರಂಗವಿಠಲನ ಕೆಳದಿ

ಎಂದು ಶ್ರೀಕೃಷ್ಣನೊಡನೆ ತಾವು ರಮಿಸಿದ ಆ ರಸನಿಮಿಷಗಳನ್ನು ಕೆಳದಿಯೊಂದಿಗೆ ಹೇಳಿಕೊಂಡು ಒಬ್ಬ ಗೋಪಿ ಪರಿತಪಿಸುತ್ತಾಳೆ. ಮಧುರೆಗೆ ತೆರಳಿದ ಮಾಧವನು ಮತ್ತೆ ಮರಳುವುದಿಲ್ಲವೆಂದು ಅವಳು ಮ್ಲಾನವದನಳಾಗಿದ್ದಾಳೆ ಅವನು ಹಿಂತಿರುಗಲು ಬಯಸಿ ದರೂ ಅಲ್ಲಿನ ಚಪಲಾಕ್ಷಿಯರು ಬಿಟ್ಟುಕೊಡುವುದಿಲ್ಲವೆಂದು ಅವಳ ಆತಂಕ. ಅವರೋ ರತಿವಿದಗ್ಧರು ! ತಮ್ಮ ರಂಗನೋ ರಸಿಕಚಕ್ರಿ ! ಎಂದಮೇಲೆ ಅವನು ಬರುವುದೇ ಅಸಂಭವವೆಂದು ಅವಳ ಇತ್ಯರ್ಥ.

'ರಂಗನು ಮಧುರೆಯ ಅರಸಾದ ಮೇಲೆ ಗೋಕುಲದ ಗೊಲ್ಲತಿಯನ್ನು ನೆನೆಯುವು

ದುಂಟೆ' ಎಂದು ಕೆಳದಿಯೊಂದಿಗೆ ಹೇಳುವಳು. ಒಮ್ಮೆ ಒಂದು ವಸ್ತುವಿನ ಸವಿಯನ್ನು ರುಚಿ ನೋಡಿದ ಮೇಲೆ ಅದನ್ನು ಕಡೆಗಣಿಸುವುದು ಮನುಷ್ಯರ ಸ್ವಭಾವವಷ್ಟೆ. ಅದೇ ರೀತಿ ಶ್ರೀಕೃಷ್ಣನೂ ತಮ್ಮ ಬಗ್ಗೆ ನಿಷ್ಕರುಣಿಯಾಗಿರುವನೆಂದು ಬಗೆಬಗೆಯಾಗಿ ಆಕ್ಷೇಪಿಸುವಳು :

ಬಿಡುವರು ಅಧನರ ಗಣಿಕೆಯರು ನೆರೆ
ಬಿಡುವವು ವಿಫಲ ತರುವ ದ್ವಿಜಗಣ
ಬಿಡುವವು ಮೃಗ ದಳ್ಳುರಿಗೊಂಡಡವಿಯ
ಬಿಡುವನು ಜಾರ ಪರವಧುವನು ನೆರೆದಿನ್ನು
ಇವು ದಿಟವಾಯಿತು ನಮ್ಮ ವಲ್ಲಭನೊಳು
ಅಕಟಕಟಾ ರಂಗವಿಠಲನು ಕರುಣಿಯೆ.

ಈ ಒಂದೊಂದು ಮಾತೂ ನೊಂದು ಆಡಿದ್ದು. ಆದ್ದರಿಂದ ಅದು ಕಟುವಾಗಿ ಕಂಡುಬರಬಹುದು. ಈ ಉಪಮಾನಗಳಿಗೆ ಶ್ರೀಪಾದರಾಜರು 'ಭಾಗವತ'ಕ್ಕೆ ಎಷ್ಟರಮಟ್ಟಿಗೆ ಋಣಿಯಾಗಿದ್ದಾರೆನ್ನುವುದನ್ನು ಈ ಕೆಳಗಿನ ಸಂಸ್ಕೃತದ ವಿಭಾಗದೊಂದಿಗೆ ಹೋಲಿಸಿ ತಿಳಿಯಬಹುದು :

ನಿಸ್ಸ್ವಂ ತ್ಯಜಂತಿ ಗಣಿಕಾ ಅಕಲ್ಪಂ ನೃಪತಿಂ ಪ್ರಜಾಃ
ಅಧೀತವಿದ್ಯಾ ಆಚಾರ್ಯಮೃತ್ವಿಜೋ ದತ್ತದಕ್ಷಿಣಂ
ಖಗಾ ವೀತಫಲಂ ವೃಕ್ಷಂ ಭುಕ್ತ್ವಾ ಚಾತಿಥಯೋ ಗೃಹಮ್
ದಗ್ಧಂ ಮೃಗಾಸ್ತಥಾರಣ್ಯಂ ಜಾರೋ ಭುಕ್ತ್ವಾ ರತಾಂ ಸ್ತ್ರಿಯಮ್
(ಸ್ಕಂ. X, ಅ ೪೭, ಪ ೭–೮)

ಭಾಗವತದಲ್ಲಿ ನಿರೂಪಿತವಾಗಿರುವ ಭ್ರಮರಗೀತದ ಪೂರ್ವವಿವರಗಳನ್ನು ಶ್ರೀಪಾದರಾಜರು ಈ ರೀತಿ ಪ್ರತ್ಯೇಕವಾಗಿ ಸುಳಾದಿಯೊಂದರಲ್ಲಿ ಬಳಸಿಕೊಂಡಿರುವರು. ಶ್ರೀಕೃಷ್ಣನ ಪರವಾಗಿ ವ್ರಜಕ್ಕೆ ಬಂದ ಉದ್ಧವನನ್ನು ಕಂಡು, ಗೋಪಿಯರು ತಮ್ಮ ಇನಿಯನನ್ನು ಕರೆದೊಯ್ದ ಅಕ್ರೂರನೇ ಮತ್ತೆ ಬಂದನೋ ಎಂದು ಎಣಿಸಿ, 'ಅಂದೆಮ್ಮ ಕೊಂದ ಇಂದ್ಯಾರ ಕೊಲ್ಲಲಿ ಬಂದ' ಎಂದು ಆಕ್ಷೇಪಿಸುವರು. ಸಂಸ್ಕೃತದ ಮೂಲ ಸರಣಿಯನ್ನೇ ಅನುಸರಿಸಿ 'ಹೆತ್ತ ತಾಯಿ ತಂದೆಯರ ನೋಡಲೆಂದು ಇತ್ತಲಟ್ಟಿದನೆ ಉದ್ಧವ ನಿನ್ನ ಗೋವಳಾ ? ಮತ್ತ್ಯಾರುಂಟು ವ್ರಜದಲ್ಲಿ ನೆನೆವರು ? ಹತ್ತಿರಕೆ ತನ್ನವರಲ್ಲಿ ತಾ ಬಿಡುವನೆ ? ಅರ್ಧಕೃತ ಸ್ನೇಹ ನಮ್ಮೊಡನೆ ಮಾಡಿದ ಕೃಷ್ಣ ಮಂತ್ರಳಿಗೆ ಕುಸುಮದ ನೇಹದಂತೆ' ಎಂದು ಬಂದವನಲ್ಲಿ ತಮ್ಮ ದುಃಖವನ್ನು ತೋಡಿಕೊಳ್ಳುವರು. ಸಂಸ್ಕೃತದ ಮೂಲ ಹೀಗೆ ಸಾಗುತ್ತದೆ :

ಜಾನೀಮಸ್ತ್ವಾಂ ಯದುಪತೇಃ ಪಾರ್ಷದಂ ಸಮುಪಾಗತಮ್
ಭರ್ತ್ರೇಹ ಪ್ರೇಷಿತಃ ಪಿತ್ರೋರ್ಭವಾನ್ ಪ್ರಿಯಚಿಕೀರ್ಷಯಾ
ಅನ್ಯಥಾ ಗೋವ್ರಜೇ ತಸ್ಯ ಸ್ಮರಣೀಯಂ ನ ಚಕ್ಷ್ಮಹೇ
ಸ್ನೇಹಾನುಬಂಧೋ ಬಂಧೂನಾಂ ಮುನೇರಪಿ ಸುದುಸ್ತ್ಯಜಃ

ಅನ್ಯೇಷ್ವರ್ಥಕೃತಾ ಮೈತ್ರೀ ಯಾವದರ್ಥವಿಡಂಬನಮ್
ಪುಂಭಿಃ ಸ್ತ್ರೀಷು ಕೃತಾ ಯದ್ವತ್ ಸುಮನಸ್ಸಿವ ಷಟ್ಪದೈಃ
(ಸ್ಕಂ X, ಅ ೪೭, ಪ. ೪-೬)

ಗೋಪಿಯರು ತಮ್ಮ ಪ್ರಿಯನನ್ನು ಎಷ್ಟೇ ನಿಷ್ಠುರವಾಗಿ ನಿಂದಿಸಿದರೂ ಕಟ್ಟಕಡೆಯಲ್ಲಿ ತಮಗೆ ತಾವೇ ಸಮಾಧಾನ ಮಾಡಿಕೊಳ್ಳುವ ಪರಿಯನ್ನು ಕಂಡಾಗ, ಅವರ ಮಾತುಗಳಲ್ಲಿನ ವೇದನೆಯೆಷ್ಟು ಎನ್ನುವುದು ವಿದಿತವಾಗುತ್ತದೆ.

ಎಮ್ಮ ತನುಮನ ತನ್ನಧೀನವಲ್ಲೆ
ಅನ್ಯವರಿಯೆವು ತನ್ನರಿದಂತೆ ಮಾಡಲಿ
ಎಮ್ಮಸುವು ತನ್ನಧೀನವಲ್ಲೆ
ಅನ್ಯವರಿಯೆವು ತನ್ನರಿದಂತೆ ಮಾಡಲಿ
ನಮ್ಮ ರಂಗವಿಠಲರೇಯಗೆ ಇನ್ನು ಸಲೆ ಮಾರುಹೋದೆವೆ ಕೆಳದಿ
ಅವನ ಹಂಬಲವೆಮಗೆ ಜೀವನವವ್ವಾ
ಭುವನ ಮೋಹನ ರಂಗವಿಠಲನು ಕರುಣಿಯೆ

ತಮ್ಮ ಪ್ರಿಯನ ಹಂಬಲದಿಂದ ಅವರು ತಮ್ಮ ಜೀವವನ್ನು ಹಿಡಿದಿಟ್ಟಿದ್ದಾರೆಂಬ ಮಾತು ಸಾಕಷ್ಟು ಪರಿಣಾಮಕಾರಿಯಾಗಿದೆ.

ಈ ವಿರಹದ ತಾನವನ್ನೇ ಶ್ರೀಪಾದರಾಜರು ಇನ್ನೂ ಹಲವಾರು ತೆರನಾಗಿ ಮಿಡಿದಿರುವರು. ಒಮ್ಮೆ ಒಬ್ಬ ಗೋಪಿ, 'ಒಲ್ಲೆನವ್ವಾ ಲಕುಮಿಯ ನಲ್ಲ ಬಾರದಿದ್ದರೆ ತನು ಹೊರೆಯನೊಲ್ಲೆನವ್ವಾ' ಎಂದು ಹೇಳತೊಡಗಿ 'ಹಾರ ಕೊರಳಿಗೆ ಭಾರ ಹೂವಿನ ಭಾರ ಸೈರಿಸಲಾರೆನೆ, ಮಾರನಯ್ಯನು ಬಾರದಿದ್ದರೆ ಮಾರನಂಬಿಗೆ ಗುರಿಯ ಮಾಡಿ' ಎಂದು ತನ್ನ ಹೃದಯವನ್ನೇ ತೆರೆದಿಡುವಳು ತಿಳಿಗನ್ನಡದ ಈ ನುಡಿಗಳಲ್ಲಿ ಹೊರಹೊಮ್ಮಿರುವ ಭಾವಲಹರಿ ಗಮನಾರ್ಹವಾದುದು. ಆಕೆಗೆ 'ಮಂದಾನಿಲನ ಸಹಿಸಲಾಗದು. ನೊಂದೆ ಶುಕಪಿಕರವಗಳಿಂದ, ಚಂದ್ರಕಿರಣದಿ ಬೆಂದೆ ಇನ್ನೀ ವೃಂದಾವನವೇಕವನನಗಲಿ' ಎಂದು ವಿಹ್ವಲಗೊಳ್ಳುವಳು. ದುಃಖದ ಬಾಧೆಯೊಂದಿಗೆ ಸುಖದ ಸ್ಮರಣೆ ಬಂದು ಮತ್ತಷ್ಟು ಯಾತನೆಯಾಗುತ್ತದೆ. ಹೀಗೆ ನಿರಾಭರಣಳಾಗಿ ನಿಟ್ಟುಸಿರನ್ನು ಬಿಡುತ್ತ ಬೆಂದು ಬಸವಳಿದಿದ್ದ ಗೆಳತಿಯನ್ನು ನೋಡಿ, ಆಕೆಯ ಸಖಿಯೊಬ್ಬಳು 'ಚಿಂತೆಯನು ಮಾಡದಿರು ಚದುರೆ ನಿನಗೆ ನಾನು ಕಂತುಪಿತನನು ತೋರುವೆ, ಸಂತೋಷದಿಂದ ಸರ್ವಾಭರಣವನ್ನಿಟ್ಟುಕೊಂಡು ನಿಂತು ಬಾಗಿಲೊಳು ನೋಡೆ ಪಾಡೆ' ಎಂದು ಭರವಸೆಯ ಮಾತುಗಳನ್ನಾಡಿ ಆಕೆಯನ್ನು ಪ್ರಿಯನ ಸಮಾಗಮಕ್ಕಾಗಿ ಸಿದ್ಧವಾಗುವಂತೆ ಪ್ರೇರಿಸುವಳು. ಕನಸಿನಲ್ಲಿ ಕೃಷ್ಣನನ್ನು ಕಂಡು ನಲಿದ ಬಗೆಯನ್ನು ಒಬ್ಬಳು ಎಚ್ಚತ್ತು ವಿವರಿಸಿದರೆ, ಮತ್ತೊಬ್ಬಳು ಹಿಂದಿನ ದಿನ ತನ್ನ ಸ್ವಾಮಿಯು ಎಂತು ತನ್ನೊಡನೆ ರಮಿಸಿದನೆಂಬುದನ್ನು ನೆನೆನೆನೆದು 'ಇಂದಲ್ಲದ್ದಿರೆ ನಾಳೆ ಬಹೆನೆಂದು ಇದ್ದರೆ ಕಂದರ್ಪ ಕಾಡುತಿಹನೆ ತಂದು ತೋರಿಸು ತನ್ನ ತಂದೆಯನೆಂದು ಪೂವಿಂದ ಬಾಣವ ಎಸೆವನೆ' ಎಂಬುದಾಗಿ ತನ್ನ ಮದನಬಾಧೆಯನ್ನು ಮದನನಿಗೇ ಅನ್ವಯಿಸಿ ಹೇಳುವಳು. 'ಕೊಂಬು ಕೊಳಲನೂದುತ್ತ ನಂಬಿಸಿ ಪೋದನೆ

ಯಮ್ಮಾ ಅಂಬುಜನಾಭಗೆ ಮನ ಹಂಬಲಿಸುತ್ತಿದೆಯಮ್ಮಾ' ಎಂದು ನೊಂದುಕೊಳ್ಳುವ ಗೋಪಿಯೊಬ್ಬಳು ತನಗಾದ ದಾರುಣ ವೇದನೆಯನ್ನೆಲ್ಲ ಬಿಡಿಸಿ ಬಿಡಿಸಿ ಹೇಳುವಳು. ಕಡೆಗೆ, ಈ ಗೋಪಿಯರ ಮನಸ್ಸು ವಿಧಿಯತ್ತ ತಿರುಗುತ್ತದೆ 'ವಿಧಿಗೆ ದಯವಿಲ್ಲವಕ್ಕ ಎಮ್ಮ ಮ್ಯಾಲೆ ಯದುಪತಿಯನಗಲಿಸಿದ ಒಮ್ಮಿಂದಲೊಮ್ಮೆ' ಎಂದು ಅವನನ್ನು ದೂಷಿಸಿ 'ಹಕ್ಕಿಯ ಮ್ಯಾಲುಳ್ಳ ದಯ ನಮ್ಮ ಮ್ಯಾಲೆ ಇಕ್ಕದೇಕೆ ಹೋದ್ಯೋ ವಿಧಿಯೇ ರೆಕ್ಕೆ ಎರಡುಳ್ಳಗ ಮಧುರೆಗೆ ಹೋಗಿ ಫಕ್ಕನೆ ಶ್ರೀಹರಿಯೊಡನೆ ಕೂಡುತಿದ್ದೆವಲ್ಲ' ಎಂದು ತಮ್ಮ ಜನ್ಮವನ್ನೇ ಹಳಿದುಕೊಳ್ಳುತ್ತಾರೆ. ಇದೇ ರೀತಿ ಈ ವಿರಹಾನಿಲ ಬಿಡಿಬಿಡಿಯಾಗಿ ಕಿಡಿಹಾರುತ್ತ ಕಡೆಗೆ ಅದು ಶ್ರೀಪಾದರಾಜರ 'ಭ್ರಮರ ಗೀತೆ'ಯಲ್ಲಿ ಉಜ್ವಲವಾದ ಜ್ವಾಲೆಯಾಗಿ ತೋರಿಬರುತ್ತದೆ.

ಶ್ರೀಪಾದರಾಜರ 'ಭ್ರಮರಗೀತೆ' ಭಾಗವತದಲ್ಲಿ ಉಕ್ತವಾಗಿರುವ 'ಭ್ರಮರಗೀತ'ಯ ಪ್ರಸಂಗದಂತೆ ಪ್ರಾರಂಭವಾದರೂ, ವಿಷಯ ಪ್ರತಿಪಾದನೆಯಲ್ಲಿ ಅನೇಕ ಸ್ವಂತ ಕಲ್ಪನೆಗಳು ಬೆರೆತು ಒಟ್ಟು ರಚನೆಯೇ ಒಂದು ಸ್ವತಂತ್ರವಾದ ಭಾವಗೀತೆಯೆಂಬಂತೆ ರಸವತ್ತಾಗಿದೆ ಸಂಸ್ಕೃತ ಮೂಲದಲ್ಲಿ ಹದಿನೇಳು ಶ್ಲೋಕಗಳಿದ್ದರೆ, ಪ್ರಕೃತ ಕನ್ನಡ ರಚನೆಯಲ್ಲಿ ಅಷ್ಟಪಾದಗಳುಳ್ಳ ಒಂಬತ್ತು ನುಡಿಗಳಿವೆ. ಗೋಕುಲಕ್ಕೆ ಬಂದ ಉದ್ಧವನೊಡನೆ ಗೋಪಿಯರು ಮಾತನಾಡುತ್ತಿರಬೇಕಾದರೆ, ಅಲ್ಲಿಗೆ ಒಂದು ದುಂಬಿ ಝೇಂಕರಿಸುತ್ತ ಒರುತ್ತದೆ. ಗೋಪಿಯೊಬ್ಬಳು ಅದನ್ನು ಸಂಬೋಧಿಸಿ ಅದು ಕೃಷ್ಣನ ದೂತನಿರಬೇಕೆಂದು ಭಾವಿಸಿ, ಪರಮಾತ್ಮನು ವ್ರಜದ ಗೋಪಿಯರನ್ನು ಹೇಗೆ ಕಾಡುಪಾಲು ಮಾಡಿ ಹೋದನೆನ್ನುವುದನ್ನು ವಿವರಿಸುವುದೇ ಭಾಗವತದ ಕಥಾಭಾಗ.

> ಮಧುಪ ಕಿತವಬಂಧೋ ಮಾ ಸ್ಪೃಶಾಂಘ್ರಿಂ ಸಪತ್ನ್ಯಾಃ
> ಕುಚವಿಲುಲಿತ ಮಾಲಾ ಕುಂಕುಮ ಶ್ಮಶ್ರುಭಿರ್ನಃ

ಸಂಸ್ಕೃತದ ನಿರೂಪಣೆ ಹೀಗೆ ಮೊದಲಾದರೆ, ಕನ್ನಡದ ರಚನೆ ಈ ಕೆಳಕಂಡಂತೆ ಆರಂಭವಾಗುತ್ತದೆ :

> ಭೃಂಗಾ ನಿನ್ನಟ್ಟಿದನೇ ಶ್ರೀರಂಗ ಮಧುರೆಲಿ ನಿಂದು
> ಅಂಗಜಲುಬ್ಧಕ ಪೂಗೋಲಂಗಳ ತಡೆಯನಿಕ್ಕಿ
> ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ ಗುರಿಯೆಚ್ಚು
> ಹಿಂಗಿಸುತೈಧಾನೆ ಅಸುವ ಹೇ ಕಿತವಾ

ದುಂಬಿಯನ್ನು ಸಂಸ್ಕೃತದಲ್ಲಿ 'ಕಿತವ ಬಂಧೋ' ಎಂದು ಕರೆದಿದ್ದರೆ, ಕನ್ನಡದಲ್ಲಿ ನೇರವಾಗಿ ಅದನ್ನು 'ಕಿತವಾ' ಎಂದು ಕರೆಯಲಾಗಿದೆ ಮಧುರೆಯಲ್ಲಿ ತಮ್ಮ ಸವತಿಯರಂತೆ ಇರುವ ಸ್ತ್ರೀಯರ ಗಂಧಲೇಪನಗಳನ್ನು ಶ್ರೀಕೃಷ್ಣನ ಮೂಲಕ ತನ್ನ ಮೈಗೆ ಹತ್ತಿಸಿಕೊಂಡಿರುವ ಆ ದುಂಬಿಯನ್ನು ತಮ್ಮನ್ನು ಮುಟ್ಟಬೇಡವೆಂದು ಹೇಳಿ ಗೋಪಿಯರು ಕುಪಿತರಾಗುವರು. ಈ ಆಕ್ಷೇಪಣೆಯ ಧಾಟಿಯೇ ಮುಂದೆಯೂ ಸಾಗಿ,

ಶ್ರೀಕೃಷ್ಣನು ಆ ದುಂಬಿಯಂತೆಯೇ ಎಂತಹ ಮೋಸಗಾರನೆಂಬುದನ್ನು ಹಲವಾರು ನಿದರ್ಶನಗಳ ಮೂಲಕ ವ್ಯಕ್ತಪಡಿಸುತ್ತಾರೆ ಒಂದು ರೀತಿಯಲ್ಲಿ ಅವರ ವಿರಹತಾಪವು ಅಸಹನೀಯವಾದ ಅಸಮಾಧಾನವಾಗಿ ಪರಿಣಮಿಸಿದೆ. ಮನೆ, ಮಠ, ಬಂಧು ಬಳಗಗಳನ್ನೆಲ್ಲ ತೊರೆದು, ಬೇಟೆಗಾರನ ಹಾಡಿಗೆ ಮರುಳಾದ ಜಿಂಕೆಯಂತೆ ಶ್ರೀಕೃಷ್ಣನ ಪ್ರೇಮಕ್ಕೆ ಮಾರುಹೋಗಿ ತಾವು ಕೆಟ್ಟೆವೆಂದು ಕೊರಗುವರು.

ಶ್ರೀಪಾದರಾಜರಾದರೋ ಈ ಪ್ರಸಂಗದ ಮೂಲೋದ್ದೇಶಕ್ಕೆ ಭಂಗವುಂಟಾಗದಂತೆ ಗೋಪಿಯರ ವಿರಹಯಾತನೆಯನ್ನೇ ವಿವರ ವಿವರವಾಗಿ ಬೆಳೆಸಿರುತ್ತಾರೆ ಮೂಲದಲ್ಲಿ ಬರುವಂತೆ ಪ್ರಾರಂಭದಲ್ಲಾಗಲಿ, ಕಡೆಯಲ್ಲಾಗಲಿ ಇಲ್ಲಿ ಉದ್ಧವನ ಪ್ರವೇಶವೇ ಕಂಡುಬರುವುದಿಲ್ಲ ಗೋಪಿಯರು ತಮ್ಮ ಬಳಿಗೆ ಬಂದ ಒಂದು ಭ್ರಮರವನ್ನು ಶ್ರೀಕೃಷ್ಣನ ದೂತನಿರಬೇಕೆಂದು ಎಣಿಸಿ, ಅದರೊಂದಿಗೆ ತಮ್ಮ ಅಗಲಿಕೆಯ ನೋವನ್ನು ಹೇಳಿಕೊಳ್ಳುತ್ತಾರೆ. ಆ ದುಂಬಿಯನ್ನು ಕಂಡಕೂಡಲೆ 'ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯ' ಎಂದು ನುಡಿದು, 'ಚೆನ್ನಿಗರರಸ ಕುಶಲೋನ್ನತಿಯೊಳಿಹನೇನೋ' ಎಂದು ಗೋವಿಂದನ ಯೋಗಕ್ಷೇಮವನ್ನು ಕೇಳುವರು. ಚಿಕ್ಕಂದಿನಿಂದಲೂ ಅವನನ್ನು ಬಲ್ಲವರಾದ್ದರಿಂದ ಅವನ ಮೇಲಿನ ಅಭಿಮಾನ ಮೊದಲು ಹೊರಹೊಮ್ಮುತ್ತದೆ. ಕೃಷ್ಣನು ತಮ್ಮನ್ನು ಹೇಗೆ ನಂಬಿಸಿ ಕೈಬಿಟ್ಟಿರುವನೆಂದು ನೊಂದುಕೊಳ್ಳುತ್ತಾರೆ. ಆ ಉದ್ಧವನು ಬಂದದ್ದನ್ನು ಕಂಡು, ಕೃಷ್ಣನು ಅವನ ತಂದೆ ತಾಯಿಗಳನ್ನು ನೆನೆದು ಅವನನ್ನು ಕಳುಹಿಸಿರಬೇಕೆಂದು ಮೂಲದಲ್ಲಿದ್ದರೆ, ಇಲ್ಲಿ ಗೋಪಿಯರು ದುಂಬಿಯನ್ನೇ ಆ ಪ್ರಶ್ನೆಯನ್ನುಕೇಳುವರು 'ನಮ್ಮಹಂಬಲಿನ್ನೇನವಗೆ ಶ್ರೀಹರಿಗೆ ಹೊಮ್ಮೇಲಟ್ಟದಲಂಚೆಯಗಮ್ಮನೇರ ಕುಚದ ಕುಂಕುಮ್ಮ ಕಸ್ತೂರಿಯ ಕರದಿಮ್ಮನದಿ ಸಿಲುಕಿದಂಗೆ' ಎಂಬ ಪಂಕ್ತಿಯ ಒಂದು ಅಂಶವು ಮೂಲದಲ್ಲಿ ಗೋಪಿಯರು ತಮ್ಮ ಸವತಿಯರ ಬಗ್ಗೆ ಅಸೂಯೆಪಡುವುದನ್ನು ಹೋಲುತ್ತದೆ. ಅನಂತರ, ಅವರು ವ್ರಜದಲ್ಲಿ ಶ್ರೀಕೃಷ್ಣನ ಕೊಳಲಿನ ಗಾನಕ್ಕೆ ಮನಸೋತು ಕಳೆದ ದಿನಗಳನ್ನು ಸ್ಮರಿಸುತ್ತಾರೆ. ಅಷ್ಟು ನಿಕಟವಾಗಿ ತಮ್ಮೊಂದಿಗಿದ್ದವನು ಹೇಗೆ ಕಲ್ಲೆದೆಯವನಂತೆ ತಮ್ಮಿಂದ ದೂರವಾಗಿರುವನೆಂದು ಪರಿತಪಿಸುವರು. ದೇವಾನುದೇವತೆಗಳ ಪೂಜೆಗೆ ಪಾತ್ರನಾದ ಅಂಥವನನ್ನು ಅಗಲಿದ್ದರೂ ತಾವು ಇನ್ನೂ ಜೀವಸಹಿತವಾಗಿ ಉಳಿದಿರುವುದು ಎಂತಹ ವಿಡಂಬನವೆಂದು ವ್ಯಥೆಪಡುವರು. ಶೃಂಗಾರಮೂರ್ತಿಯಾದ ಶ್ರೀಕೃಷ್ಣನನ್ನೂ, ಸುಗಂಧಾದಿಗಳಿಂದ ಮನಸೆಳೆಯುವ ಆ ಮಾಧವನನ್ನೂ ನೆನೆನೆನೆದು ತಮ್ಮನ್ನು ಹೇಗೆ ಒತ್ತರಿಸಿ ಮಧುರೆಗೆ ರಥವೇರಿ ತೆರಳಿದನೆಂಬುದನ್ನು ಹೇಳಿಕೊಂಡು ಹಂಬಲಿಸುವರು. ವಿರಹೋದ್ವೇಗವೇ ಪ್ರಧಾನವಾಗಿ ಕಂಡುಬಂದರೂ, ಈ ಗೋಪಿಯರು ತಮಗೂ ಶ್ರೀಕೃಷ್ಣನಿಗೂ ಎಲ್ಲಿಯ ಸಂಬಂಧವೆಂದು ವಿವೇಚಿಸುವ ಒಂದು ನುಡಿ ಅರ್ಥವತ್ತಾಗಿದೆ :

ಲಕ್ಷುಮಿರಮಣನವ ಸೂಕ್ಷುಮ ಗೊಲ್ಲತೇರಾವು
ಕುಕ್ಷಿಯೊಳು ಬೊಮ್ಮಾಂಡವವಗೆ ಮಕ್ಷಿಕಗಳಂತಿಪ್ಪೆವು

ಮೋಕ್ಷದರಸನು ಆವ ಗೋಕ್ಷೀರತೃಪ್ತ್ರನಾವು
ಲಕ್ಷಿಸುವದೆಂತೋ ಎಮ್ಮನು ಶ್ರೀಹರಿಯು
ರಕ್ಷಿಸಲುದಿಸಿ ಜನರಕ್ಷಣೆಗೆ ಪಾಲ್ಬೆಣ್ಣೆಯ
ಭಕ್ಷಿಸಿ ನಿರುತ ನಮ್ಮ ಅಕ್ಷಿಗೆ ಹಬ್ಬವನುಣಿಸಿ
ಈ ಕ್ಷೋಣಿ ಚರಾಚರದೀಕ್ಷಿಗೆ ನರ ಸಾಮ್ಯ
ವಕ್ಷ [ವು] ಣರಾದೆವೊ ಮೂರ್ಖರೋ ಹೇ ಕಿತವಾ

ಆತನ ವಕ್ಷಸ್ಥಲದಲ್ಲಿ ಸರ್ವದಾ ಲಕ್ಷ್ಮಿಯು ನೆಲಸಿರುವಳೆಂದೂ ತಮಗಿನ್ನು ಗತಿಯೇ ನೆಂದೂ ಪರಿತಪಿಸುವ ಭಾಗವತದ ಗೋಪಿಯರಿಗೂ, ಲಕ್ಷ್ಮೀರಮಣನಾದ ಅವನಿಗೂ ಕೇವಲ ಸಾಧಾರಣ ವರ್ಗಕ್ಕೆ ಸೇರಿದ ತಮಗೂ ಬಾಂಧವ್ಯವುಂಟೆ ಎಂದು ತಾರತಮ್ಯಭಾವ ದಿಂದ ವಿವೇಚಿಸುವ ಶ್ರೀಪಾದರಾಜರ ಗೋಪಿಯರ ಸರಣಿಗೂ ಅಂತರವುಂಟು. ಲೋಕ ರಕ್ಷಕನಾದ ಕೃಷ್ಣನನ್ನು 'ನರರ ಸಾಮ್ಯ'ನೆಂದು ಬಗೆಯುವುದು 'ಅಕ್ಷಮ್ಯ'ವೆಂದು ಹೇಳುವ ಮಾತಂತೂ ಈ ಗೋಪಿಯರಿಗೆ ಶ್ರೀಕೃಷ್ಣನಲ್ಲಿ ಎಷ್ಟು ಪೂಜ್ಯಭಾವವಿದೆಯೆನ್ನುವುದನ್ನು ಸ್ಪಷ್ಟಪಡಿಸುತ್ತದೆ. ಆತನೊಂದಿಗೆ ಅಂದು ರಮಿಸುವ ಮಧುರೆಯ ಮಾನಿನಿಯರು ಪುಣ್ಯಶಾಲಿಗಳೆಂದೂ, ಅವನು ತಮ್ಮೊಂದಿಗೆ ಲೀಲಾವಿನೋದಗಳಲ್ಲಿ ಮಗ್ನನಾಗಿದ್ದಾಗ ತಮ್ಮಿಂದ ಏನಾದರೂ ಅಪಚಾರವಾಗಿದ್ದರೆ ಅದನ್ನು ಕ್ಷಮಿಸುವಂತೆ ಕೃಷ್ಣನಿಗೆ ತಿಳಿಸೆಂದು ಬೇಡುವ ಈ ಗೋಪಿಯರ ಸಂಸ್ಕಾರ ಬಹಳ ಹಿರಿದಾದದ್ದು. ಆ ಪರಮಾತ್ಮನು ತಮ್ಮೊಂದಿಗಿದ್ದಾಗ ಆಡಿದ ಮಾತುಕತೆಗಳನ್ನೇ ಹೊಗಳುತ್ತ ಹಾಡುತ್ತ, ದಶಾವತಾರಿಯ ಲೀಲೆಯನ್ನು ಸ್ಮರಿಸುತ್ತ ಕಾಲಕಳೆಯುವೆವೆಂಬ ಅವರ ನಿಲುವನ್ನು ಪರಿಭಾವಿಸಿದಾಗ ಈ ಗೋಪಿಯರ ಪ್ರೇಮ ಎಷ್ಟು ನಿರ್ಮಲವೂ, ನಿಷ್ಕಪಟವೂ, ನಿರಸೂಯಾಪರವೂ ಆದುದು ಎಂಬುದು ವಿದಿತವಾಗುತ್ತದೆ. ಶ್ರೀಪಾದರಾಜರ 'ಭ್ರಮರಗೀತ'ದಲ್ಲಿ ಗೋಪಿಯರ ಮೊರೆಯೊಂದೇ ಮೊದಲಿನಿಂದ ಕಡೆಯವರೆಗೆ ಕೇಳಿಬರುತ್ತದೆ.

ಈ ಪ್ರಸಂಗವು ಶ್ರೀಪಾದರಾಜರಿಗೆ ಎಷ್ಟು ಪ್ರಿಯವೆನ್ನುವುದಕ್ಕೆ ಇದೇ ಸಂದರ್ಭವನ್ನು ಕುರಿತು ರಚಿಸಿರುವ ಮತ್ತೊಂದು ಕೀರ್ತನೆಯಿರುವುದೇ ಸಾಕ್ಷಿ. 'ವನಜನಯನನ ಮನವ ಮಧುಪ ನಂಬುವರೆ ಮನದೆಗೆದ ಮದನಪಿತ ವಿರಲರೇಯಾ' ಎಂದು ಆರಂಭವಾಗುವ ಈ ಕೀರ್ತನೆಯಲ್ಲಿ (ಕೀ. ೫೧) ಗೋಪಿಯರು ದುಂಬಿಯೊಂದಿಗೆ ತಮ್ಮ ದುಃಖವನ್ನು ತೋಡಿಕೊಳ್ಳುವ ವಿವರಣೆಯಿದೆ: 'ಇವನ ವಚನದ ಕಪಟ ತಿಳಿಯಲರಿಯದೆ ನಾವು ನವಹರಿಣಿಯಂತೆ ಮರುಳಾಗಿ ಕೇಳಿ ವಿವರವರಿಯದೆ ನಾವು ಕಡುನೊಂದೆವೆಲೊ ಮಧುಪ, ಇವನ ಗುಣವರಿಯದೆ ಕಡುಕರುಣಿ ಎಂಬರು' ಎಂಬಲ್ಲಿ, ಮೂಲದಲ್ಲಿ ಬರುವ 'ವಯ ಮೃತಮಿವ ಜಿಹ್ಮವ್ಯಾಹೃತಂ ಶ್ರದ್ಧಧಾನಾಃ ಕುಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ' ಎಂಬ ಉಪಮಾನವನ್ನು ಬಳಸಿರುವುದಲ್ಲದೆ, ಅಲ್ಲಿನ ಕಟಕಿಯೂ ಬೆರೆತಿದೆ. ಆದರೆ, ಶ್ರೀಪಾದರಾಜರು ತಮ್ಮ ಹಿಂದಿನ ರಚನೆಯಲ್ಲಿರುವಂತೆಯೇ ಇಲ್ಲಿಯೂ ಗೋಪಿಯರು 'ಮರುಳುಗಳು ನಾವು ಶ್ರೀಪತಿಯ ಕೂಟವ ಬಯಸಿ ಇರುಳು ಹಗಲು ಜರಿಜರಿದಳಲುವೆವು, ಸಿರಿಯುವನ ಉಂಗುಟದ ಉಗುರು ಗುಣ ಕಾಣಳೆಲೋ ಹರಿ

ನಮ್ಮ ನೆನೆವುದಚ್ಚರಿಯಲ್ಲವೆ' ಎಂದು ತಮಗೆ ತಾವೇ ಸಮಾಧಾನ ಹೇಳಿಕೊಂಡರೆಂಬುದಾಗಿ ಹೇಳದೆ ಇಲ್ಲ. ಈ ಎರಡು ರಚನೆಗಳಲ್ಲಿಯೂ ವಿದಿತವಾಗುವ ಶ್ರೀಪಾದರಾಜರ ಸ್ವತಂತ್ರ ದೃಷ್ಟಿ ಮನನೀಯವಾದುದು. ಈ ಎರಡು ರಚನೆಗಳೂ ಒಂದೇ ಒಂದು ಭಾವವನ್ನು ಆದ್ಯಂತವಾಗಿ ನಿರೂಪಿಸುವುದರಿಂದ ಉತ್ತಮವಾದ ಭಾವಗೀತೆಗಳಂತಿವೆಯೆನ್ನಬಹುದು.

ಭಾಗವತದ ಮೂಲ ಕಥಾವಸ್ತುವನ್ನು ಸ್ವಲ್ಪವೂ ಬದಲಾಯಿಸದಂತೆ ಈ ಪ್ರಸಂಗವನ್ನು ಕನ್ನಡದಲ್ಲಿ ನಿರೂಪಿಸಿರುವ ಕೀರ್ತಿ ಕನ್ನಡ ಭಾಗವತದ ಕರ್ತೃವಾದ ನಿತ್ಯಾತ್ಮಕ ಶುಕಯೋಗಿಗೆ ಸಲ್ಲಬೇಕಾದದ್ದು. ಅಲ್ಲಿ ಈ ಸಂದರ್ಭವನ್ನು ೪೬ ಪದ್ಯಗಳಲ್ಲಿ ಬಹು ಅಚ್ಚುಕಟ್ಟಾಗಿ ಪ್ರತಿಪಾದಿಸಿದೆ. ಮೂಲದಲ್ಲಿನ ಪಾತ್ರಗಳು, ಉಪಮಾನಗಳು ಮೊದಲಾದುವು ತಪ್ಪದೆ ಬಂದಿವೆ.[1] ಶ್ರೀಪಾದರಾಜರ ಬಳಿಕ ಈ ಪ್ರಸಂಗವನ್ನು ವಾದಿರಾಜರು ಮೂಲಕೆ ಅನುಸಾರವಾಗಿಯೇ ವಿವಿಧ ರಾಗ ಮತ್ತು ತಾಳಗಳನ್ನನುಸರಿಸಿ ಹಾಡುಗಳ ಮೂಲಕ ಹೇಳಿರುವುದಲ್ಲದೆ, ಸಮಯೋಚಿತವಾಗಿ ಅಭಿಪ್ರಾಯವನ್ನು ಲಂಬಿಸಿರುವುದೂ ಉಂಟು. ಈ ಒಟ್ಟು ಕೃತಿ ಒಂದು ಗೀತರೂಪಕದಂತಿದೆ.[2]

ಭಾಗವತದ ಈ ಕಥಾಪ್ರಸಂಗ ಹಿಂದೀಸಾಹಿತ್ಯದಲ್ಲಿ ಬಹು ಮಹತ್ವವಾದ ಸ್ಥಾನವನ್ನು ಗಳಿಸಿದೆ. ಅಲ್ಲಿ ಭಕ್ತಿಕಾಲದ ಕವಿಯಾದ ಸೂರದಾಸನಿಂದ ಮೊದಲಾಗಿ ಆಧುನಿಕ ಕಾಲಕ್ಕೆ ಸೇರಿದ ಡಾ. ರಾಮಶಂಕರ ಶುಕ್ಲ (ರಸಾಲ್) ಅವರ ತನಕ ಸುಮಾರು ಹತ್ತು-ಹದಿನೈದು ಕವಿಗಳು ಈ ಪ್ರಸಂಗವನ್ನು ಬೇರೆ ಬೇರೆ ಕಾಲಗಳಲ್ಲಿ ರಚಿಸಿರುತ್ತಾರೆ. ಈ ಒಬ್ಬೊಬ್ಬರ ನಿರೂಪಣೆಯೂ ಆಯಾ ಕಾಲಧರ್ಮಕ್ಕನುಸಾರವಾಗಿ ವಿವಿಧ ದೃಷ್ಟಿಗಳಿಂದ ಕೂಡಿದುದಾಗಿದೆ. ಇಲ್ಲಿ ಉದ್ಧವನು ಸ್ವಭಾವತಃ ಜ್ಞಾನಮಾರ್ಗದ ಪುರಸ್ಕರ್ತೃವೂ ನಿರ್ಗುಣವಾದಿಯೂ ಆಗಿದ್ದನೆಂದೂ, ಅವನಲ್ಲಿನ ಅಹಂಕಾರವನ್ನು ಪರಿಹರಿಸಲು ಶ್ರೀಕೃಷ್ಣನು ಅವನನ್ನು ಮುಗ್ಧರೂ, ಭಕ್ತಿಭರಿತರೂ ಮತ್ತು ಸಾಕಾರವಾದಿಗಳೂ ಆದ ಗೋಪಿಯರಲ್ಲಿಗೆ ಕಳುಹಿಸಿದನೆಂದೂ ತಿಳಿದುಬರುತ್ತದೆ. ಪರಿಶುದ್ಧವಾದ ಭಕ್ತಿ, ಬುದ್ಧಿಜನ್ಯವಾದ ಜ್ಞಾನಕ್ಕಿಂತಲೂ ಮಿಗಿಲೆಂಬುದೇ ಇಲ್ಲಿನ 'ಭ್ರಮರಗೀತೆ'ಗಳ ತಿರುಳು. ಅಂತೂ ಈ ಒಂದು ಸಂಗತಿಯನ್ನು ಒಂದು ಖಂಡಕಾವ್ಯದಂತೆ ನಿರ್ಮಿಸಿ, ಆ ಮೂಲಕ ಗೋಪಿಯರ ಪಾತ್ರ ಮಾತ್ರವಲ್ಲದೆ, ಉದ್ಧವ, ಯಶೋದ, ಶ್ರೀಕೃಷ್ಣ ಮೊದಲಾದ ಇತರ ಪಾತ್ರಗಳ ಕಡೆಗೂ ತಮ್ಮ ಗಮನವನ್ನು ಹರಿಸಿ ಉದಾತ್ತವಾದ ಹಲವಾರು ತತ್ತ್ವಗಳನ್ನು ಪ್ರತಿಪಾದಿಸಿರುವ ಈ ಭ್ರಮರಗೀತೆಗಳ ಪರಂಪರೆ ಪರಿಶೀಲನಾರ್ಹವಾದುದು.[3]

ಶ್ರೀಪಾದರಾಜರು ಬರೆದ 'ಭ್ರಮರಗೀತ'ವನ್ನು ಶ್ರೀ ಪ್ರಸನ್ನವೆಂಕಟದಾಸರು ಬರೆದ

---

[1] ಕನ್ನಡ ಭಾಗವತ, ಸ್ಕಂ. X, ಸಂ. ೪೩, ಪ. ೧–೪೬.

[2] ಶ್ರೀಮದ್ವಾದಿರಾಜ ಕೃತ 'ಭ್ರಮರಗೀತಂ', ೧೯೨೨, ಪಾವಂಜೆ ಗುರುರಾಯರ ಪ್ರಕಟನೆ

[3] ಹಿಂದೀ ಸಾಹಿತ್ಯ ಕೀ ಭ್ರಮರಗೀತ್ ಕೀ ಪರಂಪರಾ, ೧೯೫೩, ಲೇಖಕಿ : ಎಂ ಎ ಸರಲಾ ಶುಕ್ಲ.

ದ್ದೆಂದು ಭಾವಿಸಿ ಡಾ. ಏ. ಟಿ. ಪಾಟೀಲ, ಎಂ.ಎ, ಪಿಎಚ್. ಡಿ. ಅವರು ತಮ್ಮ 'ಶ್ರೀಪ್ರಸನ್ನವೆಂಕಟದಾಸರು' ಎಂಬ ಪುಸ್ತಕದಲ್ಲಿ ಪ್ರಸ್ತಾಪಿಸಿರುತ್ತಾರೆ.[1] ಅವರು ಉದಾಹರಿಸಿರುವ 'ಭ್ರಮರಗೀತ'ದಲ್ಲಿ ಕಡೆಯಲ್ಲಿ 'ಪ್ರಸನ್ನವೆಂಕಟ' ಎಂಬ ಅಂಕಿತಪಲ್ಲಟವಿರುವುದೇ ಇದಕ್ಕೆ ಕಾರಣ. ನಾವು ಪರಿಶೀಲಿಸಿರುವ ಆಕರಗಳಲ್ಲಿ ಎಲ್ಲಿಯೂ ರಂಗವಿಠಲ ಎಂಬ ಅಂಕಿತವಲ್ಲದೆ ಬೇರೊಂದಿಲ್ಲ. ಇದಲ್ಲದೆ ಶ್ರೀಪಾದರಾಜರು ಕನ್ನಡದಲ್ಲಿ ಗೋಪಿಗೀತ, ವೇಣುಗೀತ ಮತ್ತು ಭ್ರಮರಗೀತಗಳನ್ನು ರಚಿಸಿದರೆಂದು ಪ್ರತೀತಿಯೂ ಉಂಟು. ಆದರೂ ಪ್ರಕೃತ ಗ್ರಂಥಕರ್ತರು "ಕನ್ನಡದಲ್ಲಿ ಭ್ರಮರಗೀತೆಯನ್ನು ಬರೆದವರು ಶ್ರೀಪಾದರಾಜರೋ ಪ್ರಸನ್ನ ವೆಂಕಟರೋ ?—ಎಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುವುದು. ಕನ್ನಡದಲ್ಲಿ ದಶಮಸ್ಕಂಧ ಭಾಗವತದ ಪೂರ್ವಾರ್ಧವನ್ನು ಬರೆದವರು ಶ್ರೀಪ್ರಸನ್ನವೆಂಕಟದಾಸರು, ಶ್ರೀಪಾದರಾಜರಲ್ಲ ಭಾಗವತವನ್ನು ಬರೆಯುವ ಕಾಲಕ್ಕೆ ಭ್ರಮರಗೀತೆಯನ್ನು ಪ್ರಸನ್ನವೆಂಕಟರು ಬರೆದಿರಬೇಕು ಎಂದು ಊಹಿಸಿ ಇಲ್ಲಿ ಕೊಡಲಾಗಿದೆ"[2] ಎಂದು ಅಭಿಪ್ರಾಯಪಡುವರು. ಶ್ರೀಪಾದರಾಜರು ದಶಮಸ್ಕಂಧ ಭಾಗವತವನ್ನು ಇಡಿಯಾಗಿ ಬರೆಯದಿದ್ದರೂ ಅಲ್ಲಿನ ಹಲವಾರು ಪ್ರಸಂಗಗಳನ್ನು ಬಿಡಿಬಿಡಿಯಾಗಿ ಆರಿಸಿಕೊಂಡಿದ್ದಾರೆ. ಅದರಲ್ಲಿಯೂ 'ವೃತ್ತನಾಮ'ದಲ್ಲಿ ರಚಿತವಾಗಿರುವ ಅವರ 'ಶೃಂಗಾರ ಪಾರಿಜಾತ'ವೆಂಬ ಕೃತಿಯನ್ನೂ, ಇತರ ಸುಳಾದಿಗಳು, ಕೀರ್ತನೆಗಳ ಬಾಹುಳ್ಯವನ್ನೂ ಕಂಡಾಗ ಶ್ರೀಪಾದರಾಜರು ಭ್ರಮರಗೀತೆಯನ್ನು ರಚಿಸಿದ್ದಾರೆಂದು ಹೇಳಲು ಹಿಂತೆಗೆಯಬೇಕಾಗಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ಪ್ರಕೃತದಲ್ಲಿ ನಮಗೆ ದೊರೆತಿರುವ ಹಲವಾರು ಆಕರಗಳೇ ಮುಖ್ಯ ಸಾಕ್ಷಿ.

## ರುಕ್ಮಿಣಿ ಸತ್ಯಭಾಮೆಯರ ಸಂವಾದ

ಶ್ರೀಕೃಷ್ಣನ ಜೀವನದಲ್ಲಿ ಅವ್ಯಾಜವಾದ ಮಧುರಭಾವವುಳ್ಳ ಗೋಪಿಯರ ಪಾತ್ರವೇನೆಂಬುದನ್ನು ಮಾರ್ಮಿಕವಾಗಿ ಚಿತ್ರಿಸಿರುವ ಶ್ರೀಪಾದರಾಜರು, ಆತನ ಪತ್ನಿಯರಾದ ರುಕ್ಮಿಣಿ ಸತ್ಯಭಾಮೆಯರ ಮನೋಧರ್ಮವನ್ನು ಹೇಳ ಹೊರಟಿರುವುದು ಸ್ವಾರಸ್ಯವಾಗಿದೆ. ಸವತಿಯರ ಅಸೂಯೆಗೆ ಪ್ರತಿನಿಧಿಗಳಂತಿರುವ ಈ ಇಬ್ಬರು ಸತಿಯರು ನಿಷ್ಕಾರಣವಾಗಿ ಹೇಗೆ ಜಗಳವಾಡಬಲ್ಲರೆಂಬುದಕ್ಕೆ ಪ್ರಕೃತ ಕೀರ್ತನೆ ಉತ್ತಮ ದೃಷ್ಟಾಂತವಾಗಿದೆ (ಕೀ. ೧೩). ಇಬ್ಬರೂ ಉತ್ತಮ ಕುಲದವರು. ಶ್ರೀಕೃಷ್ಣನು ರುಕ್ಮಿಣಿಯನ್ನು ಆಕೆಯ ಪರಿಶುದ್ಧಭಕ್ತಿಗಾಗಿ ಮೆಚ್ಚಿ, ಅಪಹರಿಸಿಕೊಂಡು ಬಂದು ಮದುವೆಯಾಗಿದ್ದರೆ, ಸತ್ಯಭಾಮೆಯನ್ನು ಆಕೆಯ ತಂದೆಯಾದ ಸತ್ರಾಜಿತನು ಕಳೆದುಹೋಗಿದ್ದ ಸ್ಯಮಂತಕ ಮಣಿಯನ್ನು ಅತ್ಯಂತ ಸಾಹಸದಿಂದ ಕೃಷ್ಣನು ಹುಡುಕಿ ತಂದುಕೊಟ್ಟಿದ್ದಕ್ಕಾಗಿ ಅವನಿಗೆ ತನ್ನ ಮಗಳನ್ನೇ ಕೊಟ್ಟು ವಿವಾಹ ಮಾಡುವನು. ಈ ಇಬ್ಬರಿಗೂ ಬೇರೆ ಬೇರೆ ವರಗಳು

[1] ಶ್ರೀಪ್ರಸನ್ನವೆಂಕಟದಾಸರು, ೧೯೫೬, ಮಿಂಚಿನ ಬಳ್ಳಿ ಗ್ರಂಥಮಾಲೆ, ಪು. ೬೬.

[2] ಅದೇ ಪು ೯೯.

ನಿಶ್ಚಯವಾಗಿದ್ದುವು. ರುಕ್ಮಿಣಿಯನ್ನು ಶಿಶುಪಾಲನಿಗೂ ಸತ್ಯಭಾಮೆಯನ್ನು ಶತಧನ್ವನಿಗೂ ಕೊಡಬೇಕೆಂದು ಮಾತುಕತೆಗಳಾಗಿದ್ದವು. ಈ ಬಾಧ್ಯ [illegible]ರನ್ನೂ ಕೃಷ್ಣನೇ ವರಿಸಿದ್ದರಿಂದ ಆ ಪೂರ್ವನಿಯೋಜಿತ ಗಂಡುಗಳು ಇವರ ಬಗ್ಗೆ ಸಹಜವಾಗಿಯೇ ಕೆರಳಿದ್ದರು ಇತ್ತ ಈ ಸವತಿಯರಲ್ಲಿ ತಮ್ಮಿಬ್ಬರಲ್ಲಿ ಯಾರು ಮಿಗಿಲು ಎಂಬ ಪ್ರತಿಷ್ಠಿತ್ವವೂ ಕಲಹ ಸಾಗಿತ್ತು. ಒಮ್ಮೆ, ರುಕ್ಮಿಣಿ 'ಭೂಮಿಯಲ್ಲಿ ಹಿರಿಯಳಾದ ನಾನು ಇರಬೇಕಾದರೆ, ಮಾನಮರ್ಯಾದೆಗಳಿಲ್ಲದೆ ನೀನು ಕೃಷ್ಣನೊಂದಿಗೆ ಸರಸವಾಡಬಹುದೆ?' ಎಂದು ಸತ್ಯಭಾಮೆಯನ್ನು ಹಂಗಿಸಿದಳು ಸವತಿಯ ಈ ಮಾತು ಸತ್ಯಭಾಮೆಯನ್ನು ಕೆರಳಿಸಿತು. ಆಕೆ 'ಪತಿಯ ಪ್ರೀತಿ ಎನ್ನಮ್ಯಾಲೆ ಅತಿಶಯದಿ ಇರಲು ಜ್ಯೇಷ್ಠ ಸತಿಯಳೇನೇ ನೀನು' ಎಂದು ಪ್ರತ್ಯುತ್ತರವಿತ್ತಳು. ಗಂಡನ ಪ್ರೀತಿಯು ಆಧಿಕ್ಯವೇ ಹೊರತು ಜ್ಯೇಷ್ಠ ಕನಿಷ್ಠರೆಂಬ ಭೇದ ಕಾರಣವಲ್ಲ ಎಂದು ಸತ್ಯಭಾಮೆಯ ವಾದ. ಇದೇ ರೀತಿ ಇಬ್ಬರಿಗೂ ಮಾತಿಗೆ ಮಾತು ಮಸೆಯಿತು. ಅವರವರ ಮದುವೆಯ ಪ್ರಕರಣವೂ ತಲೆಯಿಕ್ಕಿತು. ರುಕ್ಮಿಣಿ 'ಮಂದರಧರನು ಪ್ರೀತಿಯಿಂದ ನಿನ್ನ ಪಡೆದನೇನೆ ಒಂದು ಮಣಿಯ ಕಾರಣದಿ ಬಂದೆ ಭಾಮಿನಿ ಸುಗುಣೆ ಕಾಮಿನಿ' ಎಂದು ಸತ್ಯಭಾಮೆಯನ್ನು ಕೇವಲ ವ್ಯವಹಾರ ನಿಮಿತ್ತವಾಗಿ ಶ್ರೀಕೃಷ್ಣನು ಮದುವೆಯಾಗಬೇಕಾಯಿತು ಎಂದಳು ಸತ್ಯಭಾಮೆಗೆ ಸವತಿಯ ಈ ಮಾತನ್ನು ಸಹಿಸಲಾಗಲಿಲ್ಲ. ಸೇರಿಗೆ ಸವಾಸೇರು ಎಂಬಂತೆ ರುಕ್ಮಿಣಿಗೆ ತಕ್ಕ ಉತ್ತರವನ್ನೇ ಇತ್ತಳು. 'ಸುಮ್ಮನೆ ಬಂದವಳಿಗೆ ಬ್ರಹ್ಮಲಗ್ನದಿ ಬಂದೆನಗೆ ಸಾಮ್ಯವೇನೆ ಯಾಕೆ ನಿನಗೆ ಹೆಮ್ಮೆ ರುಕ್ಮಿಣಿ ಸುಪದ್ಮಗಂಧಿನಿ' ಎಂದು ನಿಷ್ಠುರವಾಗಿಯೇ ನುಡಿದಳು. ಯಾರಿಗೆ ಯಾರೂ ಕಡಮೆಯಿಲ್ಲವೆಂಬಂತೆ ಕೆಣಕಿ ನಿಂತರೆ ಕಲಹ ಕೊನೆಗಾಣುವುದುಂಟೆ? ಶ್ರೀಕೃಷ್ಣನಿಗೆ ತನ್ನ ಮೇಲೆ ಇರುವ ಪ್ರೇಮವನ್ನು ಅಳೆಯಲು ಅವನು ಇಂದ್ರಾದಿಗಳೊಂದಿಗೆ ಯುದ್ಧಮಾಡಿ ದೇವಲೋಕದಿಂದ ತನಗೆ ಪಾರಿಜಾತವೃಕ್ಷವನ್ನು ತಂದಿತ್ತುದೇ ಸಾಕು ಎಂಬುದಾಗಿ ಸತ್ಯಭಾಮೆ ವಾದಿಸಲು, ರುಕ್ಮಿಣಿ ಆ ಮೊದಲೇ ತನ್ನ ಕೈಯಲ್ಲಿದ್ದ ಪಾರಿಜಾತಪುಷ್ಪವನ್ನು ಕಂಡು ಅವಳು ಅಸೂಯೆಪಟ್ಟಿದ್ದಕ್ಕಾಗಿ ತಂದನೇ ವಿನಾ ಅದು ತಾನಾಗಿ ಅವಳಿಗಿತ್ತ ಪ್ರೇಮದ ಕಾಣಿಕೆಯಲ್ಲವೆಂಬುದಾಗಿ ಹಂಗಿಸುವಳು ಅಷ್ಟೇ ಅಲ್ಲದೆ, ರಾಜರು ತಮ್ಮ ರಾಣಿಯರಿದ್ದರೂ, ತಮಗೆ ಬೇಕೆನ್ನಿಸಿದವರನ್ನು ತಾವಾಗಿ ಹೋಗಿ ಕರೆತರುವುದೇ ಅವರಿಗೆ ನೈಜವೆಂದು ತನ್ನ ಅಪಹರಣದ ಹಿರಿಮೆಯನ್ನೇ ಎತ್ತಿ ಹಿಡಿಯಲು ಸತ್ಯಭಾಮೆ ಉಸಿರೆತ್ತದೆ ತಲೆ ತಗ್ಗಿಸಿದಳು. ಆ ವೇಳೆಗೆ ಅಲ್ಲಿಗೆ ಬಂದ ಶ್ರೀಕೃಷ್ಣನು 'ನಾರಿ ರುಕ್ಮಿಣಿ ಭಾಮೆಯರನ್ನು ಹತ್ತಿರ ಕರೆದು ತಾ ಸೇರಿ ಮೆರೆದನು' ವಿರಸದಿಂದ ಮೊದಲಾದ ಈ ಪ್ರಸಂಗ ಶ್ರೀಕೃಷ್ಣನ ಆಗಮನದಿಂದ ಸರಸವಾಗಿ ಕೊನೆಗೊಂಡಿತು. ಈ ಕೀರ್ತನೆಯಲ್ಲಿ ವ್ಯಕ್ತವಾಗುವ ಶ್ರೀಪಾದರಾಜರ ಸಂಭಾಷಣಾ ಸಂವಿಧಾನ ಸರಳವೂ, ಸಹಜವೂ ಮತ್ತು ಪರಿಣಾಮಕಾರಿಯೂ ಆದುದು.

ಶ್ರೀಪಾದರಾಜರು ಪ್ರತಿಪಾದಿಸಿರುವ ಮಧುರಭಾವದಲ್ಲಿ ಗೋಪಿಯರು ತಮ್ಮ ಪರಿಶುದ್ಧವಾದ ಪ್ರೇಮದಿಂದ ಶ್ರೀಕೃಷ್ಣನಿಗೆ ಹೇಗೆ ಪರಮ ಪ್ರಿಯರಾಗುವರೋ

ಹಾಗೆಯೇ ಇತರರಿಗೆ ಅವರ ನಿರ್ಮಲವಾದ ಅಂತಃಕರಣ, ನಿರಾಡಂಬರವಾದ ನಡೆನುಡಿಗಳು ಭಕ್ತಿಗೆ ಆದರ್ಶವೆನ್ನಿಸುವುವು.

## ತತ್ತ್ವಪ್ರತಿಪಾದನೆ

ಶ್ರೀಪಾದರಾಜರ ಕೃತಿಗಳಲ್ಲಿ ರಸಾನುಭವದ ಸವಿಯಿರುವಂತೆಯೇ ದ್ವೈತಸಿದ್ಧಾಂತದ ಪ್ರಮುಖ ತತ್ತ್ವಗಳ ಪರಿಚಯವೂ ಸಾಕಷ್ಟು ಆಗುವುದು. ಶ್ರೀಹರಿಸರ್ವೋತ್ತಮತ್ವ, ಪಂಚಭೇದ, ತಾರತಮ್ಯ, ಜಗತ್‌ಸತ್ಯತ್ವ, ಮಾಯಾವಾದ ಖಂಡನೆ, ಆಚಾರ್ಯಸ್ತುತಿ ಇವೇ ಮೊದಲಾದ ವಿಷಯಗಳು ಎಲ್ಲರಿಗೂ ಸುಲಭವಾಗಿ ಹಿಡಿಸುವಂತೆ ನಿರೂಪಿತವಾಗಿವೆ. ದ್ವೈತ ಸಿದ್ಧಾಂತದಲ್ಲಿ ಅಪಾರವಾದ ಜ್ಞಾನವೂ ಅನುಭವವೂ ಉಳ್ಳ ಶ್ರೀಗಳವರು ತಮ್ಮ ಮತದ ತತ್ತ್ವಗಳನ್ನು ಪ್ರತಿಪಾದಿಸುವಲ್ಲಿ ಬಹುಮಟ್ಟಿಗೆ ದೃಷ್ಟಾಂತ ಕ್ರಮವನ್ನು ಅನುಸರಿಸುವರು. ಶ್ರೀಹರಿಸರ್ವೋತ್ತಮತ್ವವನ್ನು ತಿಳಿಯಹೇಳಲು ಭಾಗವತದಲ್ಲಿ ಉಕ್ತವಾಗಿರುವ ಭೃಗುವಿನ ಕಥೆಯನ್ನೇ ಆರಿಸಿಕೊಂಡಿರುವರು. 'ಬಿಡಿಬಿಡಿ ಸಂದೇಹವನು ಪೊಡವಿ ಮನುಜರೆಲ್ಲ ಒಡೆಯನೊಬ್ಬನೇ ಜಗಕೆ ರಂಗವಿಠಲ' ಎಂದು ಘಂಟಾಘೋಷವಾಗಿ ಸಾರಿಹೇಳಿ, ಅದರ ಸಮರ್ಥನೆಗಾಗಿ ಪರಮಮುನಿಗಳಲ್ಲಿಯೇ ನಡೆದ ಪ್ರಸಂಗವೊಂದನ್ನು ವಿವರಿಸಿರುವರು. ಭೃಗುಮುನಿಗಳು ಬ್ರಹ್ಮನ ಬಳಿ ಹೋಗಿ ವಂದಿಸದಿರಲು ಅವನು ಅಹಂಕಾರದಿಂದ ಕೆರಳಿದನಂತೆ! ಈಶ್ವರನ ಬಳಿಗೆ ಬರಲು ಅವನು ಮುನಿವರೇಣ್ಯರನ್ನು ಅತಿಸಲಿಗೆಯಿಂದ ಕಾಣಲು ಋಷಿಗಳಿಗೆ ಕೋಪವೇರಿತು. ಶಂಕರನೂ ತಾಳ್ಮೆ ತಪ್ಪಿದನು. ಈ ಇಬ್ಬರೂ ಅವರ ದೃಷ್ಟಿಯಲ್ಲಿ ಶ್ರೇಷ್ಠರಲ್ಲವೆಂದು ಕಂಡುಬರಲು, ಶ್ರೀವಿಷ್ಣುವಿರುವ ವೈಕುಂಠಕ್ಕೆ ಬಂದರು ಅಲ್ಲಿ ಲಕ್ಷ್ಮೀಸಮೇತನಾದ ಶ್ರೀವಿಷ್ಣುವನ್ನು ತಾವಾಗಿ ಕೆಣಕಲು ಆ ಸ್ವಾಮಿ ಸಹನೆಯಿಂದಿದ್ದು, ತನ್ನನ್ನು ಕಾಲಿನಲ್ಲಿ ಒದೆದ ಮುನಿಯ ಪಾದವನ್ನು ಪೂಜೆಮಾಡಿದನಂತೆ! ವಿಷ್ಣುವಿನ ಆ ಅತಿಶಯವಾದ ಸಹನೆಯನ್ನು ಮೆಚ್ಚಿ ಭೃಗುಮುನಿಗಳು ಅವನೇ ಪರತತ್ವವೆಂದು ನಿರ್ಧರಿಸಿ, ಪರಮಮುನಿಗಳಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಲು ಎಲ್ಲರೂ ಅದಕ್ಕೆ ಸಮ್ಮತಿಸುವರು.

ಭೃಗುಮುನಿಗಳ ಈ ಪರೀಕ್ಷೆಯಲ್ಲದೆ, ವಿಷ್ಣುವಿನ ಮೇಲ್ಮೆಯನ್ನು ಸಾರುವ ಇನ್ನೂ ಹಲವಾರು ಸಂದರ್ಭಗಳನ್ನು ಉಲ್ಲೇಖಿಸುವರು. ಸಮುದ್ರಮಥನ ಕಾಲದಲ್ಲಿ ಉದ್ಭವಿಸಿದ ಲಕ್ಷ್ಮಿ, ಬ್ರಹ್ಮ ಮಹೇಶ್ವರರನ್ನು ಬಿಟ್ಟು ವಿಷ್ಣುವನ್ನೇ ವರಿಸಿದ್ದು, ಗಜೇಂದ್ರನನ್ನು ಶ್ರೀವಿಷ್ಣು ಮೊಸಳೆಯ ಬಾಯಿಂದ ಸಂರಕ್ಷಿಸಿದ್ದು, ರಾಜಸೂಯಯಾಗಕಾಲದಲ್ಲಿ ಭೀಷ್ಮನು ಶ್ರೀಕೃಷ್ಣನೊಬ್ಬನೇ ಅಗ್ರಪೂಜೆಗೆ ಅರ್ಹನೆಂದು ಹೇಳಿದ್ದು, ವಿಷ್ಣುವಿನ ಪಾದನಖಾಗ್ರಸ್ಪರ್ಶದಿಂದ ಗಂಗೆಯು ಉದ್ಭವವಾದದ್ದು ಇವೇ ಮೊದಲಾದ ಸಂಗತಿಗಳನ್ನೆಲ್ಲ ಹೇಳಿ ಹರಿಸರ್ವೋತ್ತಮತ್ವವನ್ನು ಸ್ಥಾಪಿಸುವರು. ಈ ಒಟ್ಟು ಕೀರ್ತನೆಯಲ್ಲಿ ಕಂಡುಬರುವ ದಾಸರ ಕಥನ ಶೈಲಿ ತುಂಬ ಸರಳವೂ ಸರಸವೂ ಆಗಿದೆ. ಜನಸಾಮಾನ್ಯರಿಗೆ ತಿಳಿವನ್ನು ಉಂಟುಮಾಡಲು ಇಂಥ ಕಥೆಗಳಿಗಿಂತ ಉತ್ತಮವಾದ ಮಾರ್ಗ ಬೇರೊಂದಿಲ್ಲ.

ಹರಿಹರರ ಪರಸ್ಪರರ ತುಲನೆಯಿಂದ, ಹರಿಯ ಮಹಿಮೆಯನ್ನು ಪ್ರತಿಪಾದಿಸುವ ಮತ್ತೊಂದು ಕೀರ್ತನೆ (ಕೀ. ೬೧) ಹಲವಾರು ಪೂರ್ವಕಥೆಗಳ ಒಂದು ಸರಪಣಿ ಎನ್ನಬಹುದು. 'ಹರಿಹರರು ಸರಿಯೆಂಬ ಮರುಳು ಜನರು ಹರಿಹರರ ಚರಿತೆಯನು ತಿಳಿದು ಭಜಿಸುವುದು' ಎಂದು ಪಲ್ಲವಿಯನ್ನು ನುಡಿದು, ಹರಿಹರರು ನೇರವಾಗಿ ಹೋರಾಡುವುದು ಮೊದಲ್ಗೊಂಡು ಅವರಿಬ್ಬರ ಅಂಶಗಳ ಪರಸ್ಪರ ಮಸೆದಾಟವನ್ನು ಚಿತ್ರಿಸುವ ಅನೇಕ ಘಟನೆಗಳನ್ನು ಉದಾಹರಿಸುವರು. ಪ್ರತಿಯೊಂದು ಸನ್ನಿವೇಶದಲ್ಲಿಯೂ ಹರಿಯ ಇಲ್ಲವೇ ಅವನ ಅಂಶದ ಕೈಯೇ ಮೇಲಾಗುವುದು.

ಹರಿಭಕ್ತರಾದ ಶ್ರೀಪಾದರಾಜರು ಈಶ್ವರನನ್ನು ಮೆಚ್ಚದೆ ಇಲ್ಲ. ಅವನನ್ನು ಅವರು ಕೊಂಡಾಡುವ ಧಾಟಿ ಮಾಧ್ವಸಂಪ್ರದಾಯದ ದೇವತೆಗಳ ತಾರತಮ್ಯತತ್ತ್ವಕ್ಕೆ ಅನುಗುಣವಾದದ್ದು. ದೇವತೆಗಳಲ್ಲೆಲ್ಲ ಹರಿಯು ಸರ್ವೋತ್ತಮನೆನ್ನಿಸಿದರೆ, ಅವನ ತರುವಾಯ ಬ್ರಹ್ಮ ಮತ್ತು ವಾಯುದೇವರು ಪುತ್ರರೆನ್ನಿಸಿ ಸಮಾನ ಕಕ್ಷದಲ್ಲಿ ಬರುವರು. ಆ ಬಳಿಕ ರುದ್ರನು ಮೊಮ್ಮಗನೆನ್ನಿಸಿ ಅಭಿಮಾನಿದೇವತೆಯೆಂದು ಪರಿಗಣಿತನಾಗಿರುವನು. ಆದ್ದರಿಂದ ಶ್ರೀಪಾದರಾಜರು ತಾತನಾದ ವಿಷ್ಣುವಿಗೂ ಮೊಮ್ಮಗನಾದ ಶಿವನಿಗೂ ಸಂಬಂಧಿಸಿದಂತೆ ನಡೆದ ಒಂದು ಚೋದ್ಯವನ್ನು ಚಿತ್ರಿಸುತ್ತ, ಆ ಸಂದರ್ಭದಲ್ಲಿ ಈಶ್ವರನ ಗುಣವಿಶೇಷಗಳನ್ನೆಲ್ಲ ಹೇಳಿ ಸಂತೋಷಪಡುವರು. ಕೆಳದಿಯೊಬ್ಬಳು ತನ್ನ ಗೆಳತಿಯನ್ನು 'ವೃಷಭನೇರಿದ ವಿಷಧರನ್ಯಾರೆ ಪೇಳಮ್ಮಯ್ಯ' ಎಂದು ಕೇಳಲು, ಆಕೆ 'ಹಸುಳೆ ಪಾರ್ವತಿಯ ತಪಸಿಗೆ ಮೆಚ್ಚಿದ ಜಟಾಮಂಡಲಧಾರಿ ಕಾಣಮ್ಮ' ಎಂದು ಪರಮೇಶ್ವರನ ಕೋಮಲ ಸ್ವಭಾವವನ್ನು ಮೊದಲು ಸೂಚಿಸಿ, ಅನಂತರ ಆತನ ರೀತಿನೀತಿಗಳಲ್ಲಿ ವಿದಿತವಾಗುವ ವೈಚಿತ್ರ್ಯಗಳನ್ನೆಲ್ಲ ವರ್ಣಿಸುವಳು. ಈಶ್ವರನ ವಾಸಸ್ಥಳ ಕೈಲಾಸವೆಂತೋ ಅಂತೆಯೇ ಸ್ಮಶಾನವೂ ಹೌದಷ್ಟೆ! ಆತನು ಮಾಧ್ವ ಸಂಪ್ರದಾಯದ ಮೇರೆಗೆ ಸಂಕರ್ಷಣ ಸ್ವರೂಪಿ ಮತ್ತು 'ರಮೆಯರಸಗೆ ಮೊಮ್ಮಗ'. ದಕ್ಷಯಜ್ಞ ಕಾಲದಲ್ಲಿ ಈಶ್ವರನು ವರ್ತಿಸಿದ ಬಗೆಯನ್ನು ಬಣ್ಣಿಸಿ, ಅವನು ಸಮುದ್ರಮಥನ ಕಾಲದಲ್ಲಿ ವಿಷ್ಣುವಿನ ದಯೆಯಿಂದ ವಿಷವನ್ನು ಕುಡಿದೂ ವಿಪತ್ತಿಗೆ ಗುರಿಯಾಗದೆ 'ನೀಲಕಂಠ' ನೆನ್ನಿಸಿದ ಪರಿಯನ್ನು ವರ್ಣಿಸಿರುವರು. ಇಷ್ಟು ಭಾಗ ಕೇವಲ ಈಶ್ವರನ ಗುಣಗಾನವೇ ಆದರೆ, ಇದರೊಂದಿಗೇ ಈ ತಾತ ಮೊಮ್ಮಕ್ಕಳ ಬಾಂಧವ್ಯವೆಂತೆಂಬುದನ್ನು ಒಂದು ಸಣ್ಣ ನಿದರ್ಶನದ ಮೂಲಕ ಪರಿಚಯ ಮಾಡಿಕೊಡುವರು.

ಒಮ್ಮೆ, ಈಶ್ವರನಿಗೆ ನಾರಾಯಣನ ಮೋಹಿನೀರೂಪವನ್ನು ನೋಡಬೇಕೆಂದು ಅಪೇಕ್ಷೆಯಾಯಿತು. ಅಂತೆಯೇ ವಿಷ್ಣುವಿನಲ್ಲಿ ಮನವಿ ಮಾಡಿಕೊಂಡನು. ಶ್ರೀಹರಿಯು ನಸುನಗುತ್ತ 'ಸೈರಿಸಲಾರೆ ನೀ' ಎಂದು ಎಷ್ಟು ಬುದ್ಧಿ ಹೇಳಿದರೂ, ಹರನು ಹಠ ಹಿಡಿದು ಕುಳಿತನು. 'ಕರುಣೆಗಳರಸ'ನಾದ ವಿಷ್ಣುವು ಕಡೆಗೂ ಒಪ್ಪಿಕೊಂಡು, ಮಾರನೆಯ ದಿನ ಅರುಣೋದಯಕ್ಕೆ ಸರಿಯಾಗಿ ತೋಟದ ಬಳಿ ಬರಬೇಕೆಂದು ಹೇಳಿದನು. ಒಪ್ಪಂದವಾದಂತೆಯೇ ವಿಷ್ಣುವು ಹದಿನಾರರ ಹರೆಯದ ಹೆಣ್ಣಿನಂತೆ ರೂಪ

ತಾಳಿ ತೋಟದ ಬಳಿ ಬಂದು ಸುಳಿಯಲು, ಆ ನೋಟವನ್ನು ಕಂಡ ಹರನು ವಾಸ್ತವಿಕಾಂಶವನ್ನು ಮರೆತು, ಆ ಸ್ತ್ರೀ ರೂಪವನ್ನು ಸತ್ಯವೆಂದು ಎಣಿಸಿ ಹಿಡಿಯಲು ಮುನ್ನಡಿಯಿಟ್ಟನು. ಆಗ ವಿಷ್ಣುವು ಶಂಖ, ಗದೆ, ಚಕ್ರ ಸಮೇತನಾಗಿ ತೋರಿಬರಲು, ಹರನು ನಾಚಿದನು. 'ಮಂಗಳಾಂಗನೆ ಮಾರಜನಕ ನಾ ಮಾಡಿದ ತಪ್ಪ ಹಿಂಗದೆ ಕ್ಷಮಿಸೊ ಯದುಕುಲ ತಿಲಕ, ವಕ್ಷದಲೊಪ್ಪುವ ನಿನ್ನಂಗನೆ ಅರಿಯಳು ನಖಮಹಿಮಾಂಕ' ಎಂದು ವಿಷ್ಣುವಿನ ಹಿರಿಮೆಯನ್ನು ಮುಕ್ತಕಂಠದಿಂದ ಕೊಂಡಾಡಿ, ರಂಗವಿಠಲನ ಪಾದಗಳಿಗೆರಗಿ ಕೈಲಾಸಕ್ಕೆ ಹಿಂತಿರುಗಿದನು. ಉಭಯ ದೇವತೆಗಳಲ್ಲಿ ಒಂದು ಅಪೂರ್ವವಾದ ಮೈತ್ರಿಯನ್ನು ಕಲ್ಪಿಸಿ, ಕಟ್ಟಕಡೆಯಲ್ಲಿ ಹರಿಯ ಹಿರಿಮೆಯನ್ನೇ ಮೆರೆಸುವ ಈ ಕಥನಕ್ರಮ ಎಂಥವರ ಮನಸ್ಸನ್ನಾದರೂ ಒಲಿಸಬಲ್ಲುದು.

ಈಶ್ವರನ ಅಲಂಕಾರದಲ್ಲಿ ನಯಕ್ಕಿಂತಲೂ ಭಯವೇ ಹೆಚ್ಚು. ಅಂಥವನು ರಂಗವಿಠಲನ ಭಕ್ತನಂತೆ ಅವನ ಚರಣಸೇವೆಗೆ ಸರ್ವದಾ ಸಿದ್ಧನಾಗಿರುವನೆಂಬುದಾಗಿ ದಾಸರು ಒಂದು ಕೀರ್ತನೆಯಲ್ಲಿ ಚಿತ್ರಿಸಿರುವರು (ಅನುಬಂಧ, ೩-ಕೀ. ೯).

ಶ್ರೀಪಾದರಾಜರು ಶ್ರೀ ಮಧ್ವಾಚಾರ್ಯರನ್ನು ಕುರಿತು ಬರೆದಿರುವ 'ಮಧ್ವನಾಮ' ಹರಿದಾಸ ಸಾಹಿತ್ಯದಲ್ಲಿಯೇ ತುಂಬ ಪ್ರಸಿದ್ಧವೂ ಪ್ರಶಸ್ತವೂ ಆದುದು. ವಾಯುದೇವರು ತ್ರೇತೆಯಲ್ಲಿ ಹನುಮಂತನಾಗಿಯೂ, ದ್ವಾಪರದಲ್ಲಿ ಭೀಮಸೇನನಾಗಿಯೂ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ ಅವತಾರವೆತ್ತಿಬಂದರೆಂದು ಮಾಧ್ವರ ನಂಬಿಕೆ. ಈ ಒಂದೊಂದು ಅವತಾರದ ಹಿರಿಮೆಯನ್ನೂ ಶ್ರೀಪಾದರಾಜರು ೨೭ ನುಡಿಗಳುಳ್ಳ ಈ ಕೀರ್ತನೆಯಲ್ಲಿ ಅಭಿಮಾನದಿಂದ ಚಿತ್ರಿಸಿರುತ್ತಾರೆ. 'ಜಯಜಯ ಜಗತ್ಪ್ರಾಣ ಜಗದೊಳಗೆ ಸುತ್ರಾಣ ಅಖಿಳಗುಣ ಸದ್ಧಾಮ ಮಧ್ವನಾಮ' ಎಂಬ ಪಲ್ಲವಿಯಲ್ಲಿಯೇ ಈ ಕೃತಿಯ ಮೇಲ್ಮೆಯೇನೆಂಬುದನ್ನು ವಿಶದಪಡಿಸಲಾಗಿದೆ ಪ್ರಾರಂಭದ ಕೆಲವು ನುಡಿಗಳೊಳಗೆ ಜೀವೋತ್ತಮರೆನ್ನಿಸಿದ ವಾಯುದೇವರ ಮಹತ್ವವನ್ನೆಲ್ಲ ತಿಳಿಯ ಹೇಳಿ, ಅನಂತರ ಆತನು 'ತ್ರೇತೆಯಲಿ ರಘುಪತಿಯ ಸೇವೆ ಮಾಡುವನೆಂದು' ಹನುಮಂತನಾಗಿ ಉದಿಸಿದ ಸಂಗತಿಯನ್ನು ತಿಳಿಸುವರು. ಹನುಮಂತನು ಹುಟ್ಟಿದ ಕೂಡಲೇ ಸೂರ್ಯಬಿಂಬಕ್ಕೆ ಲಂಘಿಸಿದ ಪ್ರತಾಪವನ್ನೂ, ಸೂರ್ಯನಿಂದ ವ್ಯಾಕರಣಾದಿಗಳನ್ನು ಕಲಿತ ಅವನ ಅಸೀಮ ಪಾಂಡಿತ್ಯವನ್ನೂ ಪ್ರಸ್ತಾಪಿಸಿರುವರು. ಎಲ್ಲಕ್ಕೂ ಮಿಗಿಲಾಗಿ, ಹನುಮಂತನು ಶ್ರೀರಾಮನ ಅವಿಚ್ಛಿನ್ನ ಭಕ್ತನಾಗಿ ಹೇಗೆ ಸೇವೆ ಸಲ್ಲಿಸಿದನೆಂಬ ನಿರೂಪಣೆ ಕಣ್ಣಿಗೆ ಕಟ್ಟುವಂತಿದೆ. ಅಷ್ಟು ಶ್ರಮವಹಿಸಿದ ಆಂಜನೇಯನಿಗೆ ಪದವಿಯ ಅಪೇಕ್ಷೆ ಯಾವುದೂ ಇರಲಿಲ್ಲವಂತೆ. ಶ್ರೀರಾಮನು ಬ್ರಹ್ಮಪದವಿಯನ್ನೇ ಕೊಡುವೆನೆಂದರೂ ಅದಕ್ಕೆ ಒಪ್ಪದೆ, 'ನಿಜ ಭಕುತಿಯನೆ ಬೇಡಿ ವರವ ಪಡೆದ' ಎಂಬಲ್ಲಿ ಹನುಮಂತನ ದಾಸ್ಯಭಕ್ತಿ ಎಷ್ಟು ಮಹೋನ್ನತವಾದುದು ಎಂದು ದೃಢವಾಗುತ್ತದೆ.

ತ್ರೇತಾಯುಗ ಕಳೆದು ದ್ವಾಪರಯುಗ ಪ್ರವೇಶಿಸಲು, ವಾಯುದೇವರು ಭೀಮಸೇನನಾಗಿ ಅವತರಿಸಿದರು. ಹಿಂದಿನ ಅವತಾರದಲ್ಲಿ ಎಂತೋ ಅಂತೆಯೇ ಈ ಅವತಾರದಲ್ಲಿಯೂ

ಬಾಲ್ಯದಿಂದಲೇ ಭೀಮಸೇನನ ಪ್ರತಾಪ ಪ್ರಕಾಶಕ್ಕೆ ಬರುವುದು ಅವನನ್ನು ಮೇಲಕ್ಕೆತ್ತಿ ಬೆಟ್ಟದ ಮೇಲೆ ಇಳಿಸುವುದೇ ತಡ, ಆ ಬಂಡೆಗಳು ಪುಡಿಪುಡಿಯಾಗಿ ಅದೇ ಶತಶೃಂಗ ವೆನ್ನಿಸಿತಂತೆ ! ಹೊಡೆದಾಟ ಬಡಿದಾಟಗಳಲ್ಲಿ ಭೀಮನು ಸರ್ವದಾ ಮುಂದಾಳು. ಕೌರವರ ಅಹಂಕಾರಕ್ಕೆ ಅವನು ಸರ್ವದಾ ಸಿಡಿಮದ್ದು ಆವನ ಸಮಕಾಲೀನರಾಗಿದ್ದ ಯಾವ ದುರುಳ ರಾಕ್ಷಸರೂ ಉಳಿಯುವಂತಿಲ್ಲ. ಭೀಮಸೇನನ ಬದುಕು ಕೇವಲ ಈ ಒರಟುತನ ದಲ್ಲಿಯೇ ಕಳೆದುಹೋಗಲಿಲ್ಲ. ಅವನು ದ್ರೌಪದಿಯ ಇಂಗಿತವನ್ನರಿತು ಆಕೆಗಾಗಿ ಸೌಗಂಧಿಕಾಪುಷ್ಪವನ್ನು ತಂದ ಪ್ರಸಂಗ ಅವನ ಹೃದಯದ ಮಾರ್ದವವನ್ನು ವ್ಯಕ್ತ ಪಡಿಸುತ್ತದೆ. ಮಹಾಭಾರತದ ಯುದ್ಧದಲ್ಲಂತೂ ಭೀಮಸೇನನ ಪಾತ್ರ ಹೇಳಿ ಮುಗಿಸು ವಂತಿಲ್ಲ ಶತ್ರುಪಕ್ಷವನ್ನು ಅನಾಯಾಸವಾಗಿ ಬಡಿದು ಕೆಡಹುವವನು. ಅಶ್ವತ್ಥಾಮನ ನಾರಾಯಣಾಸ್ತ್ರಕ್ಕೆ ಸಿಕ್ಕಿಬಿದ್ದ ತನ್ನ ಸಹೋದರರನ್ನು ಅಚಲಿತನಾಗಿ ಸಂರಕ್ಷಿಸುವನು. ಶಕ್ತಿ ಸಾಹಸಗಳಿಗೆ ಸಂಕೇತಪ್ರಾಯನಾಗಿ ಮೆರೆದವನು ಈ ಸಮೀರಕುಮಾರ.

ಕಲಿಯುಗದಲ್ಲಿಯೂ ವಾಯುದೇವರು ದುಷ್ಟಶಿಕ್ಷಣ ಶಿಷ್ಟಸಂರಕ್ಷಣಕಾರ್ಯವನ್ನು ಕಡೆಗಣಿಸಿದವರಲ್ಲ ಎಲ್ಲೆಲ್ಲಿಯೂ ಮಾಯಾವಾದವೂ, ಅವೈದಿಕಮತಪ್ರಾಬಲ್ಯವೂ ಹೆಚ್ಚಿದ ಕಾಲದಲ್ಲಿ 'ಸರ್ವೇಶ ಹರಿ ವಿಶ್ವ ಸತ್ಯ'ವೆಂದು ಸಿದ್ಧಾಂತಪೂರ್ವಕವಾಗಿ ಸಾರಿ ಹೇಳಲು ವಾಯುದೇವರು 'ಮಾನನಿಧಿ ಮಧ್ವಾಖ್ಯನೆಂದೆನಿಸಿ' ಅವತಾರವೆತ್ತಿ ಬಂದರು. ಬಾಲ್ಯದಲ್ಲೊಮ್ಮೆ ಬದರಿಕಾಶ್ರಮಕ್ಕೆ ತೆರಳಿ ವೇದವ್ಯಾಸರಿಂದ ಸಮಸ್ತ ಶಾಸ್ತ್ರ ರಹಸ್ಯ ಗಳನ್ನೂ ತಿಳಿದು, ಲೋಕಕ್ಕೆ ಆ ಜ್ಞಾನಸುಧೆಯನ್ನಿತ್ತು ಉದ್ಧರಿಸಿದರು ತಮ್ಮ ಲೋಕ ಸೇವೆಯೆಲ್ಲ ಮುಗಿಯಲು ಮತ್ತೆ ಬದರಿಕಾಶ್ರಮಕ್ಕೇ ಹಿಂತಿರುಗಿದರೆಂದು ಪ್ರತೀತಿ. ಇಂಥ ಅನುಪಮ ಸತ್ವಶಾಲಿಗಳೂ, ತತ್ತ್ವವಿದರೂ, ತೇಜಾಂಶರೂ ಆದ ಆಚಾರ್ಯ ರನ್ನು ಶ್ರೀಪಾದರಾಜರು ಮನವಾರೆ ಸ್ತುತಿಸಿ, ಇತರರಿಗೂ ಈ ಪ್ರಶಸ್ತಿಪೀಯೂಷವನ್ನು ಧಾರಾಳವಾಗಿ ಧಾರೆಯೆರೆದಿರುವರು. ಈ ಪವಿತ್ರವಾದ ಅವತಾರತ್ರಯದ ಮಹಿಮೆ ಯನ್ನು ಮನಗಂಡ ಜಗನ್ನಾಥದಾಸರು ಈ ಮಧ್ವನಾಮಕ್ಕೆ ಒಂದು ಫಲಸ್ತುತಿಯನ್ನು ಬರೆದಿರುವುದನ್ನು ನೋಡಿದರೆ, ಅವರ ಕಾಲಕ್ಕಾಗಲೇ ಈ ರಚನೆಗೆ ದೊರೆತ ಪ್ರಾಶಸ್ತ್ಯ ವೇನು ಎನ್ನುವುದು ವಿಶದವಾಗುತ್ತದೆ. ಭಕ್ತಾದಿಗಳಿಗೆ ಈ ನಾಮಭಜನೆ ಸಮಸ್ತ ವಾಂಛಿತಫಲಗಳನ್ನೂ ನೀಡುವುದಲ್ಲದೆ, ಅದು ಎಂತಹ ಸಂರಕ್ಷೆಯೆನ್ನುವುದನ್ನೂ ತಿಳಿಸಿರುವರು. ಕಡೆಯ ನುಡಿಯಲ್ಲಂತೂ ಜಗನ್ನಾಥದಾಸರು ಶ್ರೀಪಾದರಾಜರ ಕೃತಿ ಯನ್ನು ಪೂರ್ಣಭಕ್ತಿಯಿಂದ ಇಂತು ಹೊಗಳಿರುವರು ·

ಶ್ರೀಪಾದರಾಯ ಪೇಳಿದ ಮಧ್ವನಾಮ ಸಂ
ತಾಪ ಕಳೆದಖಿಳ ಸೌಖ್ಯವನೀವುದು
ಶ್ರೀಪತಿ ಜಗನ್ನಾಥವಿಠಲನ ತೋರಿ ಭವ
ಕೂಪಾರದಿಂದ ಕಡೆ ಹಾಯಿಸುವುದು.

ಕಾಲ ದೇಶಗಳ ಅಂತರವಿಲ್ಲದೆ ಇಂದಿಗೂ ಮಾಧ್ವಸಮುದಾಯಕ್ಕೆ ನಿತ್ಯಪಾರಾಯಣದ ಕೃತಿಯೆನ್ನಿಸಿದೆ ಈ ನಿಡಿದಾದ ಮಧ್ವನಾಮ.

ಶ್ರೀಪಾದರಾಜರ ಮಾಧ್ವಮತ ನಿಷ್ಠೆ 'ಮರುದಂಶರ ಮತ ಪಿಡಿಯದೆ ಇಹ ಪರದಲ್ಲಿ ಸುಖವಿಲ್ಲವಂತೆ' ಎಂಬ ಅವರ ಕೀರ್ತನೆಯಲ್ಲಿ ಸುಸ್ಪಷ್ಟವಾಗಿ ಕಂಡುಬರುತ್ತದೆ 'ಅರಿತು ವಿವೇಕದಿ ಮರೆಯದೆ ನಮ್ಮ ಗುರುರಾಯರ ನಂಬಿ ಬದುಕಿರೋ' ಎಂದು ಬೋಧಿಸುವರು. ಕರೆದಿಟ್ಟ ಹಾಲಿಗೆ ತಕ್ಕ ಸಂಸ್ಕಾರವಿಲ್ಲದೆ ಹೇಗೆ ತುಪ್ಪವಾಗುವುದಿಲ್ಲವೊ ಹಾಗೆ 'ಸೂರಿ ಜನರ ಸಂಗವಿಲ್ಲದೆ ಸಾರ ವೈರಾಗ್ಯ ಭಾಗ್ಯ ಪುಟ್ಟದು' ಎನ್ನುವರು. 'ಉಪದೇಶವಿಲ್ಲದ ಮಂತ್ರ ಏಸು ಜಪಿಸಲು ಫಲಗಳ ಕೊಡದು.' ಹಾಗೆಯೇ 'ಉಪವಾಸ ವ್ರತಗಳಿಲ್ಲದೆ ಜೀವ ತಪಸಿಯೆನಿಸಿಕೊಳ್ಳಲರಿಯನು ' ಕಡೆಯದಾಗಿ, 'ಸಾರಮಧ್ವಶಾಸ್ತ್ರವೋದದೆ ಗುರು ತಾರತಮ್ಯ ಜ್ಞಾನ ಪುಟ್ಟ'ದೆಂದೂ, 'ಶ್ರೀರಂಗವಿಠಲನ ಭಜಿಸದೆ ಮುಂದೆ ಪರಮಗತಿ ದೊರೆಕೊಳ್ಳ'ದೆಂದೂ ಒತ್ತಿ ಒತ್ತಿ ಹೇಳುವರು. ತಮ್ಮನ್ನು ಮುಕ್ತಕಂಠದಿಂದ ಕೊಂಡಾಡಿ ದವರನ್ನು ಕಂಡು, ತಮಗೆ ತಾವೇ ಸಂಕೋಚಪಟ್ಟುಕೊಂಡು, 'ಸುಮ್ಮನೆ ವೈಷ್ಣವನೆಂಬಿರಿ ಪರಬೊಮ್ಮ ಸುಜ್ಞಾನವನರಿಯದ ಮನುಜನ' ಎಂದು ನೈಚ್ಯಾನುಸಂಧಾನಕ್ರಮದಲ್ಲಿ ವೈಷ್ಣವನ ಕರ್ಮಗಳನ್ನೆಲ್ಲ ಬಹಳ ಧ್ವನಿಪೂರ್ವಕವಾಗಿ ತಿಳಿಯಹೇಳುವರು. ವೈಷ್ಣವ ಎನ್ನಿಸಬೇಕಾದರೆ ಲಾಂಛನ ಧರಿಸಿದ ಮಾತ್ರದಿಂದ ಆಗುವುದಿಲ್ಲ , ಆನಂದತೀರ್ಥರ ಶಾಸ್ತ್ರದಲ್ಲಿ ಪರಿಣತನಾಗಬೇಕು. ಮನಮೋಹಕವಾದ ಪುಷ್ಪಹಾರವನ್ನು ಧರಿಸಿದ ಮಾತ್ರಕ್ಕೆ ಯಾರೂ ದಾಸರೆನ್ನಿಸುವುದಿಲ್ಲ ; ಭಕ್ತಿರಸದಲ್ಲಿ ಮುಳುಗಿ ಏಳಬೇಕು. ಕಾಡು ಹರಟೆ ಹೊಡೆದರೆ ಪ್ರಯೋಜನವಿಲ್ಲ; ನಾರಾಯಣ ಸ್ಮರಣೆ ಮಾಡಿ ಮಡಿಯಾಗಬೇಕು. ನಾರಿಯರ ಮಾತಿಗೆ ಮರುಳಾದರೆ ಫಲವಿಲ್ಲ , ಗುರುಹಿರಿಯರ ಮಾತಿಗೆ ಮಣಿಯಬೇಕು. ಇಂತೆಯೇ ನರೋತ್ತಮರಿಂದ ಹಿಡಿದು ಸರ್ವೋತ್ತಮನಾದ ಹರಿಯವರೆಗೆ ಹಂತ ಹಂತ ವಾಗಿ ವಿಂಗಡಿಸಿರುವ ತಾರತಮ್ಯತತ್ತ್ವವನ್ನು ಚೆನ್ನಾಗಿ ಮನನ ಮಾಡಬೇಕು. ದ್ವೈತ ಸಿದ್ಧಾಂತದ ಬೀಜಾಕ್ಷರಗಳೆನ್ನಿಸಿದ ಜಗತ್ ಸತ್ಯತ್ವ, ಪಂಚಭೇದಗಳ ಜ್ಞಾನವನ್ನು ಗಳಿಸ ಬೇಕು. ಸರ್ವದಾ ಭಗವಂತನ ಲೀಲಾವಿಲಾಸಗಳ ಶ್ರವಣದಿಂದ ನಿಗಮವೇದ್ಯನಾದ ಭಗವಂತನ ಅನುಗ್ರಹವನ್ನು ಸಂಪಾದಿಸಬೇಕು. ಇದೀಗ ವೈಷ್ಣವನ ಗುಣಲಕ್ಷಣಗಳು. ಶ್ರೀಪಾದರಾಜರ ಈ ವಿವರಣೆಯಲ್ಲಿ ಅವರು ಆಚರಣೆಗೆ ಇತ್ತಿರುವ ಪ್ರಾಮಾಣಿಕ ಬೆಲೆ ಯನ್ನು ಕಾಣಬಹುದು.

ಸ್ವಮತ ಪ್ರತಿಷ್ಠೆಯನ್ನು ಸಂಸ್ಥಾಪಿಸುವಲ್ಲಿ ಎಲ್ಲ ಮತಪ್ರವರ್ತಕರೂ ಒಮ್ಮೊಮ್ಮೆ ಅನ್ಯಮತಗಳ ಲೋಪದೋಷಗಳನ್ನು ತೆರೆದು ತೋರಿಸಿ ತೆಗಳುವುದುಂಟು. ಅವೈದಿಕ ಮತಗಳು ವೈದಿಕ ಮತಗಳ ಜಡತನವನ್ನೂ, ಗೊಡ್ಡು ಸಂಪ್ರದಾಯಗಳನ್ನೂ ಕಟುವಾಗಿ ಟೀಕಿಸಿದರೆ, ವೈದಿಕ ಮತಗಳು ಆ ಅನ್ಯಮತಗಳನ್ನು ನಾಸ್ತಿಕ ಮತಗಳೆಂದು ನಿಂದಿಸಿರುವ ನಿದರ್ಶನಗಳು ಹಲವಾರಿವೆ. ಪ್ರಕೃತದಲ್ಲಿ ದ್ವೈತಸಿದ್ಧಾಂತ ಪ್ರತಿಪಾದಕರಾದ ಶ್ರೀಮಧ್ವಾ ಚಾರ್ಯರು ತಮ್ಮ ಕಾಲದಲ್ಲಿ ಬಹಳ ಪ್ರಬಲವಾಗಿದ್ದ ಅದ್ವೈತಮತದ ಪ್ರಮುಖ

ತತ್ವಗಳಲ್ಲಿ ಮಾಯಾವಾದ ಮತ್ತು ಅಭೇದ ತತ್ತ್ವಗಳನ್ನು ಬಹಳ ಉಗ್ರವಾಗಿಯೇ ಖಂಡಿಸಿದರು ಅವರ ಖಂಡನತ್ರಯಗಳಲ್ಲಿ (ಮಾಯಾವಾದ ಖಂಡನ, ಉಪಾಧಿ ಖಂಡನ ಮತ್ತು ಮಿಥ್ಯತ್ವಾನುಮಾನ ಖಂಡನ) ಇದು ಅತ್ಯಂತ ಪ್ರಖರವಾಗಿಯೇ ಕಂಡುಬರುತ್ತದೆ ಅಂದಿನಿಂದ ಇಂದಿನವರೆಗೂ ವಿದ್ವಾಂಸರ ವರ್ತುಲದಲ್ಲಿ ಈ ಖಂಡನ ಮಂಡನಗಳು ಅಖಂಡವಾಗಿ ಸಾಗುತ್ತಲೇ ಇವೆ. ಈ ಸುಂಟರಗಾಳಿಯಲ್ಲಿ ಸಿಕ್ಕಿಬಿದ್ದಾಗ ಹರಿದಾಸರೂ ಒಮ್ಮೊಮ್ಮೆ ಆಚಾರ್ಯರ ಅಭಿಪ್ರಾಯಗಳನ್ನು ಸಾರಿ ಹೇಳುವ ಸಲುವಾಗಿಯೋ, ಇಲ್ಲವೇ ತಮ್ಮ ಜೀವನದಲ್ಲಿಯೇ ಪ್ರಾಸಂಗಿಕವಾಗಿ ಒದಗಿ ಬಂದ ಯಾವುದಾದರೂ ಒಂದು ಸಂದರ್ಭದ ಫಲವಾಗಿಯೋ ಇಂಥ ಖಂಡನಪರವಾದ ಕೃತಿಗಳನ್ನು ರಚಿಸಿರುವುದುಂಟು ಪ್ರಕೃತದಲ್ಲಿ, ಶ್ರೀಪಾದರಾಜರು ತಮ್ಮ ಒಂದು ಕೀರ್ತನೆಯಲ್ಲಿ ಅದ್ವೈತ ಮತದ ಮಾಯಾವಾದವನ್ನೂ, ಅಭೇದತತ್ವವನ್ನೂ ಕುರಿತು ತಮ್ಮ ನಿಲುವನ್ನು ಸ್ಪಷ್ಟ ಪಡಿಸಿರುತ್ತಾರೆ [1]

## ಉಪದೇಶವಾಣಿ

ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ಸದ್ಯಕ್ಕೆ ಪ್ರಪ್ರಥಮರೆಂದು ಪರಿಗಣಿತರಾಗಿರುವ ಶ್ರೀಪಾದರಾಜರ ರಚನೆಗಳಲ್ಲಿ ಹರಿಭಕ್ತಿ ಪ್ರತಿಪಾದನೆಯತ್ತ ಗಮನ ಹರಿದಿರುವಷ್ಟು ಸಾರ್ವತ್ರಿಕವಾದ ಉಪದೇಶಗಳ ಕಡೆ ಹರಿದಿಲ್ಲವೆಂದು ಹೇಳಬಹುದು. ಶ್ರೀಪಾದರಾಜರು ಆತ್ಮಶೋಧನೆಗೆ ತೊಡಗಿದಾಗ ತಮ್ಮ ಅಂತರಂಗವನ್ನೇ ಬಿಚ್ಚಿತೋರಿದ್ದಾರೆ. ಶ್ರೀಕೃಷ್ಣನ ಲೀಲಾವಿನೋದಗಳನ್ನು ವಿವರಿಸುವಲ್ಲಿ, ಆ ಭಕ್ತಿಪ್ರವಾಹದಲ್ಲಿ ಪರವಶರಾಗಿದ್ದಾರೆ. ಸ್ವಮತ ತತ್ತ್ವಗಳನ್ನು ಸಾರಿ ಹೇಳುವಲ್ಲಿ ಬಹುಮಟ್ಟಿಗೆ ಸಂಯಮದ ದಾರಿಯಲ್ಲೇ ನಡೆದು ಹೋಗಿದ್ದಾರೆ ಮಠಾಧಿಪತಿಗಳಾಗಿ ಅವರು ಒಂದು ಪರಿಮಿತಿಯಲ್ಲಿ ತಮ್ಮ ಕಾರ್ಯವನ್ನು ನಿರ್ವಹಿಸಬೇಕಾಗಿತ್ತೆನ್ನುವುದನ್ನು ನಾವು ಮರೆಯುವಂತಿಲ್ಲ. ಆದ್ದರಿಂದ ಸಮಾಜದ ವಿರಾಡ್ರೂಪದ ಕಡೆಗೆ ಅವರ ದೃಷ್ಟಿ ಹೊರಳದಿದ್ದರೂ, ಸಾತ್ವಿಕವಾದ ಜೀವನವನ್ನು ನಡೆಸಲು ಮನುಷ್ಯನು ಹೇಗೆ ವರ್ತಿಸಬೇಕು ಎಂಬ ಬಗ್ಗೆ ಕೆಲವು ಹಿತೋಪದೇಶದ ನುಡಿಗಳನ್ನು ಆಗಿಂದಾಗ್ಗೆ ಆಡಿರುತ್ತಾರೆ ಸಂಸಾರಕ್ಕೆ ಕಟ್ಟುಬಿದ್ದ ಮೂಢ ಜನರನ್ನು ಕಂಡು 'ಅಕಟಕಟ ಸಂಸಾರವನು ನೆಚ್ಚಿ ಕೆಡಬ್ಯಾಡ, ವಿಕಟ ಮಾನವರು ಕೆಟ್ಟರೆಲ್ಲರು ನಿಜ' ಎಂದು ಸೊಲ್ಲೆತ್ತಿ, ನರಕಾಸುರ, ಕಾರ್ತವೀರ್ಯಾರ್ಜುನ, ಕೌರವ ಮತ್ತು ನಹುಷರು ಹೇಗೆ ಅಹಂಕಾರದಿಂದ ಬೀಗಿ ಬಣ್ಣಗೆಟ್ಟರೆನ್ನುವುದನ್ನು ಮನನಾಟುವಂತೆ

---

[1] ಇಂಥ ಖಂಡನಪರವಾದ ಕೃತಿಗಳನ್ನು ಸಾಕಷ್ಟು ಆಕರ ಪ್ರಾಮಾಣ್ಯವಿದ್ದಲ್ಲಿ ಮಾತ್ರ ಸ್ವೀಕರಿಸಲಾಗುವುದು. ಇಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ಆಯಾ ಹರಿದಾಸರ ಅಭಿಪ್ರಾಯಗಳೆಂದು ಗ್ರಹಿಸಬೇಕೇ ವಿನಾ, ಇದಕ್ಕೆ ಸಂಪಾದಕರಾಗಲಿ, ಸಂಸ್ಥೆಯಾಗಲಿ ಹೊಣೆಯಲ್ಲವೆಂದು ವಿನಯಪೂರ್ವಕವಾಗಿ ವಿನಂತಿಮಾಡಿಕೊಳ್ಳಬಯಸುತ್ತೇವೆ ಇಂಥ ರಚನೆಗಳು ಆಯಾ ಕಾಲದ ಧಾರ್ಮಿಕ ಚಲನವಲನಗಳ ಮೇಲೆ ಸಾಕಷ್ಟು ಬೆಳಕನ್ನು ಬೀರುವುದರಿಂದ, ಇವುಗಳಿಗೆ ಐತಿಹಾಸಿಕ ಮೌಲ್ಯವಿದೆಯೆನ್ನುವುದನ್ನು ನಾವು ಕಡೆಗಣಿಸುವಂತಿಲ್ಲ.

ಇತ್ತ ಬಾರೆಂತೆಂದು ಹತ್ತಿಲಿಗೆ ಕರೆದೊಂದು
ತುತ್ತು ಕೊಡುವವರ ಕಾಣೆನೋ ಕೃಷ್ಣ
ವಿಸ್ತರಿಸಲಾರೆ ಇನ್ನೆತ್ತ ಪೋಗಲೊ ನಿನ್ನ
ಚಿತ್ತವ್ಯಾತಕೆ ಕರಗದೋ ಕೃಷ್ಣ

ಎಂಬ ಧಾಟಿಯಲ್ಲಿ ಭಕ್ತನ ಹೃದಯದ ಹೊಯ್ದಾಟದ ತುತ್ತತುದಿಯನ್ನು ಕಾಣಬಹುದು.

ಭಕ್ತಿಗೀತಗಳಲ್ಲಿ ಭಾವಾವೇಶಕ್ಕೆ ಇರುವಷ್ಟು ಪ್ರಾಧಾನ್ಯ, ಅಲಂಕಾರ ಚಮತ್ಕಾರಗಳಿಗಿಲ್ಲ. ಅನುಭವ ಗಾಢವಾದಾಗ ಭಕ್ತನ ಮಾತು ಗಾದೆಯಂತೆ ರಸವತ್ತಾಗಬಲ್ಲುದು. ಮೊರೆಯು ಕರೆ ಮೇರೆ ಮೀರಿದಾಗ ಮಾತುಗಳು ಮಂತ್ರಶಕ್ತಿಯನ್ನು ಪಡೆಯಬಲ್ಲುವು. ಕಿವಿಗೆ ಇಂಪಾದ ಪ್ರಾಸವೈವಿಧ್ಯಗಳು ಸಹಜವಾಗಿ ಹೆಣೆದುಕೊಳ್ಳಬಹುದು. ಶ್ರೀಪಾದರಾಜರ ಕೀರ್ತನೆಗಳಲ್ಲಿಯೂ ಇವುಗಳನ್ನು ಆಗಿಂದಾಗ್ಗೆ ನಾವು ಕಾಣಬಹುದು. ಪುಂಖಾನುಪುಂಖವಾಗಿ ಪೂರ್ವಕಥೆಗಳನ್ನು ಉದಾಹರಿಸುವ ಅವರ ಮನೋಧರ್ಮ ಅವರ ಕೃತಿಗಳ ಕಾಂತಿಯನ್ನು ಅಪರಿಮಿತವಾಗಿ ಹೆಚ್ಚಿಸಿದೆ ಎನ್ನಬಹುದು. ಮುಖ್ಯವಾಗಿ, ಶ್ರೀಪಾದರಾಜರು ಭಜನೆಯ ಸಲುವಾಗಿ ಕೈಕೊಂಡ ಈ ಕೀರ್ತನ ಪದ್ಧತಿ ಮೊತ್ತಮೊದಲಿನಲ್ಲಿಯೇ ಮುಂದೆ ಬಂದ ಪ್ರತಿಭಾಶಾಲಿಗಳಿಗೆ ಒಳ್ಳೆಯ ಮೇಲ್ಪಂಕ್ತಿಯಾಯಿತು. ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು, ಪುರಂದರದಾಸರು, ಕನಕದಾಸರು ಮೊದಲಾದವರ ರಚನೆಗಳನ್ನು ಈ ದೃಷ್ಟಿಯಿಂದ ತೌಲನಿಕವಾಗಿ ಪರಿಶೀಲಿಸಿದಾಗ ಇದರ ವಾಸ್ತವಾಂಶವು ಬೆಳಕಿಗೆ ಬರುತ್ತದೆ.

## ವಿವಿಧ ಪ್ರಕಾರಗಳು

ಶ್ರೀಪಾದರಾಜರ ರಚನೆಗಳಲ್ಲಿ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ ಮತ್ತು ದಂಡಕ*ಗಳೆಂಬ ಪ್ರಕಾರಗಳು ಕಂಡುಬರುತ್ತವೆ. ದಂಡಕವೊಂದನ್ನು ಬಿಟ್ಟು ಉಳಿದುವೆಲ್ಲವೂ ಸಂಗೀತದ ತಳಹದಿಯ ಮೇಲೆ ರಚಿತವಾಗಿರುವ ಪ್ರಕಾರಗಳು. ಅವುಗಳಲ್ಲಿ ವರ್ಣವೃತ್ತದ ಲಯಗಳನ್ನಾಗಲಿ, ಮಾತ್ರಾವೃತ್ತದ ಸ್ವರೂಪವನ್ನಾಗಲಿ ನಿರ್ದೇಶಿಸುವುದು ಉಚಿತವೆನ್ನಿಸದು. ಕಾವ್ಯಗಳಲ್ಲಿ ಪ್ರಯೋಗವಾಗಿರುವ ನಿಯತವಾದ ಛಂದೋಪದ್ಧತಿಗೂ ಇವುಗಳಿಗೂ ಅಂತರವಿದೆ. ಮುಂದೆ ಕೆಲವು ಹರಿದಾಸರು ಮುಖ್ಯವಾಗಿ, ತ್ರಿಪದಿ, ಸಾಂಗತ್ಯ ಮತ್ತು ಷಟ್ಪದಿಗಳನ್ನೇ ಸ್ಪಷ್ಟವಾಗಿ ಬಳಸಿರುವುದುಂಟು. ಕೆಲವು ಹಾಡುಗಳಲ್ಲಿ ಹಾಗೂ ಹೀಗೂ ಅಂಶಗಣದ ಸೌಲಭ್ಯವನ್ನು ಹೋಲುವ ನಡಿಗೆಯನ್ನು ಒಮ್ಮೊಮ್ಮೆ ಕಾಣಬಹುದು. ಆದರೆ ಕೀರ್ತನಕಾರರಿಗೆ ಈ ಉದ್ದೇಶ ಎಷ್ಟರಮಟ್ಟಿಗೆ ಇದ್ದಿತು ಎಂದು ಖಚಿತವಾಗಿ ನಾವು ಹೇಳುವಂತಿಲ್ಲ. ಆದ್ದರಿಂದ ಈ ಬಂಧ ವಿಶ್ಲೇಷಣೆಗೆ ಇಲ್ಲಿ ತೊಡಗಿಲ್ಲ.

* ಈ ದಂಡಕದಲ್ಲಿ ರಗಣವನ್ನೇ ಹೋಲುವ ಪಂಚಮಾತ್ರಾಗಣಗಳು ನಿಯತವಾಗಿ ಬರುವುದು ಗಮನಾರ್ಹವಾದುದು.

# ಕೃತಿಗಳ ಕ್ರಮಸೂಚಿಕೆ

ಕೃತಿಗಳ ಮೊದಲ ಪಂಕ್ತಿ | ಪುಟಸಂಖ್ಯೆ


೧ ಅಕಟಕಟ ಸಂಸಾರವನು ನೆಚ್ಚಿ ಕೆಡಬ್ಯಾಡ ... ... ... ೧
೨ ಅನ್ನಂತಕಾಲದಲ್ಲಿ (ಸುಳಾದಿ) ... ... ... .. ೨
೩ ಇಕ್ಕೋ ನೋಡೆ ರಂಗನಾಥನ ಚಿಕ್ಕಪಾದವ .. ... ... ೪
೪ ಇಟ್ಯ್ಹಾಂಗೆ ಇರುವೆನೋ ಹರಿಯೇ ... ... .. ೫
೫ ಇದನಾದರು ಕೊಡದಿದ್ದರೆ ... ... .. ... ೬
೬ ಇದಿರದಾವನು ನಿನಗೀಧರೆಯೊಳು ... ... ... ೭
೭ ಈ ವನದೆಡೆಗಳು ಈ ಲತೆವನಗಳು (ಸುಳಾದಿ) ... ... ... ೭
೮ ಉತ್ತಮರ ಸಂಗಯೆನಗಿತ್ತು ಸಲಹೊ ... ... ... ೧೦
೯ ಎಲ್ಯಾಡಿ ಬಂದ್ಯೋ ಎನ್ನ ರಂಗಯ್ಯಾ ನೀ . ... ... ೧೦
೧೦ ಎಲ್ಯಾಡಿ ಬಂದ್ಯೋ ನೀ ಹೇಳಯ್ಯಾ ... ... ... ೧೧
೧೧ ಒಲ್ಲೆನವ್ವಾ ಲಕುಮಿಯ ನಲ್ಲ ಬಾರದಿದ್ದರೆ ... ... ... ೧೨
೧೨ ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ ... ... ... ೧೩
೧೩ ಕಂಜನೇತ್ರೆ ಶುಭ ಮಂಜುಳಗಾತ್ರೆ ... ... ... ೧೩
೧೪ ಕರುಣದಿ ತನುಮನಧನಂಗಳೆಲ್ಲವು (ಉಗಾಭೋಗ) ... ... ೧೬
೧೫ ಕಾಳಬೆಳದಿಂಗಳು ಈ ಸಂಸಾರ ಕತ್ತಲೆ ಬೆಳದಿಂಗಳು ... ... ೧೬
೧೬ ಕೇಳಿದ್ಯಾ ಕೌತುಕವನ್ನು ಕೇಳಿದ್ಯಾ .. ... ... ೧೭
೧೭ ಕೊಂಬು ಕೊಳಲನೂದುತ್ತ ನಂಬಿಸಿಪೋದನೆಯವ್ವಾ ... ... ೧೮
೧೮ ಗೊಲ್ಲತಿಯರೆಲ್ಲ ಕೂಡಿ ... ... ... ... ೧೯
೧೯ ಚಿತ್ತಜನಯ್ಯನ ಚಿಂತಿಸು ಮನವೇ ... ... ... ೨೦
೨೦ ಜಯಜಯ ಜಗತ್ಪ್ರಾಣ ಜಗದೊಳಗೆ ಸುತ್ರಾಣ ... ... ... ೨೦
೨೧ ಜೋ ಜೋ ಜೋ ಜೋ ಜೋ ರಂಗಧಾಮ .. ... ... ೨೫
೨೨ ದಯಮಾಡಿ ಸಲಹಯ್ಯ ಭಯನಿವಾರಣನೆ ... ... ... ೨೭
೨೩ ದುರಿತಗಜಪಂಚಾನನ ... ... ... ... ೨೭
೨೪ ದೃಷ್ಟಿ ತಾಕೀತೋ ಬೀದಿ ಮೆಟ್ಟಬ್ಯಾಡವೋ ... ... ... ೨೮
೨೫ ಧ್ಯಾನವು ಕೃತಯುಗದಿ (ಉಗಾಭೋಗ) ... ... ... ೩೦
೨೬ ನಂದನಂದನ ಪಾಹಿ . ... ... ... ೩೦
೨೭ ನಾ ನಿನಗೇನು ಬೇಡುವುದಿಲ್ಲ ... ... ... ... ೩೦
೨೮ ನಾನೇ ಸಜ್ಜನನಾದಡೆ ... ... ... ... ೩೧
೨೯ ನಾರಾಯಣ ನಿನ್ನ ನಂಬಿದೆ ... ... ... ... ೩೨
೩೦ ನಿನ್ನಾಧೀನ ಶರೀರಕರಣ ಚೇಷ್ಟೆಗಳೆಲ್ಲ (ಸುಳಾದಿ) ... ... ೩೩
೩೧ ನೀನೆ ಬಲ್ಲಿದನೋ ರಂಗಾ ... ... ... ... ೩೪

೩೨ ಪಾಲೊಳಗದ್ದು ನೀರೊಳಗದ್ದು ... . ... ೩೫
೩೩ ಪೋಪು ಹೋಗೋಣ ಬಾರೊ ರಂಗ ... . ೩೬
೩೪ ಬಾರೋ ನಮ್ಮ ಮನೆಗೆ ಗೋಪಾಲಕೃಷ್ಣ . . . . ೩೬
೩೫ ಬಾರೋ ಮನೆಗೆ ಗೋವಿಂದ . . . ... ೩೭
೩೬ ಬಿಡಿಬಿಡಿ ಸಂದೇಹವನು ಪೊಡವಿಮನುಜರೆಲ್ಲ . ೩೮
೩೭ ಭಕ್ತಿಬೇಕು ವಿರಕ್ತಿಬೇಕು . . . . . ೪೦
೩೮ ಭೂಷಣಕೆ ಭೂಷಣ ಇದು ಭೂಷಣ . . ೪೧
೩೯ ಭೃಂಗಾ ನಿನ್ನಟ್ಟಿದನೇ ಶ್ರೀರಂಗ (ಭ್ರಮರಗೀತೆ) ೪೧
೪೦ ಮನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ (ಉಗಾಭೋಗ) . . ೪೪
೪೧ ಮರುದಂಶರಮತ ಪಿಡಿಯದೆ . . . ೪೫
೪೨ ಮರೆತೆಯೇನೋ ರಂಗಾ ಮಂಗಳಾಂಗ . ೪೫
೪೩ ಮಾನನಿಧಿ ಶ್ರೀಕೃಷ್ಣ ಮಧುರೆಗೈದುವನಂತೆ . . . . ೪೬
೪೪ ಮಾಯಮತವೊಳಿತಲ್ಲ ನಿನಗೆ . . . ೫೦
೪೫ ಮೋಸಹೋದೆನಲ್ಲ ಸಕಲವು ವಾಸುದೇವ ಬಲ್ಲ ೫೧
೪೬ ಯಾಕೆ ಇಂಥ ದುಡುಕು ಕೃಷ್ಣಯ್ಯ . . ೫೨
೪೭ ಯಾಕೆ ಪುಟ್ಟಿಸಿದಿ ನೀ ಸಾಕಲಾರದೆ . ೫೩
೪೮ ರಂಗನಾಥನ ನೋಡುವ ಬನ್ನಿ . . . . . ೫೬
೪೯ ರಂಗಾ ಮನೆಗೆ ಬಾರೊ ಕೃಪಾಂಗ . ೫೭
೫೦ ಲಾಲಿ ಗೋವಿಂದ ಲಾಲಿ . . ೫೮
೫೧ ವಂದನೆ ಮಾಡಿರೈ ಯತಿಕುಲಚಂದ್ರನ ಪಾಡಿರೈ . . ೬೨
೫೨ ವನಜನಯನನ ಮನವ ಮಧುಪನಂಬುವರೆ . ೬೩
೫೩ ವಿಧಿಗೆ ದಯವಿಲ್ಲವಕ್ಕ ಎಮ್ಮಮ್ಮಾಲೆ . . . ೬೪
೫೪ ವೃಷಭನೇರಿದ ವಿಷಧರನ್ಯಾರೆ ಪೇಳಮ್ಮಯ್ಯ . . . ೬೫
೫೫ ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ . . ೬೬
೫೬ ಸದ್ದುಮಾಡಲು ಬೇಡವೊ ೬೭
೫೭ ಸರಸಿಜಾಕ್ಷ ಸರಸದಿಂದ ಸರಸಿಜೋದ್ಭವಗೊಲಿದುಬಂದ ೬೭
೫೮ ಸಾಸಿರ ಜಿಹ್ವೆಗಳುಳ್ಳ ಶೇಷನೆ ಕೊಂಡಾಡಬೇಕು . . . ೬೮
೫೯ ಸುಮ್ಮನೆ ವೈಷ್ಣವನೆಂಬಿರಿ . . . . . . . ೬೮
೬೦ ಸ್ಮರಿಸಿದವರೆನು ಕಾಯ್ವ ನಮ್ಮ ಸೂರ್ಯಾನೇಕ ಪ್ರಭಾವ . ೬೯
೬೧ ಹರಿಹರರು ಸರಿಯೆಂಬ ಮರುಳು ಜನರು . . . ೭೦
೬೨ ಹರೇ ವೆಂಕಟಶೈಲವಲ್ಲಭ . ೭೨

ಅನುಬಂಧ ೧

## ಪಾಠಪ್ರಭೇದ

೧ ನಾ ನಿನಗೇನು ಬೇಡುವುದಿಲ್ಲ ... ... . . . ೭೫
೨ ಸದ್ದುಮಾಡಲಿ ಬ್ಯಾಡವೋ ... . . ... ೭೫

ಅನುಬಂಧ ೨

## ಅಂಕಿತ ಸಂದಿಗ್ಧ


| | | |
|---|---|---|
| ೧ | ಅಂಬರದಾಳವನು (ಉಗಾಭೋಗ) | ೭೯ |
| ೨ | ಕಲಿಕಾಲಕೆ ಸಮಯುಗವಿಲ್ಲವಯ್ಯ (ಉಗಾಭೋಗ) | ೭೯ |
| ೩ | ತಾತಾತಾತಾತಾ ರಂಗ ನಿನ್ನಪಾದ | ೭೯ |
| ೪ | ಬರುವುದು ಬುದ್ಧಿಯು ಬಲವು ಕೀರುತಿಯು (ಉಗಾಭೋಗ) | ೮೦ |
| ೫ | ಬಲ್ಲವನು ಉಳ್ಳವನು ನೀನಿರಲು ಭಜಿಸದೆ (ಉಗಾಭೋಗ) | ೮೦ |
| ೬ | ವಾಸುದೇವ ನಿನ್ನ ಮರ್ಮ ಕರ್ಮಂಗಳ | ೮೦ |


ಅನುಬಂಧ ೩

## ಐಕ್ಯೈಕ ಆಕರ


| | | |
|---|---|---|
| ೧ | ಇಂದಿನಿರುಳಿನ ಕನಸಿನಲ್ಲಿ ಬಂದು | ೮೫ |
| ೨ | ಇನ್ನಿವನು ಈಗ ಬರಲಿದಕೆ ಬಗೆಯೇನು | ೮೬ |
| ೩ | ಏಕೆ ದೂರುವಿರೇ ರಂಗಯ್ಯನ ... | ೮೭ |
| ೪ | ಏನು ಭ್ರಮೆ ಮನುಜರಿಗೆ | ೮೮ |
| ೫ | ಒಲಿದೆ ಯಾತಕಮ್ಮಾ ಲಕ್ಷುಮಿ | ೮೮ |
| ೬ | ಕಂತುಪಿತನೆ ನಿನ್ನ ಎಂತು ವರ್ಣಿಪೆ | ೮೯ |
| ೭ | ಕಂಬಳಿಯ ಬುತ್ತಿಯಲಿ | ೯೦ |
| ೮ | ಕೀರ್ತಿಸಿ ಜನರೆಲ್ಲ ಹರಿಯ ಗುಣ | ೯೦ |
| ೯ | ಗುಮ್ಮ ಬಂದನೆಲೊ ದುರ್ಜನ ಬೇಡ | ೯೧ |
| ೧೦ | ಚಿಂತೆಯನು ಮಾಡದಿರು ಚದುರೆ | ೯೨ |
| ೧೧ | ಜಯಮಂಗಳಂ ನಿತ್ಯ ಶುಭಮಂಗಳಂ | ೯೪ |
| ೧೨ | ತುರುಗಾಯು ಬಂದ ಗೋಪಿಯ ಕಂದ | ೯೪ |
| ೧೩ | ತೆರಳೆ ನೀ ಮಧುರೆಗೆ ಗೋಕುಲದಲಿ ನಾವು | ೯೬ |
| ೧೪ | ನಿನ್ನ ಪೂಜೆಯೊ ರಾಮ | ೯೮ |
| ೧೫ | ನಿನ್ನ ಮಗನ ಲೀಲೆಯ ತಾಳಲಾರೆವೆ ನಾವು | ೯೮ |
| ೧೬ | ಭವವೆಂಬ ಅಡವಿಯಲ್ಲಿ (ಉಗಾಭೋಗ) | ೧೦೦ |
| ೧೭ | ಮುಂದೆ ಕೆಟ್ಟು ಬಂದವರ (ಉಗಾಭೋಗ) | ೧೦೦ |
| ೧೮ | ಮಾರಿಕೋಣನಂತೆ ಘೋರ ಭಾಗ್ಯವ ಕೊಟ್ಟು (ಉಗಾಭೋಗ) | ೧೦೦ |
| ೧೯ | ರಂಗ ಕೊಳಲನೂದುತ ಬಂದ... | ೧೦೦ |
| ೨೦ | ರಕ್ಷ ಮಾಂ ರಂಗೇಶ | ೧೦೩ |
| ೨೧ | ರಾಮಾವರಂತೆ (ರಾಮಾ ! ಅವರಂತೆ ?) ರಕ್ಷಿಸೋ ಎಂದರೆ | ೧೦೪ |
| ೨೨ | ವಂದನೆ ಮಾಡಿರೈ | ೧೦೫ |
| ೨೩ | ಶ್ರೀರಮಾಮಾನಿನೀ (ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕಂ) | ೧೦೬ |
| ೨೪ | ಶ್ರೀರಾಮ ನಿನ್ನ ಪಾದವ ತೋರೋ | ೧೨೪ |

೨೫ ಸರಸಿಜನಾಭನೆ ಪೆರಗೊಡ್ಡಿ ಬೇಡುವೆ ... ... ... ೧೨೪
೨೬ ಸಾಗಿಬಾರಯ್ಯ ನೀ ಬಾಗಿ ನಮಿಸುವೇ ... ... ... ೧೨೫
೨೭ ಸಾಲಿಗ್ರಾಮ ವೃಂದಾವನದಲಿ ಇಪ್ಪಂತೆ (ಉಗಾಭೋಗ) ... ... ೧೨೬
೨೮ ಹರಿಭಕುತನಾದವ ಅರಿದು ಪಾಪವ ಮಾಡುವುದಿಲ್ಲ (ಉಗಾಭೋಗ) ... ೧೨೬

ಅನುಬಂಧ ೪

## ಅಧಿಕ ಕೃತಿಗಳು

೧ ಅನಂತಕಾಲದಲ್ಲಿ ಯಾವ ಪುಣ್ಯದಲ್ಲಿ (ಉಗಾಭೋಗ) ... ... ೧೨೯
೨ ಎನ್ನಮನ ವಿಷಯಂಗಳಲಿ ಮುಣುಗಿತೊ (ಉಗಾಭೋಗ) ... ... ೧೨೯
೩ ಪಾಲಿಸಯ್ಯ ಸ್ವಾಮಿ ಕೃಷ್ಣ ಪಾಲಿಸಯ್ಯ (ಉಗಾಭೋಗ) ... ... ೧೨೯
೪ ಶ್ರೀರಂಗವಿಠಲನ ಶ್ರೀಮುಕುಟಕೆ ಶರಣು ... ... ... ೧೩೦

ಯದ್ವೃಂದಾವನ ಸೇವಯಾ ಸುವಿಮಲಾಂ ವಿದ್ಯಾನ್ ಪಶೂನ್ ಸಂತತಿಂ
ಧ್ಯಾನಜ್ಞಾನಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಸೌಖ್ಯಂ ಜನಃ
ತಂ ವಂದೇ ನರಸಿಂಹತೀರ್ಥ ನಿಲಯಂ ಶ್ರೀವ್ಯಾಸರಾಟ್ ಪೂಜಿತಮ್
ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಮ್

— ಶ್ರೀವ್ಯಾಸರಾಯರು

# ೧

ರಾಗ: ಕಲ್ಯಾಣಿ ತಾಳ: ಝಂಪೆ

ಅಕಟಕಟ ಸಂಸಾರವನು ನೆಚ್ಚಿ ಕೆಡಬ್ಯಾಡ ಪ.

ವಿಕಟದಲಿ ಮಾನವರು ಕೆಟ್ಟರೆಲ್ಲರು ನಿಜ ಅ.ಪ.

ಮುನ್ನ ನರಕಾಸುರನು ಬಡಿದು ಚಿಂತಾಮಣಿಯ
ತನ್ನ ಮನೆಯಲಿ ತಂದು ನಿಲ್ಲಿಸಿ ನೃಪರ
ಕನ್ನೆಯರ ಷೋಡಶಸಹಸ್ರವನೆ ತಂದಾತ
ಹೆಣ್ಣನೊಬ್ಬಳನೊಯ್ದುದಿಲ್ಲವೊ ನೋಡೊ ೧

ಸಾವಿರ ಕರ ಪಡೆದ ಕಾರ್ತವೀರ್ಯಾರ್ಜುನನು
ಭೂವಲಯದೊಳಗೊಬ್ಬನೇ ವೀರನೆನಿಸಿ
ರಾವಣನ ಸೆರೆಯಿಟ್ಟು ಕಾಮಧೇನುವ ಬಯಸಿ
ಸಾವಾಗ ಏನು ಕೊಂಡೊಯ್ದನೋ ನೋಡೊ ೨

ಕೌರವನು ಧರೆಯೆಲ್ಲ ತನಗಾಗಬೇಕೆಂದು
ವೀರಪಾಂಡವರೊಡನೆ ಕದನಮಾಡಿ
ಮಾರಿಯ ವಶವೈದಿ ಹೋಹಾಗ ತನ್ನೊಡನೆ
ಶ್ಯಾರೆ ಭೂಮಿಯ ಒಯ್ದುದಿಲ್ಲವೊ ನೋಡೊ ೩

ವರಯಜ್ಞಗಳ ಮಾಡಿ ನಹುಷ ಸುರಪತಿಯೆನಿಸಿ
ಪರಮಮುನಿಗಳ ಕೈಲೆ ದಂಡಿಗೆಯ ಹೊರಿಸಿ
ಉರಗ ಜನುಮವನೈದಿ ಹೋಹಾಗ ತನ್ನೊಡನೆ
ಸುರಲೋಕದೊಳಗೇನ ಕೊಂಡ್ಹೋದ ನೋಡೊ ೪

ತುಂಗಗುಣ ಧ್ರುವ ವಿಭೀಷಣ ಹನುಮಾದಿಗಳು
ಮಂಗಳಾತ್ಮಕ ಹರಿಯನರಿತು ಭಜಿಸಿ
ಭಂಗವಿಲ್ಲದೆ ಹೊರೆದರೈ ಸಕಲ ಭಾಗ್ಯವನು
ರಂಗವಿಠಲರೇಯನ ನೆರೆ ನಂಬಿರೋ ೫

## ೨

### ಸುಳಾದಿ

ರಾಗ : ನಾಟಿ

ಧ್ರುವತಾಳ

ಅನ್ನಂತ ಕಾಲದಲ್ಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೊ
ಅನ್ನಂತ ಕಾಲದಲ್ಲಿ ನಿನ್ನವನೆನಿಸದೆ ಮೂರುಖನಾದೆನೊ
ಅನ್ನಂತ ಕಾಲದಲ್ಲಿ ನಿನ್ನ ಚರಣರತಿಯಿಲ್ಲದೆ ನೊಂದೆನೊ
ಅನ್ನಂತ ಕಾಲದಲ್ಲಿ ಆದಾವ ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ ಆದಾವ ಪುಣ್ಯದಿಂದಲೆನ್ನ ಮನ
ನಿನ್ನಲ್ಲೆರಗಿತೊ ನೋಯದಂತೆ
ಎನ್ನ ಪೊರೆದು ಪಾಲಿಸೊ ದೀನನಾಥ ಶ್ರೀರಂಗವಿಠಲ ೧

ಮಠ್ಯತಾಳ

ಅನ್ನಕ ಭಯದ್ರವಿಣ ದೇಹನಿಮಿತ್ತ
ಅನ್ನಕ ಶೋಕಾಶಯ ಮಹಾರಿ
ಅನ್ನಕ ಲೋಭ ಅಶುಭದ ಲಾಭ
ಅನ್ನಕ ನನ್ನದು ನಾನೆಂಬಹಮ್ಮಿಕೆ
ಆವನ್ನಕ ನಿನ್ನ ಚರಣರತಿ ದೊರಕೊಳ್ಳದೊ
ಉನ್ನಂತ ಗುಣಪರಿಪೂರ್ಣ ರಂಗವಿಠಲ ೨

ತ್ರಿಪುಟತಾಳ

ತೊಳಲಿ ಸಂಸಾರ ಚಕ್ರದಲಿ ಸಿಲುಕಿ
ಬಳಲಿದ ಜೀವಗಣಕೆ ಸಂತತ
ನಳಿನನಾಭಾ ನಿನ್ನ ಪದಾಂಭೋಜ
ನೆಳಲು ನೆಮ್ಮಗೆಯಲ್ಲವೆ
ಒಳವೆ ಜಗದೊಳು ಸಕಲ ಸುಖಂಗಳು
ಕಳವಳಿಸುವರು ರಂಗವಿಠಲ ೩

ರೂಪಕತಾಳ

ನೀ ಕರುಣಿಯೆಂದು ನಿನ್ನ ನಾ ಮೊರೆಹೊಕ್ಕೆ
ನೀಕರಿಸದೆ ಎನ್ನ ಶ್ರೀಕಾಂತ ಕಾಯಯ್ಯ

ನಿನ್ನವನೆಂಬೆ ನಾನು ಮತ್ತನ್ಯವನರಿಯೆನು
ನಿನ್ನವನೆಂಬೆ ನಾನು
ಕಂದರ್ಪನೆಂದೆಂದು ಕಾಡದಂತೆ ಮಾಡೊ
ವೃಂದಾರಕಾಧೀಶ ರಂಗವಿಠಲ

ಝಂಪೆತಾಳ

ಪರರ ಬಾಗಿಲು ಕಾಯಿದು ಹೋಯಿತೀ ಸಂಸಾರ
ಪರರ ಗುಣಗಳ ತುತಿಸಿ ಹೋಯಿತೀ ನಾಲಗೆ
ಪರರ ಹಾರಿ ಹಾರಿ ಹೋಯಿತ್ತಿಂತೆನ್ನ ಮನ
ಪರಮಕಾರುಣಿಕನೆ ನಮೋ ರಂಗವಿಠಲಯ್ಯ ೫

ಅಟ್ಟತಾಳ

ಎನ್ನ ಮನ ಹರಿ ನಿನ್ನ ಚರಣದೊಳೊಮ್ಮೆ
ಎರಗದು ದುರಿತ ದುಷ್ಕೃತವೆಂತು ಸೈರಿಪೆನೊ
ನಂದನಂದನ ಮುಕುಂದ ಎಂತು ಸೈರಿಪೆನೊ
ಮಂದಹಾಸ ಗೋವಿಂದ ಎಂತು ಸೈರಿಪೆನೊ
ಎನ್ನ ಮನವನು ನಿನ್ನ ಚರಣದೊಳೊಮ್ಮೆ
ಎರಗಿಸೊ ರಂಗವಿಠಲ ಎಂತು ಸೈರಿಪೆನೊ ೬

ತ್ರಿಪುಟತಾಳ

ವ್ರತ ಜಪತಪ ಯಾಗಂಗಳ ಮಾಡುವೆನೆಂದು
ಮನೆಮನೆದಪ್ಪದೆ ತಿರುಗಿ ಬಳಲಿದೆ
ಬೆಲೆಗೆ ಹೋಗದು ಸರಕು ಸಡಿಲದಯ್ಯಾ ಹರಿಯೆ
ಕೊಂಬುವರಿಲ್ಲ ಬೆಲೆಗೆ ಹೋಗದು ಸರಕು
ಸಡಿಲುವಂತೆ ಮರೆಗೆ ತೆಗೆದು ನಿನ್ನ
ಚರಣದಡಿಯಲಿಟ್ಟು ಕಾಯೊ ರಂಗವಿಠಲ ೭

ಏಕತಾಳ

ಭವವೆಂಬಟವಿಯಲ್ಲಿ ಭಯಕೊಳದಲಿ ಸಿಕ್ಕಿ
ತಾಪತ್ರಯವೆಂಬ ದಾವಾನಲ ತಪ್ತ ನರರಿಗೆ
ಹರಿ ನಿನ್ನ ನಾಮಾಶ್ರಯವಲ್ಲದೆ ಮತ್ತುಂಟೆ

ಮನುಲೋಕದಲ್ಲುಂಟೆ ತನುಪರಿಣ (?) ವಲ್ಲಭ
ಅಮೃತ ಒಸರುವ ಪದಪದುಮದ
ನೆಳಲ ನೆಲೆವನೆಯಲಿ ಎನ್ನನಿರಿಸೊ ರಂಗವಿಠಲ ೮

ಜತೆ

ಬೆಂದ ಸಂಸಾರದಿ ಬಂದು ನೊಂದು ಬಳಲಿದೆನಯ್ಯ
ನಂದ ನಂದನ ಕಾಯೊ ರಂಗವಿಠಲ

೩

ರಾಗ. ಮಧ್ಯಮಾವತಿ ತಾಳ: ಏಕತಾಳ

ಇಕ್ಕೋ ನೋಡೆ ರಂಗನಾಥನ ಚಿಕ್ಕಪಾದವ ಪ.

ಸಿಕ್ಕಿತೆ ಶ್ರೀ ಲಕ್ಷ್ಮೀಪತಿಯ ದಿವ್ಯಪಾದವ ಅ.ಪ.

ಶಂಖ ಚಕ್ರ ಗದಾ ಪದ್ಮ ಅಂಕಿತ ಪಾದವ
ಅಂಕುಶ ಕುಲಿಶ ಧ್ವಜರೇಖಾ ಅಂಕಿತ ಪಾದವ
ಪಂಕಜಾಸನನ ಹೃದಯದಲ್ಲಿ ನಲಿಯುವ ಪಾದವ
ಸಂಕಟಹರಣ ವೆಂಕಟೇಶನ ದಿವ್ಯ ಪಾದವ ೧

ಲಲನೆ ಲಕ್ಷ್ಮಿಯಂಕದಲ್ಲಿ ನಲಿಯುವ ಪಾದವ
ಜಲಜಾಸನನ ಅಭೀಷ್ಟವೆಲ್ಲ ಸಲಿಸುವ ಪಾದವ
ಮಲ್ಲರ ಗೆಲಿದು ಕಂಸಾಸುರನ ಕೊಂದ ಪಾದವ
ಬಲಿಯ ಮೆಟ್ಟಿ ಭಾಗೀರಥಿಯ ಪಡೆದ ಪಾದವ ೨

ಬಂಡೆಯ ಬಾಲೆಯ ಮಾಡಿದ ಉದ್ದಂಡ ಪಾದವ
ಬಂಡಿಲಿದ್ದ ಶಕಟಾಸುರನ ಒದ್ದ ಪಾದವ
ಅಂಡಜ ಹನುಮರ ಭುಜದೊಳೊಪ್ಪುವ ಪಾದವ
ಕಂಡೆವೆ ಶ್ರೀರಂಗವಿಠಲನ ದಿವ್ಯಪಾದವ ೩

೪

ರಾಗ : ಸಾವೇರಿ ತಾಳ : ಆದಿತಾಳ

ಇಟ್ಹಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ ಪ.

ಸೃಷ್ಟಿವಂದಿತ ಪಾದಪದುಮ ಶ್ರೀ ಹರಿಯೇ ಅ. ಪ.

ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ
ಚಿನ್ನದ ಹರಿವಾಣದಲಿ ಭೋಜನ
ಘನ್ನಮಹಿಮ ನಿನ್ನ ಕರುಣ ತಪ್ಪಿದ ಮ್ಯಾಲೆ ಕ-
ದನ್ನ ಕಾಣದೆ ಬಾಯ್ಬಿಡಿಸುವಿ ಹರಿಯೇ ೧

ಕೆಂಪಿಲಿ ಪೊಳೆವ ಪೀತಾಂಬರ ಉಡಿಸುವಿ
ಸೊಂಪಿನಂಚಿನ ಶಾಲು ಹೊದಿಸುವಿಯೋ
ಕಪಿಲಹರೇ ನಿನ್ನ ಕೃಪೆಯು ತಪ್ಪಿದ ಮ್ಯಾಲೆ
ಕಪರ್ದಕ ಕೌಪೀನವು ದೊರೆಯುದೊ ಹರಿಯೇ ೨

ಚಂದ್ರಶಾಲೆಲಿ ಚಂದ್ರಕಿರಣದಂತೊಪ್ಪುವ
ಚಂದದ ಮಂಚದೊಳ್ಮಲಗಿಸುವಿ
ಮಂದರೋದ್ಧರ ನಿನ್ನ ಮಮತೆ ತಪ್ಪಲು ಧರ್ಮ
ಮಂದಿರದೊಳು ತೋಳ್ತಲಗಿಂಬು ಹರಿಯೇ ೩

ನರಯಾನದೊಳು ಕ್ಷಣ ನರವರನೆನಿಸುವಿ
ವರಛತ್ರ ಚಾಮರ ಹಾಕಿಸುವಿ
ಕರುಣಾನಿಧೇ ನಿನ್ನ ಕರುಣ ತಪ್ಪಿದ ಮ್ಯಾಲೆ
ಚರಣರಕ್ಷೆಯು ದೊರೆಯುದು ಶ್ರೀಹರಿಯೇ ೪

ಗಂಗಾಜನಕ ಪಾಂಡುರಂಗ ನಿನ್ನಯ ಭಕ್ತರ
ಸಂಗವಿರಲಿ ದುಷ್ಟ ಸಂಗ ಬ್ಯಾಡ
ಅಂಗನೆಯರ ಕೂಡಿ ಅನಂಗಬಾಣಕೆ ಸಿಲುಕಿ
ಭಂಗವ ಪಡಲಾರೆ ಶ್ರೀರಂಗವಿರಲ ಹರಿಯೇ ೫

೫

ರಾಗ : ಕೇತಾರಗೌಳ ತಾಳ : ಆದಿತಾಳ

ಇದನಾದರು ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವದೆಂತೊ ಪ.

ಗ್ರಾಸವಾಸಗಳಿಗೆ ಇಲ್ಲವೆಂದು ನಿನ್ನ
ಬೇಸರಿಸಿ ಬೇಡ ಬಂದುದಿಲ್ಲ
ವಾಸುದೇವನೆ ನಿನ್ನ ದಾಸರ ದಾಸರ
ದಾಸರ ದಾಸ್ಯವ ಕೊಡು ಸಾಕೆಂದರೆ ೧

ಸತಿಸುತರುಗಳ ಸಹಿತನಾಗಿ ನಾ
ಹಿತದಿಂದ ಇರಬೇಕೆಂಬೊದಿಲ್ಲ
ಇತರ ವಿಷಯಂಗಳಿಗೆರಗಿಸದೆ ಮನಕೆ ನಿನ್ನ
ಕಥಾಮೃತವನೆ ಕೊಡು ಸಾಕೆಂದರೆ ೨

ಸಾಲವಾಯಿತೆಂದು ಸಂಬಳ ಎನಗೆ
ಸಾಲದೆಂದು ಬೇಡ ಬಂದುದಿಲ್ಲ
ನಾಲಗೆಯಲಿ ನಿನ್ನ ನಾಮದುಚ್ಚರಣೆಯ
ಪಾಲಿಸಬೇಕೆಂದು ಬೇಡಿದೆನಲ್ಲದೆ ೩

ಒಡವೆಗಳಿಲ್ಲ ಒಡ್ಯಾಣಗಳಿಲ್ಲೆಂದು
ಬಡವನೆಂದು ಬೇಡ ಬಂದುದಿಲ್ಲ
ಒಡೆಯ ನಿನ್ನಡಿಗಳಿಗೆರಗುವುದಕೆ ಮನ
ಬಿಡದಿಹದೊಂದನು ಕೊಡು ಸಾಕೆಂದರೆ ೪

ಆಗಬೇಕು ರಾಜ್ಯಭೋಗಗಳೆನಗೆಂದು
ಈಗ ನಾನು ಬೇಡ ಬಂದುದಿಲ್ಲ
ನಾಗಶಯನ ರಂಗವಿಠಲ ನಾ ನಿನ್ನ
ಬಾಗಿಲ ಕಾಯುವ ಭಾಗ್ಯ ಸಾಕೆಂದರೆ ೫

೬

ರಾಗ: ಪೂರ್ವಿ ತಾಳ: ಆದಿತಾಳ

ಇದಿರದಾವನು ನಿನಗೀ ಧರೆಯೊಳು
ಪದುಮನಾಭನ ದಾಸ ಪರಮೋಲ್ಲಾಸಾ ಪ

ವಾದಿತಿಮಿರಮಾರ್ತಾಂಡನೆಂದೆನಿಸಿದ
ವಾದಿಶರಭಭೇರುಂಡ ವ್ಯಾಸರಾಯಾ ೧

ಯತಿಗಳೊಳಗೆ ನಿಮ್ಮಂದದವರುಗಳ
ಪ್ರತಿಗಾಣೆನು ಈ ಕ್ಷಿತಿಯೊಳು ಯತಿರಾಯಾ ೨

ಹಮ್ಮಳಿದು ಶ್ರೀಪತಿ ರಂಗವಿಠಲನ್ನ
ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯಾ ೩

೭

ಸುಳಾದಿ

ರಾಗ: ಭೈರವಿ

ಧ್ರುವತಾಳ

ಈ ವನದೆಡೆಗಳು ಈ ಲತೆವನಗಳು
ಈ ನದಿಪುಳಿನಗಳೀ ಶಶಿಶಿಲೆಗಳು
ಈ ಸುರತರು ನೆಳಲು ಶುಕಪಿಕರವ
ಯಾಕೆ ಮಾಧವನ ಮರೆಯಲೀಯದಿವೆ ಕೆಳದಿ
ಆ ಮುಗುಳುನಗೆಯು ಆ ಸೊಬಗ
ಈ ಸುರತರು ನೆಳಲೀ ರತಿಯು
ಈ ಸುರತವನರಿದ ಬಾಲೆಯರೆಂತೊ
ಈ ಸುಗುಣಮಯ ರಂಗವಿಠಲನೆ ಕೆಳದಿ ೧

ಮಠ್ಯತಾಳ

ಇನ್ನು ರಂಗನಂಗಸಂಗವು ಎತ್ತಣದು ಗೋಪಿಯರಿಗೆ
ಮಧುರೆಯ ಮಾನಿನಿಯರ ಬಲೆಯಲ್ಲಿ ಸಿಲುಕಿದನ
ಮಧುರೆಯ ಮಾನಿನಿಯರು ರತಿವಿದಗ್ಧರಾ
ವಧುಗಳು ರಸಿಕ ನಮ್ಮ ರಂಗವಿರಲ ೨

ತ್ರಿಪುಟತಾಳ

ಇನ್ಯಾತಕೆ ರಂಗ ಇಲ್ಲಿಗೆ ಬಾಹಾ
ಮಧುರಾಪುರಿಯರಸನಾದ
ಮಲ್ಲರ ಕೊಂದು ಮಾವನ್ನ ಮಡುಹಿದ
ಮಧುರಾಪುರಿಯರಸನಾದ
ಆವನ ನೆನಹೆ ಸಾಕು ರಂಗವಿರಲನಾ ೩

ರೂಪಕತಾಳ

ಬಿಡುವರು ಅಧನರ ಗಣಿಕೆಯರು ನೆರೆ
ಬಿಡುವವು ವಿಫಲ ತರುವ ದ್ವಿಜಗಣ
ಬಿಡುವವು ಮೃಗ ದಳ್ಳುರಿಗೊಂಡಡವಿಯ
ಬಿಡುವನು ಜಾರ ಪರವಧುವನು ನೆರೆದಿನ್ನು
ಇವು ದಿಟವಾಯಿತು ನಮ್ಮ ವಲ್ಲಭನೊಳು
ಅಕಟಕಟಾ ರಂಗವಿರಲನು ಕರುಣಿಯೆ ೪

ಅಟ್ಟತಾಳ

ಕುಂದಕುಸುಮ ಶಶಾಂಕ ರಂಜಿತ
ವೃಂದಾವನದಲ್ಲಿ ಮಂದಮಾರುತ ಬರಲು ನಲಿದನು ಅರ
ವಿಂದನಯನನು ಹಾ ಹಾ
ಕಂದಿದೆವು ಕುಂದಿದೆವು ನಾವು
ಕಂದರ್ಪನ ಶರದಟ್ಟುಳಿಗೆ ಹಾ
ಇಂದುಮುಖಿಯರ ವೃಂದದೊಳಗೆ ಕೃಷ್ಣ
ಅಂದು ನಮ್ಮೊಡನಾಡಿದ ಪರಿಯನು ತಾನು
ಇಂದೊಮ್ಮೆಯಾದರೂ ನೆನೆವನೆ ಹಾ ಹಾ
ಎಂದಿಗಾದರು ರಂಗವಿರಲನಿಲ್ಲಿಗೆ ಬಹನೆ ೫

ಝಂಪೆತಾಳ

ಪೊಂದೇರದೆಲ್ಲಿಯಂದವ್ವಾ ಬಂದಿದೆ ವ್ರಜದೊಳಗೆ
ಅಂದಿನಕ್ರೂರನೆಂಬ ಕ್ರೂರನು ಮರಳಿ ಬಂದನೊ
ನಮ್ಮ ಕರೆದೊಯ್ಯಲಿಬೇಕೆಂದು
ಅಂದೆಮ್ಮ ಕೊಂದ
ಇಂದ್ಯಾರ ಕೊಲ್ಲಲಿ ಬಂದ
ಕೊಂದುಕೊಳ್ಳಲಿ ತಮ್ಮ ಹಿರಿಯರನು ಹರಲಿಗ
ಅಂದೆಮ್ಮನಗಲಿಸಿದ ರಂಗವಿಠಲನಾ ೬

ಏಕತಾಳ

ಹೆತ್ತ ತಾಯಿ ತಂದೆಯರ ನೋಡಲೆಂದು
ಇತ್ತಲಟ್ಟಿದನೆ ಉದ್ಧವ ನಿನ್ನ ಗೋವಳಾ
ಮತ್ತ್ಯಾರುಂಟು ವ್ರಜದಲ್ಲಿ ನೆನೆವರು
ಹತ್ತಿರಕೆ ತನ್ನವರಲ್ಲಿ ತಾ ಬಿಡುವನೆ
ಅರ್ಥಕೃತ ಸ್ನೇಹ ನಮ್ಮೊಡನೆ ಮಾಡಿದ ಕೃಷ್ಣ
ಮತ್ತಳಿಗೆ ಕುಸುಮದ ನೇಹದಂತೆ
ರಕ್ತಿ ಎಮ್ಮೊಳುಂಟು ರಂಗವಿಠಲಗೆ ೭

ಝಂಪೆತಾಳ

ಪರಮ ಸುಖದಾಸೆ ಈತನ ಸೇವೆ ಅಲ್ಲವೆ
ಒರೆದಳೆ ಪಿಂಗಳೆ ಜನರಿಗೆ ಹಿತವನು
ಅರಿದರಿದು ಬಿಡುವ ನಾವು ನರಪಶುಗಳಲ್ಲವೆ
ಸಿರಿರಮಣಿ ಬಿಡಳು ನಮ್ಮ ರಂಗವಿಠಲನ್ನ ೮

ಏಕತಾಳ

ಎಮ್ಮ ತನುಮನ ತನ್ನಧೀನವಲ್ಲೆ
ಅನ್ಯವರಿಯೆವು ತನ್ನರಿದಂತೆ ಮಾಡಲಿ
ಎಮ್ಮಸುವು ತನ್ನಧೀನವಲ್ಲೆ
ಅನ್ಯವರಿಯೆವು ತನ್ನರಿದಂತೆ ಮಾಡಲಿ
ನಮ್ಮ ರಂಗವಿಠಲರೇಯಗೆ
ಇನ್ನು ಸಲೆ ಮಾರುಹೋದೆವೆ ಕೆಳದಿ ೯

ಜತೆ

ಅವನ ಹಂಬಲವೆಮಗೆ ಜೀವನವವ್ವಾ
ಭವನಮೋಹನ ರಂಗವಿಠಲನು ಕರುಣೆಯೆ

## ೮

ರಾಗ. ಕಾಂಬೋಧಿ ತಾಳ: ಝಂಪೆ

ಉತ್ತಮರ ಸಂಗಯೆನಗಿತ್ತು ಸಲಹೊ ಪ.

ಚಿತ್ತಜಜನಕ ಸರ್ವೋತ್ತಮ ಮುಕುಂದ ಅ. ಪ.

ತಿರುತಿರುಗಿ ಪುಟ್ಟಲಾರೆ ಪರರ ಬಾಧಿಸಲಾರೆ
ಪರಿಪರಿಯ ಪಾಪಗಳ ಮಾಡಲಾರೆ
ಮರಣ ಜನನಗಳೆರಡು ಪರಿಹರವ ಮಾಡಯ್ಯ
ಕರುಣಾಸಮುದ್ರ ಮುರವೈರಿ ಶ್ರೀಕೃಷ್ಣ ೧

ಏನ ಪೇಳಲಿ ದೇವ ನಾ ಮಾಡಿದ ಕರ್ಮ
ನಾನಾ ವಿಚಿತ್ರವೈ ಶ್ರೀನಿವಾಸ
ಹೀನಜನರೊಳಗಾಟ ಶ್ವಾನಾದಿಗಳ ಕೂಟ
ಜ್ಞಾನವಂತನ ಮಾಡೊ ಜಾನಕೀರಮಣ ೨

ನಿನ್ನ ನಂಬಿದ ಮೇಲೆ ಇನ್ನು ಭಯವ್ಯಾತಕೆ
ಪನ್ನಗಾಧಿಪಶಯನ ಮನ್ನಿಸಯ್ಯ
ಮುನ್ನ ಭಕುತರನೆಲ್ಲ ಚೆನ್ನಾಗಿ ಪಾಲಿಸಿದ
ಎನ್ನೊಡೆಯ ರಂಗವಿಠಲ ಎನ್ನ ದೊರೆಯೇ ೩

## ೯

ರಾಗ. ಶಂಕರಾಭರಣ ತಾಳ: ತ್ರಿಪುಟತಾಳ

ಎಲ್ಲ್ಯಾಡಿ ಬಂದ್ಯೋ ಎನ್ನ ರಂಗಯ್ಯಾ ನೀ
ಎಲ್ಲ್ಯಾಡಿ ಬಂದ್ಯೋ ಎನ್ನ ಕಣ್ಣಮುಂದಾಡದೆ ಪ.

ಆಲಯದೊಳಗೆ ನೀನಾಡದೆ ಚಿನಿ
ಪಾಲು ಸಕ್ಕರೆ ನೀನೊಲ್ಲದೆ ಚಿಕ್ಕ
ಬಾಲೆಯರೊಡನೆ ಕೂಡ್ಯಾಡದೆ ಮುದ್ದು
ಬಾಲಯ್ಯ ನೀ ಎನ್ನ ಕಣ್ಣಮುಂದಾಡದೆ ೧

ಬಟ್ಟ ಮುತ್ತಿನ ಬೊಗಸೆ ಕಂಗಳು ಪಣೆಯೊ
ಳಿಟ್ಟ ಕಸ್ತೂರಿತಿಲಕದಂದವು ಅಲ್ಲಿ
ದಿಟ್ಟತನದಿ ಕೂಡ್ಯಾಡಲು
ಪುಟ್ಟ ಕೃಷ್ಣಯ್ಯ ನೀ ಎನ್ನ ಕಣ್ಣಮುಂದಾಡದೆ ೨

ಅಷ್ಟ ದಿಕ್ಕಿಲಿ ಆರಸಿ ಕಾಣದೆ ಬಹಳ
ದೃಷ್ಟಿಗೆಟ್ಟೆನು ನಿನ್ನ ನೋಡದೆ ಇ
ನ್ನೆಷ್ಟು ಹೇಳಲಿ ಕೇಳಬಾರದೆ ರಂಗ
ವಿಠಲ ನೀ ಎನ್ನ ಕಣ್ಣಮುಂದಾಡದೆ ೩

## ೧೦

ರಾಗ : ರೇವಗುಪ್ತಿ ತಾಳ : ಛಾಪು

ಎಲ್ಲ್ಯಾಡಿ ಬಂದ್ಯೋ ನೀ ಹೇಳಯ್ಯಾ
ನಿಲ್ಲು ನಿಲ್ಲು ಗೋಪಾಲಕೃಷ್ಣಯ್ಯಾ ಪ.

ನೊಸಲಲ್ಲಿ ಕಿರುಬೆವರಿಟ್ಟಿದೆ ಅಲ್ಲಿ
ಹೊಸಪರಿ ಸುದ್ದಿಯು ಹುಟ್ಟಿದೆ
ಪುಸಿಯಲ್ಲ ಈ ಮಾತು ಮುಟ್ಟಿದೆ ನಿನ್ನ
ನಸುನಗೆ ಕೀರ್ತಿ ಹೆಚ್ಚಿದೆ ೧

ಬೆರಳ ಉಂಗುರವೆಲ್ಲಿ ಹೋಗಿದೆ ನಿನ್ನ
ಕೊರಳ ಪದಕವೆಲ್ಲಿ ನೀಗಿದೆ
ಸರಕೆಲ್ಲ ಅವಳಲ್ಲಿ ಸಾಗಿದೆ ಆ
ತರುಣಿ ಮಹಿಮೆ ಹೀಂಗಾಗಿದೆ ೨

ಕಳ್ಳತನವ ಹೀಗೆ ಮಾಡಿದೆ ನಿನ್ನ
ಸುಳ್ಳು ಕಡೆಗೆ ನಾ ನೋಡಿದೆ
ಎಲ್ಲರಿಗೂ ರಕ್ಕು ಮಾಡಿದೆ
ಚೆಲುವ ರಂಗವಿಠಲ ನಗೆಗೀಡಾದೆ ೩

## ೧೧

ರಾಗ. ಆಹರಿ ತಾಳ: ಅಟ್ಟತಾಳ

ಒಲ್ಲೆನವ್ವಾ ಲಕುಮಿಯು ನಲ್ಲ ಬಾರದಿದ್ದರೆ
ತನುಹೊರೆಯನೊಲ್ಲೆನವ್ವಾ ಪ.

ಹಾರ ಕೊರಳಿಗೆ ಭಾರ ಹುವ್ವಿನ
ಭಾರ ಸೈರಿಸಲಾರೆನೆ
ಮಾರನಯ್ಯನು ಬಾರದಿದ್ದರೆ
ಮಾರನಂಬಿಗೆ ಗುರಿಯು ಮಾಡಿ ೧

ಎಲ್ಲ ದೇವರ ವಲ್ಲಭನೆಂದು
ಒಲಿದೆ ಮನ ನಿಲ್ಲದೆ
ನಿಲ್ಲದೆ ರಂಗ ಪೋದ ಮಧುರೆಗೆ
ಬಿಲ್ಲ ಹಬ್ಬದ ನೆವನ ಮಾಡಿ ೨

ಮಂದಾನಿಲನ ಸಹಿಸಲಾಗದು
ನೊಂದೆ ಶುಕಪಿಕರವಗಳಿಂದ
ಚಂದ್ರಕಿರಣದಿ ಬೆಂದೆ ಇನ್ನೀ
ವೃಂದಾವನವೇಕವನನಗಲಿ ೩

ಮುನ್ನ ಆಡಿದ ಮಾತ ಮರೆತು
ಎನ್ನ ವನದೊಳಗೀಡಾಡಿ
ಪನ್ನಜಾಕ್ಷನು ಬಾರ ಪುರದ
ವನ್ನಿತೆಯರನು ಮೆಚ್ಚಿ ಪೋದ ೪

ಪೊಂಗೊಳಲ ಧ್ವನಿಗೆ ಸಿಲುಕಿ
ಭಂಗಬಟ್ಟೆನಂಗಜನಿಂದಲಿ
ಪೆಂಗಳಿಗುಚಿತವಲ್ಲ
ರಂಗವಿಠಲನ ತೋರದಿದ್ದಡೆ ೫

## ೧೨

ರಾಗ : ತೋಡಿ ತಾಳ : ರೂಪಕ

ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ ಪ.

ಜಗಂಗಳೊಳಗೆ ಮಂಗಳಮೂರುತಿ
ರಂಗನ ಶ್ರೀಪಾದಂಗಳ ನೋಡದ ಅ.ಪ.

ಎಂದಿಗಾದರೊಮ್ಮೆ ಜನರು
ಬಂದು ಭೂಮಿಯಲ್ಲಿ ನಿಂದು
ಚಂದ್ರ ಪುಷ್ಕರಿಣಿ ಸ್ನಾನವ ಮಾಡಿ ಆ
ನಂದದಿಂದಲಿ ರಂಗನ ನೋಡದ ೧

ಹರಿ ಪಾದೋದಕ ಸಮ ಕಾವೇರಿ
ವಿರಜಾನದಿ ಸ್ನಾನವ ಮಾಡಿ
ಪರಮ ವೈಕುಂಠ ರಂಗಮಂದಿರ
ಪರವಾಸುದೇವನ ನೋಡದ ೨

ಹಾರ ಹೀರ ವೈಜಯಂತಿ
ತೋರ ಮುತ್ತಿನ ಸರವ ಧರಿಸಿ
ತೇರನೇರಿ ಬೀದಿಲಿ
ಮೆರೆವ ರಂಗವಿಠಲನ ನೋಡದ ೩

## ೧೩

ರಾಗ : ಶ್ರೀ ತಾಳ : ಅಟ್ಟತಾಳ

ಕಂಜನೇತ್ರೆ ಶುಭ ಮಂಜುಳಗಾತ್ರೆ
ಕುಂಜರದಂತೆ ಗಮನೆ ರಂಜಿತಾಂಗಿ ನಿರಂಜನಾಂಗಿ ಪ.

ಧರೆಯು ಮ್ಯಾಲೆ ಹಿರಿಯಳು ನಾ-
ನಿರಲು ಲಜ್ಜೆ ತೊರೆದು ನೀನು
ಸರಸವಾಡೋರೆ ಮುರಹರನ
ಕರೆದು ಭಾಮಿನಿ ಸುಗುಣೆ ಕಾಮಿನಿ ೧

ಪತಿಯು ಪ್ರೀತಿ ಎನ್ನ ಮ್ಯಾಲೆ
ಅತಿಶಯದಿ ಇರಲು ಜ್ಯೇಷ್ಠ
ಸತಿಯಳೇನೇ ನೀನು ನೋಡು
ಮತಿಯು ರುಗ್ಮಿಣಿ ಸುಪದ್ಮಗಂಧಿನಿ ೨

ಒಂದು ಕಾಲದಲ್ಲಿ ದಾಸಿ-
ಯಿಂದ ಪತಿಯು ಸರಸವಾಡಲು
ಬಂದಳೇನೇ ಅರಸಿ ಸಮು-
ಳೆಂದು ಭಾಮಿನಿ ಸುಗುಣೆ ಕಾಮಿನಿ ೩

ದಾಸಿ ಸಮಳು ನಾನು ಅಲ್ಲ
ದೋಷ ಮಾತನಾಡಬೇಡ
ಶ್ರೀಶನ ದಯರಾಶಿ ಇರಲು
ದಾಸಿಯೆ ರುಗ್ಮಿಣಿ ಸುಪದ್ಮಗಂಧಿನಿ ೪

ಸಾರೆ ಕೃತ್ಯವಾರೆ ಮಾಡಿ
ದ್ವಾರಾವತಿಯಿಂದ ಎನ್ನ
ಸಾರೆ ಬಂದ ಪ್ರೀತಿಯು [ಅ-
ಪಾರೆ] ಭಾಮಿನಿ ಸುಗುಣೆ ಕಾಮಿನಿ ೫

ಕಡಲಶಾಯಿ ತಡೆದರಿನ್ನು
ಬಿಡುಗು ದೇಹ ಬಿಡುವೆನೆಂಬೊ
ನುಡಿಯು ಕೇಳಿ ಪಿಡಿದನೆ
ಬಿಡದೆ ರುಗ್ಮಿಣಿ ಸುಪದ್ಮಗಂಧಿನಿ ೬

ಮಂದರಧರನು ಪ್ರೀತಿ
ಯಿಂದ ನಿನ್ನ ಪಡೆದನೇನೆ
ಒಂದು ಮಣಿಯು ಕಾರಣದಿ
ಬಂದೆ ಭಾಮಿನಿ ಸುಗುಣೆ ಕಾಮಿನಿ ೭

ಸುಮ್ಮನೆ ಬಂದವಳಿಗೆ
ಬ್ರಹ್ಮ ಲಗ್ನದಿ ಬಂದೆನಗೆ
ಸಾಮ್ಯವೇನೆ ಯಾಕೆ ನಿನಗೆ
ಹೆಮ್ಮೆ ರುಗ್ಮಿಣಿ ಸುಪದ್ಮಗಂಧಿನಿ ೮

ಮಾನಾದಿ ಭಕ್ತಿಯು ಕನ್ಯಾ
ದಾನವು ಲೋಕದೊಳಗುಂಟು
ಏನು ನಿನ್ನ ತಾತ ಕೊಟ್ಟ
ದೀನ ಭಾಮಿನಿ ಸುಗುಣೆ ಕಾಮಿನಿ ೯

ಎನ್ನ ಹಂಗದೆಂದು ಪ್ರ-
ಸನ್ನ ಕೇಳಿ ಶತಧನ್ವನ
ಬೆನ್ನಟ್ಟಿ ಕೊಂದನೆ ನೀ-
ಚನ್ನ ರುಗ್ಮಿಣಿ ಸುಪದ್ಮಗಂಧಿನಿ ೧೦

ವೀರ ಅರಸರ ಸ್ವಭಾವ
ಚೋರರ ಕೊಲ್ಲಬೇಕೆಂಬೋ
ಸಾರ ಪ್ರೀತಿಯುದರಿಂದ
ತೋರೆ ಭಾಮಿನಿ ಸುಗುಣೆ ಕಾಮಿನಿ ೧೧

ಇಂದ್ರಾದಿ ದೇವತೆಗಳೊಳು
ಸಾಂದ್ರಯುದ್ಧವನ್ನೆ ಮಾಡಿ
ವೀಂದ್ರ [ಗ] ಎನಗೆ ಪಾರಿಜಾತ
ತಂದ ರುಗ್ಮಿಣಿ ಸುಪದ್ಮಗಂಧಿನಿ ೧೨

ವರದ ರಂಗ ಕರದೊಳೆನ್ನ
ಸುರಪುಷ್ಪವಿರಲು ನಿನ್ನ
[ತ್ವರೆ] ಕ್ಲೇಶ ನೋಡಿ ತಂದ
ತರುವ ಭಾಮಿನಿ ಸುಗುಣೆ ಕಾಮಿನಿ ೧೩

ನಿಜಳೆಂದು ರಂಗನು ಎನ್ನ
ವಿಜಯಯಾತ್ರೆಯಲ್ಲಿ ತನ್ನ
ಭುಜಗಳಿಂದಾಲಿಂಗಿಸಿದ
ಸುಜನೆ ರುಗ್ಮಿಣಿ ಸುಪದ್ಮಗಂಧಿನಿ ೧೪

ಅರಸರ ಸ್ವಭಾವ ತಮ್ಮ
ಅರಸೇರ ಮನೆಯೊಳಗಿಟ್ಟು
ಸರಸ ದಾಸೇರಿಂದ್ಹೋಗೋದು
ಸ್ಮರಿಸೆ ಭಾಮಿನಿ ಸುಗುಣೆ ಕಾಮಿನಿ ೧೫

ಸಾರವಚನ ಕೇಳಿ ಭಾಮೆ
ಮೋರೆ ಕೆಳಗೆ ಮಾಡುತಿರಲು
ನಾರಿ ರುಗ್ಮಿಣಿ ಭಾಮೆಯರನ್ನು
ವೀರ ಕರೆದನು ತಾ ಸೇರಿ ಮೆರೆದನು ೧೬

ಮಂಗಳಾಂಗ ಮಹಿಮ ಕೇಶವಾ-
ಲಿಂಗಿಸಿದ ಭೈಷ್ಮಿಯನ್ನು
ತುಂಗ ಗುಣ ಗೋಪೀರಮಣ
ರಂಗವಿಠಲನು ಅನಂಗಜನಕನು ೧೭

## ೧೪

ಉಗಾಭೋಗ

ಕರುಣದಿ ತನುಮನಧನಂಗಳೆಲ್ಲವು
ನಿನ್ನ ಚರಣಕಮಲಕೊಪ್ಪಿಸಿದ ಬಳಿಕ
ಮರಳಿ ಎನ್ನ ಮರುಳುಮಾಡುವರೆ
ಸರಕು ಒಪ್ಪಿಸಿದ ಮ್ಯಾಲೆ ಸುಂಕವುಂಟೆ ದೇವಾ
ಕರುಣಾಕರ ನಿನ್ನ ಚರಣದಡಿಯೊಳಿಟ್ಟು ಕಾಯೊ ರಂಗವಿಠಲ

## ೧೫

ರಾಗ. ನಾದನಾಮಕ್ರಿಯೆ ತಾಳ : ಛಾಪು

ಕಾಳಬೆಳದಿಂಗಳು ಈ ಸಂಸಾರ ಕತ್ತಲೆ ಬೆಳದಿಂಗಳು ಪ.

ಸತ್ಯಕ್ಕೆ ಧರ್ಮನು ಲೆತ್ತವನಾಡಲು
ಅರ್ಥ ಭಾಂಡಾರವೆಲ್ಲವ ಸೋತು
ಮತ್ತೆ ವಿರಾಟರಾಯನ ಮನೆಯಲ್ಲಿ
ತೊತ್ತಾದಳು ದ್ರೌಪದಿ ಒಂದು ವರುಷ ೧

ಪುಂಡರೀಕಾಕ್ಷ ಪುರುಷೋತ್ತಮ ಹರಿಯು
ಬಂಡಿಬೋವನಾದ ಪಾರ್ಥನಿಗೆ ಭೂ
ಮಂಡಲನಾಳುವ ಹರಿಶ್ಚಂದ್ರರಾಯನು
ಕೊಂಡವ ಕಾಯಿದನು ಹೊಲೆಯನಾಳಾಗಿ ೨

ಉಂಟಾದ ಕಾಲಕ್ಕೆ ನೆಂಟರು ಇಷ್ಟರು
ಬಂಟರಾಗಿ ಬಾಗಿಲ ಕಾಯ್ವರು
ಉಂಟಾದತನ ತಪ್ಪಿ ಬಡತನ ಬಂದರೆ
ಒಂಟೆಯಂತೆ ಗೋಣ ಮೇಲೆತ್ತುವರು ೩

ಉಂಬಾಗ ಉಡುವಾಗ ಕೊಂಬಾಗ ಕೊಡುವಾಗ
ಬೆಂಬಲದಲಿ ನಲಿನಲಿವುತಿಹರು
ಬೆಂಬಲತನ ತಪ್ಪಿ ಬಡತನ ಬಂದರೆ
ಇಂಬು ನಿನಗಿಲ್ಲ ನಡೆಯೆಂಬರು ೪

ಏರುವ ದಂಡಿಗೆ ನೂರಾಳು ಮಂದಿಯು
ಮೂರುದಿನದ ಭಾಗ್ಯ ಝಣಝಣವು
ನೂರಾರು ಸಾವಿರ ದಂಡವ ತೆತ್ತರೆ
ರಂಗವಿಠಲನನೆ ಸರಿಯೆಂಬೊರಯ್ಯ ೫

## ೧೬

ರಾಗ : ಶಂಕರಾಭರಣ ತಾಳ : ಆದಿತಾಳ

ಕೇಳಿದ್ಯಾ ಕೌತಕವನ್ನು ಕೇಳಿದ್ಯಾ ಪ.

ಕೇಳಿದ್ಯಾ ಕೌತುಕವನ್ನು ನಾ
ಕೇಳಿದೆ ನಿನಗಿಂತ ಮುನ್ನು ಆಹಾ
ಚಾಳಿಕಾರ ಕೃಷ್ಣ ಪೇಳದೆ ಮಧುರೆಗೆ
ಕೋಳಿ ಕೂಗದ ಮುನ್ನ ನಾಳೆ ಪಯಣವಂತೆ ಅ.ಪ.

ಕರೆಯು ಬಂದಿಹನಂತೆ ಕ್ರೂರ ತಮ್ಮ
ಕಿರಿಯಯ್ಯನಂತೆ ಅಕ್ರೂರ ಪುರ

ಹೊರವಳಯದಿ ಬಿಟ್ಟು ತೇರ ಆಹಾ
ಹಿರಿಯನೆಂದು ಕಾಲಿಗೆರಗಲು ರಾಮಕೃ-
ಷ್ಣರ ರಕ್ಕಿಸಿಕೊಂಡು
ಮರುಳುಮಾಡಿದ ಬುದ್ಧಿ ೧

ಸೋದರಮಾವನ ಮನೆಯು ಬೆಳ-
ಗಾದರೆ ನಾಳಿನ ಉದಯ ಪರ–
ಮಾದರವಂತೆ ತ್ವರೆಯು ಅಲ್ಲಿ ತೋ-
ರಿದ ಮನಕೆ ನಾರಿಯ ಆಹಾ
ಸಾಧಿಮಲ್ಲ ಮೊದಲಾದ ಬಿಲ್ಲುಹಬ್ಬ
ಸಾಧಿಸಿಕೊಂಡು ಬರುವೆನೆಂಬ ಸುದ್ದಿ ೨

ಹುಟ್ಟಿದ ಸ್ಥಳವಂತೆ ಮಧು[ರೆ] ಕಂಸ-
ನಟ್ಟುಳಿಗಾರದೆ ಬೆದರಿ ತಂ–
ದಿಟ್ಟ ತನ್ನ ತಂದೆ ಚದು[ರೆ] ತೋರಿ
ಕೊಟ್ಟಳು ಭಯವನ್ನು ಬೆದರಿ ಆಹಾ
ಎಷ್ಟು ಹೇಳಲಿ ರಂಗವಿಠಲನು ಮಾವನ
ಭೆಟ್ಟಿಗಾಗಿ ಒಡಂಬಟ್ಟು ಪೋಗುವ ಸುದ್ದಿ ೩

## ೧೭

ರಾಗ : ಮಾಯಾಮಾಳವಗೌಳ ತಾಳ : ಅಟ್ಟತಾಳ

ಕೊಂಬು ಕೊಳಲನೂದುತ್ತ ನಂಬಿಸಿ ಪೋದನೆಯಮ್ಮಾ
ಅಂಬುಜನಾಭಗೆ ಮನ ಹಂಬಲಿಸುತ್ತಿದೆಯಮ್ಮಾ ಪ.

ನಡೆಯಲಾರೆನೆಯಮ್ಮಾ ಅಡಿಯಿಡಲೊಶವಿಲ್ಲ
ಬೆಡಗುಗಾರನ ಕೂಡೆ ನುಡಿ ತೆರಳಿತ್ತೆಯಮ್ಮಾ ೧

ಮಾತು ಮನಸು ಬಾರದಮ್ಮಾ ಸೋತೆವಮ್ಮಾ ಕೃಷ್ಣಗಾದಿ
ಆತನ ಕಾಣದೆ ಮನ ಕಾತರಿಸುತಿದೆಯಮ್ಮಾ ೨

ಅನ್ನೋದಕ ಒಲ್ಲೆವಮ್ಮಾ ಕಣ್ಣಿಗೆ ನಿದ್ರೆ ಬಾರದು
ಮನ್ನಣೆಗಾರನ ಕೂಡೆ ಹೆಣ್ಣು ಜನ್ಮ ಸಾಕೆಯಮ್ಮಾ ೩

ಮನೆಮನೆ ವಾರುತೆಗೆ ಮನವೆಳಸದೆಯವ್ವಾ
ಮನಸಿಜಪಿತನೊಡನೆ ಮನ ತೆರಳಿತೆಯಃವ್ವಾ ೪

ಗೋಪ[ಮ್ಮ]ನ ವಾರುತೆಗೆ ತಾಪ ಹಿರಿಯದಾಯಿತವ್ವಾ
ಗೋಪ ಜನರ ಕೂಡಿದ ಶ್ರೀಪತಿ ರಂಗವಿಠಲಾ ೫

## ೧೮

ರಾಗ : ಮೋಹನ ತಾಳ : ಛಾಪುತಾಳ

ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ ಇಲ್ಲದ ಸುದ್ದಿ ಪುಟ್ಟಿಸಿ
ಕಳ್ಳನೆಂದು ದೂರುತಾರೆ ಗೋಪಿ ಎನ್ನ ಕೊಲ್ಲಬೇಕೆಂಬ ಬಗೆಯ ಪ.

ಹರವಿಯ ಹಾಲು ಕುಡಿಯಲು ಎನ್ನ ಹೊಟ್ಟೆ
ಕೆರೆಯೇನೆ ಹೇಳಮ್ಮಯ್ಯ
ಕರೆದು ಅಣ್ಣನ ಕೇಳಮ್ಮ ಉಂಟಾದರೆ
ಒರಳಿಗೆ ಕಟ್ಟಮ್ಮಯ್ಯ ೧

ಬಿಸಾಸಲು ಬೆಣ್ಣೆಯನು ಮೆಲುವುದದು ಎನಗೆ
ದೋಷವಲ್ಲವೇನಮ್ಮಯ್ಯ
ಆಸೆ ಮಾಡಿದರೆ ದೇವರು ಕಣ್ಣ
ಮೋಸದಿ ಕುಕ್ಕೋನಮ್ಮಯ್ಯ ೨

ಅಟ್ಟವನೇರಿ ಹಿಡಿವುದು ಅದು ಎನಗೆ
ಕಷ್ಟವಲ್ಲವೆ ಹೇಳಮ್ಮಯ್ಯ ನೀ
ಕೊಟ್ಟ ಹಾಲು ಕುಡಿಯಲಾರದೆ ನಾನು
ಬಟ್ಟಲೊಳಗಿಟ್ಟು ಪೋದೆನೆ ೩

ಪುಂಡುತನವ ಮಾಡಲು ನಾನು ದೊಡ್ಡ
ಗಂಡಸೇನೆ ಹೇಳಮ್ಮಯ್ಯ ಎನ್ನ
ಕಂಡವರು ದೂರುತಾರೆ ಗೋಪಮ್ಮ ನಾ ನಿನ್ನ
ಕಂದನಲ್ಲವೇನೆ ಅಮ್ಮಯ್ಯ ೪

ಉಂಗುರದ ಕರದಿಂದ ಗೋಪಮ್ಮ ತನ್ನ
ಶೃಂಗಾರದ ಮಗನೆತ್ತಿ
ರಂಗವಿಠಲನ ಪಾಡಿ ಉಡುಪಿನ ಉ
ತ್ತುಂಗ ಕೃಷ್ಣನ ತೂಗಿದಳು ೫

## ೧೯

ರಾಗ : ಕಾಂಬೋಧಿ ತಾಳ . ಆದಿತಾಳ

ಚಿತ್ತಜನಯ್ಯನ ಚಿಂತಿಸು ಮನವೇ
ಹೊತ್ತು ಕಳೆಯದೆ ಸರ್ವೋತ್ತಮನ ನೆನೆ ಮನವೆ ಪ.

ಕಾಲನ ದೂತರು ನೂಲು ಹಗ್ಗವ ತಂದು
ಕಾಲು ಕೈಗಳ ಕಟ್ಟಿ ಮ್ಯಾಲೆ ಕುಟ್ಟಿ
ಕಾಲಪಾಶದೊಳಿಟ್ಟು ಶೂಲದಿಂದಿರಿವಾಗ
ಪಾಲಿಸುವರುಂಟೆ ಜಾಲವ ಮಾಡದೆ ೧

ದಂಡಧರನ ಭಟರು ಚಂಡಕೋಪದಿ ಬಂದು
ಕೆಂಡದ ನದಿಯು ತಡೆಗೆ ಕೊಂಡೊಯ್ದು
ಖಂಡಖಂಡವ ಕಿತ್ತು ಕೆಂಡದೊಳಿಡುವಾಗ
ಹೆಂಡಿರು ಮಕ್ಕಳು ಬಂದು ಬಿಡಿಸಬಲ್ಲರೆ ಮರುಳೆ ೨

ಅಂಗಳಿಗೆ ದಬ್ಬಣಂಗಳ ಸೇರಿಸಿ ಎರಡು
ಕಂಗಳಿಗೆ ಸೀಸವ ಕಾಸಿ ಪೊಯ್ಯಲು
ತಂಗಿ ಅಕ್ಕ ಬಂದು ಭಂಗವ ಬಿಡಿಸುವರೆ
ಅಂಗವು ಸ್ಥಿರವಲ್ಲ ರಂಗವಿಠಲ ಬಲ್ಲ ೩

## ೨೦

ರಾಗ: ಸೌರಾಷ್ಟ್ರ (ಉದಯರಾಗ) ತಾಳ : ಆದಿತಾಳ

ಜಯ ಜಯ ಜಗತ್ಪ್ರಾಣ ಜಗದೊಳಗೆ ಸುತ್ರಾಣ
ಅಖಿಲಗುಣ ಸದ್ಧಾಮ ಮಧ್ವನಾಮ ಪ.

ಆವ ಕಚ್ಛಪ ರೂಪದಿಂದಲಂಡೋದಕವ
ಓವಿ ಧರಿಸಿದ ಶೇಷಮೂರುತಿಯನು
ಆವವನ ಬಳಿವಿಡಿದು ಹರಿಯ ಸುರರೆಯ್ದುವರು
ಆ ವಾಯು ನಮ್ಮ ಕುಲಗುರುರಾಯನು ೧

ಆವವನು ದೇಹದೊಳಗಿರಲು ಹರಿ ನೆಲಸಿಹನು
ಆವ[ವ]ನು ತೊಲಗೆ ಹರಿ ತಾ ತೊಲಗುವ
ಆವವನು ದೇಹದಾ ಒಳ ಹೊರಗೆ ನಿಯಾಮಕನು
ಆ ವಾಯು ನಮ್ಮ ಕುಲಗುರುರಾಯನು ೨

ಕರುಣಾಭಿಮಾನಿ ಸುರರು ದೇಹವ ಬಿಡಲು
ಕುರುಡ ಕಿವುಡ ಮೂಕನೆಂದೆನಿಸುವ
ಪರಮ ಮುಖ್ಯ ಪ್ರಾಣ ತೊಲಗಲಾ ದೇಹವನು
ಅರಿತು ಪೆಣನೆಂದು ಪೇಳುವರು ಬುಧಜನ ೩

ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ
ಪರತರನೆನಿಸಿ ನಿಯಾಮಿಸಿ ನೆಲಸಿಹ
ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು
ಗುರುಕುಲತಿಲಕ ಮುಖ್ಯ ಪವಮಾನನು ೪

ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು
ವಾತಸುತ ಹನುಮಂತನೆಂದೆನಿಸಿದ
ಪೋತ ಭಾವದಿ ತರಣಿ ಬಿಂಬಕ್ಕೆ ಲಂಘಿಸಿದ
ಈತಗೆಣೆಯಾರು ಮೂಲೋಕದೊಳಗೆ ೫

ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ
ಉರುಣಿಸಿ ಹಿಂದುಮುಂದಾಗಿ ನಡೆದ
ಪರಮ ಪವಮಾನ ಸುತ ಉದಯಾಸ್ತ ಶೈಲಗಳ
ಭರದಿಯ್ದಿದಗೀತಗುಪಮೆ ಉಂಟೇ ೬

ಅಖಿಳ ವೇದಗಳ ಸಾರ ಪಠಿಸಿದನು ಮುನ್ನಲ್ಲಿ
ನಿಖಿಳ ವ್ಯಾಕರಣಗಳ ಇವ ಪೇಳಿದ

ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು
ಮುಖ್ಯಪ್ರಾಣನನು ರಾಮನನುಕರಿಸಿದ ೭

ತರಣಿಸುತನನು ಕಾಯ್ದು ಶರಧಿಯನು ನೆರೆದಾಟಿ
ಧರಣಿಸುತೆಯಳ ಕಂಡು ದನುಜರೊಡನೆ
ಭರದಿ ರಣವನೆ ಮಾಡಿ ಗೆಲಿ[ದು] ದಿವ್ಯಾಸ್ತ್ರಗಳ
ಉರುಹಿ ಲಂಕೆಯ ಬಂದ ಹನುಮಂತನು ೮

ಹರಿಗೆ ಚೂಡಾಮಣಿಯನಿತ್ತು ಹರಿಗಳ ಕೂಡಿ
ಶರಧಿಯನು ಕಟ್ಟಿ ಬಲು ರಕ್ಕಸರನು
ಒರಸಿ ರಣದಲಿ ದಶಶಿರನ ಹುಡಿಗುಟ್ಟಿದ
ಮೆರೆದ ಹನುಮಂತ ಬಲವಂತ ಧೀರ ೯

ಉರಗಬಂಧಕೆ ಸಿಲುಕಿ ಕಪಿವರರು ಮೈಮರೆಯೆ
ತರಣಿಕುಲತಿಲಕನಾಜ್ಞೆಯ ತಾಳಿದ
ಗಿರಿಸಹಿತ ಸಂಜೀವನವ ಕಿತ್ತು ತಂದಿತ್ತ
ಹರಿವರಗೆ ಸರಿಯುಂಟೆ ಹನುಮಂತಗೆ ೧೦

ವಿಜಯ ರಘುಪತಿ ಮೆಚ್ಚಿ ಧರಣಿಸುತೆಯಳಿಗೀಯೆ
ಭಜಿಸಿ ಮೌಕ್ತಿಕದ ಹಾರವನು ಪಡೆದ
ಅಜಪದವಿಯನು ರಾಮ ಕೊಡುವೆನೆನೆ ಹನುಮಂತ
ನಿಜ ಭಕುತಿಯನೆ ಬೇಡಿ ವರವ ಪಡೆದ ೧೧

ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ
ಸೋಮಕುಲದಲಿ ಜನಿಸಿ ಪಾರ್ಥ[ನೊ]ಡನೆ
ಭೀಮ ವಿಕ್ರಮ ರಕ್ಕಸರ ಮುರಿದೊಟ್ಟಿದ
ಆ ಮಹಿಮ ನಮ್ಮ ಕುಲಗುರುರಾಯನು ೧೨

ಕರದಿಂದ ಶಿಶುಭಾವನಾದ ಭೀಮನ ಬಿಡಲು
ಗಿರಿವಡದು ಶತಶೃಂಗವೆಂದೆನಿಸಿತು
ಹರಿಗಳ ಹರಿಗಳಿಂ ಕರಿಗಳ ಕರಿಗಳಿಂ
ಅರೆವ ವೀರನಿಗೆ ಸುರ ನರರು ಸರಿಯೇ ೧೩

ಕುರುಪ ಗರಳವನಿಕ್ಕೆ ನೆರೆ ಉಂಡು ತೇಗಿ
ಹಸಿದುರಗಗಳ ಮ್ಯಾಲೆ ಬಿಡಲದನೊರಸಿದ
ಅರಗಿನರಮನೆಯಲ್ಲಿ ಉರಿಯನಿಕ್ಕಲು ವೀರ
ಧರಿಸಿ ಜಾಹ್ನವಿಗೊಯ್ದ ತನ್ನನುಜರ ೧೪

ಅಲ್ಲಿರ್ದ ಬಕ ಹಿಡಿಂಬಕರೆಂಬ ರಕ್ಕಸರ
ನಿಲ್ಲದೊರಸಿದ ಲೋಕಕಂಟಕರನು
ಬಲ್ಲಿದಸುರರ ಗೆಲಿದು ದ್ರೌಪದಿಯ ಕೈವಿಡಿದು
ಎಲ್ಲ ಸುಜನರಿಗೆ ಹರುಷವ ತೋರಿದ ೧೫

ರಾಜಕುಲ ವಜ್ರನೆನಿಸಿದ ಮಾಗಧನ ಸೀಳಿ
ರಾಜಸೂಯಯಾಗವನು ಮಾಡಿಸಿದನು
ಆಜಿಯೊಳು ಕೌರವರ ಬಲವ ಸವರುವೆನೆಂದು
ಮೂಜಗವರಿಯೆ ಕಂಕಣ ಕಟ್ಟಿದ ೧೬

ದಾನವರ ಸವರಬೇಕೆಂದು ಬ್ಯಾಗ
ಮಾನನಿಧಿ ದ್ರೌಪದಿಯ ಮನದಿಂಗಿತವನರಿತು
ಕಾನನವ ಪೊಕ್ಕು ಕಿಮ್ಮೀರಾದಿಗಳ ಮುರಿದು
ಮಾನಿನಿಗೆ ಸೌಗಂಧಿಕವನೆ ತಂದ ೧೭

ದುರುಳ ಕೀಚಕನು ತಾಂ ದ್ರೌಪದಿಯ ಚೆಲುವಿಕೆಗೆ
ಮರುಳಾಗಿ ಕರಕರಿಯ ಮಾಡಲವನಾ
ಗರಡಿ ಮನೆಯಲಿ [ಬರಸಿ] ಅವನನ್ವಯವ
ಕುರುಪನಟ್ಟಿದ ಮಲ್ಲಕುಲವ ಸದೆದ ೧೮

ಕೌರವರ ಬಲ ಸವರಿ ವೈರಿಗಳ ನೆಗ್ಗೊತ್ತಿ
ಓರಂತೆ ಕೌರವನ ಮುರಿದು ಮೆರೆದ
ವೈರಿ ದುಶ್ಯಾಸನ್ನ ರಣದಲ್ಲಿ ಎಡೆಗೆಡಹಿ
ವೀರ ನರಹರಿಯ ಲೀಲೆಯ ತೋರಿದ ೧೯

ಗುರುಸುತನು ಸಂಗರದಿ ನಾರಾಯಣಾಸ್ತ್ರವನು
ಉರವಣಿಸಿ ಬಿಡಲು ಶಸ್ತ್ರವ ಬಿಸುಟರಂ

ಹರಿಕೃಪೆಯು ಪಡೆದಿರ್ದ ಭೀಮ ಹುಂಕಾರದಿಂ
ಹರಿಯು ದಿವ್ಯಾಸ್ತ್ರವನು ನೆರೆ ಅಟ್ಟಿದ ೨೦

ಚಂಡ ವಿಕ್ರಮನು ಗದೆಗೊಂಡು ರಣದಿ ಭೂ
ಮಂಡಲದೊಳಿದಿರಾಂತ ಖಳರನೆಲ್ಲಾ
ಹಿಂಡಿ ಬಿಸುಟಿಹ ವೃಕೋದರರನ ಪ್ರತಾಪವನು
ಕಂಡು ನಿಲ್ಲುವರಾರು ತ್ರಿಭುವನದೊಳು ೨೧

ದಾನವರು ಕಲಿಯುಗದೊಳವತರಿಸಿ ವಿಬುಧರೊಳು
ವೇನನ ಮತವನರುಹಲದನರಿತು
ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ
ಮಾನನಿಧಿ ಮಧ್ವಾಖ್ಯನೆಂದೆನಿಸಿದ ೨೨

ಅರ್ಭಕತನದೊಳೈದಿ ಬದರಿಯಲಿ ಮಧ್ವಮುನಿ
ನಿರ್ಭಯದಿ ಸಕಳ ಶಾಸ್ತ್ರವ ಪಠಿಸಿದ
ಉರ್ವಿಯೊಳು ಮಾಯೆ ಬೀರಲು ತತ್ತ್ವಮಾರ್ಗವನಂ
ಓರ್ವ ಮಧ್ವಮುನಿ ತೋರ್ದ ಸುಜನರ್ಗೆ ೨೩

ಸರ್ವೇಶ ಹರಿ ವಿಶ್ವ ಎಲ್ಲ ತಾ ಪುಸಿಯೆಂಬ
ದುರ್ವಾದಿಗಳ ಮತವ ನೆರೆ ಖಂಡಿಸಿ
ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದಾ
ಶರ್ವಾದಿ ಗೀರ್ವಾಣ ಸಂತತಿಯಲಿ ೨೪

ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿ
ಪದಕೆರಗಿ ಅಖಿಳ ವೇದಾರ್ಥಗಳನು
ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ
ಯೈದಿದ ಮಧ್ವಮುನಿರಾಯಗಭಿವಂದಿಪೆ ೨೫

ಜಯಜಯತು ದುರ್ವಾದಿಮತತಿಮಿರ ಮಾರ್ತಾಂಡ
ಜಯಜಯತು ವಾದಿಗಜಪಂಚಾನನ
ಜಯಜಯತು ಚಾರ್ವಾಕಗರ್ವಪರ್ವತಕುಲಿಶ
ಜಯಜಯ ಜಗನ್ನಾಥ ಮಧ್ವನಾಥ ೨೬

ತುಂಗಕುಲ ಗುರುವರನ ಹೃತ್ಕಮಲದಲಿ ನಿಲಿಸಿ
ಭಂಗವಿಲ್ಲದೆ ಸುಖವ ಸುಜನಕೆಲ್ಲ
ಹಿಂಗದೆ ಕೊಡುವ ನಮ್ಮ ಮಧ್ವಾಂತರಾತ್ಮಕ
ರಂಗವಿಠಲನೆಂದು ನೆರೆ ಸಾರಿರೈ ೨೭

[ಫಲಶ್ರುತಿ]

ಸೋಮ ಸೂರ್ಯೋಪರಾಗದಿ ಗೋಸಹಸ್ರಗಳ
ಭೂಮಿದೇವರಿಗೆ ಸುರನದಿಯ ತಟದಿ
ಶ್ರೀಮುಕುಂದಾರ್ಪಣವೆನುತ ಕೊಟ್ಟ ಫಲವಕ್ಕು
ಈ ಮಧ್ವನಾಮ ಬರೆದೋದಿದರ್ಗೆ ೧

ಪುತ್ರರಿಲ್ಲದವರು ಸತ್ಪುತ್ರರೈದುವರು
ಸರ್ವತ್ರದಲಿ ದಿಗ್ವಿಜಯುವಹುದು ಸಕಲ
ಶತ್ರುಗಳು ಕೆಡುವರಪಮೃತ್ಯು ಬರಲಂಜುವುದು
ಸೂತ್ರನಾಮಕನ ಸಂಸ್ತುತಿ ಮಾತ್ರದಿ ೨

ಶ್ರೀಪಾದರಾಯ ಪೇಳಿದ ಮಧ್ವನಾಮ ಸಂ
ತಾಪಕಳೆದಖಿಳ ಸೌಖ್ಯವನೀವುದು
ಶ್ರೀಪತಿ ಜಗನ್ನಾಥ ವಿಠಲನ ತೋರಿ ಭವ
ಕೂಪಾರದಿಂದ ಕಡೆ ಹಾಯಿಸುವುದು ೩

## ೨೧

ರಾಗ: ಶಂಕರಾಭರಣ ತಾಳ: ಆದಿತಾಳ
(ಜೋಗುಳ ಹಾಡು)

ಜೋ ಜೋ ಜೋ ಜೋ ಜೋ ರಂಗಧಾಮ
ಜೋಜೋ ಜೋಜೋ ಜೋ ರಣಭೀಮ ಪ.

ಜೋ ಜೋ ಭಕ್ತರ ಕಷ್ಟ ನಿರ್ಧೂಮ
ಜೋ ಜೋ ದಶರಥ ರಾಮ ನಿಸ್ಸೀಮ ಅ. ಪ.

ಭೂಮಿಯು ಚಿನ್ನದ ತೊಟ್ಟಿಲ ಮಾಡಿ
ಸೋಮಸೂರ್ಯರೆಂಬ ಕಲಶವ ಹೂಡಿ
ನೇಮದಿ ವೇದಗಳ ಸರಪಣಿ ಮಾಡಿ
ಆ ಮಹಾಕಾಶಕ್ಕೆ ಕೊಂಡಿಗಳ ಹಾಕಿ ೧

ಸರಸಿಜೋದ್ಭವ ಸರಸ್ವತಿ ಭಾರತಿ
ಗರುಡ ಶೇಷ ರುದ್ರರಿವರ ಸತಿಯರು
ಸುರರು ಕಿನ್ನರರು ಕಿಂಪುರುಷ ನಾರದರು
ಪರಿಪರಿ ಗೀತದಿ ತುತಿಸಿ ಪಾಡಿದರು ೨

ವಸುದೇವ ಸುತನಾದ ಮುದ್ದು ಮುರಾರಿ
ಅಸುರೆ ಪೂತನಿಯ ಪ್ರಾಣಾಪಹಾರಿ
ಅಸಮ ಸಾಹಸಮಲ್ಲ ದೈತ್ಯರ ವೈರಿ
ಶಿಶುವಾಗಿ ದೇವಕಿಗಾನಂದ ತೋರಿ ೩

ಜಗವನು ಹೊಟ್ಟೆಯೊಳಿಂಬಿಟ್ಟೆ ತ್ರುವ್ವಿ
ಜಗವೆಲ್ಲ ನಿರ್ಮಾಣ ಮಾಡಿದೆ ತ್ರುವ್ವಿ
ನಿಗಮಗೋಚರ ನಿತ್ಯಾನಂದನೆ ತ್ರುವ್ವಿ
ಮಗುವೆಂದು ನಾವ್ ತೂಗಬಲ್ಲೆವೆ ತ್ರುವ್ವಿ ೪

ತಮನ ಮರ್ದಿಸಿ ವೇದತತಿಗಳನು ತಂದೆ
ಸುಮನಸರಿಗಾಗಿ ಮಂದರ ಪೊತ್ತು ನಿಂದೆ
ಕ್ಷಮೆಗಾಗಿ ಪೋಗಿ ಹಿರಣ್ಯಕನ ಕೊಂದೆ
ನಮಿಸಿ ಕರೆದರೆ ಕಂಬದಿಂದ್ಹೊರಟು ಬಂದೆ ೫

ತರಳನಾಗಿ ಬಲಿಯ ದಾನವ ಬೇಡ್ದೆ
ಪರಶು ಧರಿಸಿ ಕ್ಷತ್ರಿಯರ ಸವರಿದೆ
ದುರುಳ ರಾವಣನ ಶಿರವ ಚೆಂಡಾಡಿದೆ
ಚರಿಸಿ ಮನೆಗಳ ಪಾಲು ಮೊಸರನ್ನು ಕುಡಿದೆ ೬

ಬುದ್ಧನಾಗಿ ಪತಿವ್ರತೆರನಾಳಿದೆಯಲ್ಲ
ಮುದ್ದು ತುರಗವನೇರಿ ಕಲ್ಕ್ಯನಾದ್ಯಲ್ಲ

ಪದ್ಮನಾಭ ಸಿರಿ ಭಕ್ತವತ್ಸಲ್ಲ
ನಿದ್ರೆಯ ಮಾಡಯ್ಯ ಶ್ರೀರಂಗವಿಠಲ ೭

## ೨೨

ರಾಗ : ಮುಖಾರಿ ತಾಳ : ಝಂಪೆ

ದಯಮಾಡಿ ಸಲಹಯ್ಯ ಭಯನಿವಾರಣನೆ
ಹಯವದನ ನಿನ್ನ ಚರಣ ನಂಬಿದೆನೊ ಜೀಯ ಪ.

ಕ್ಷಣ ಕ್ಷಣಕೆ ನಾ ಮಾಡಿದಂಥ ಪಾಪಂಗಳನು
ಎಣಿಸಲಳವಲ್ಲ ಅಷ್ಟಿಷ್ಟಯೆಂದು
ಫಣಿಶಾಯಿ ನೀನೆನ್ನ ಅವಗುಣಗಳೆಣಿಸದೆ
ನೆನಹಿನಾತುರ ಕೊಟ್ಟು ದಾಸನೆಂದೆನಿಸಯ್ಯ ೧

ಕಂಡಕಂಡ ಕಡೆಗೆ ಪೋಪ ಚಂಚಲ ಮನವು
ಪಿಂಡ ತಿಂಬಲ್ಲಿ ಬಹು ನಿಷ್ಠ ತಾನು
ಭಂಡಾಟದವನೆಂದು ಬಯಲಿಗೆ ತಾರದೆ
ಕೊಂಡಾಡುವಂತೆ ಭಕುತಿಯ ಕೊಟ್ಟು ಸಲಹಯ್ಯ ೨

ಜಾತಿಧರ್ಮವ ಬಿಟ್ಟು ಅಜಾಮಿಳನು ಇರುತಿರಲು
ಪ್ರೀತಿಯಿಂದಲಿ ಮುಕುತಿ ಕೊಡಲಿಲ್ಲವೆ
ಖ್ಯಾತಿಯನು ಕೇಳಿ ನಾ ಮರೆಹೊಕ್ಕೆ ಸಲಹಯ್ಯ
ವಾತಜನ ಪರಿಪಾಲ ಶ್ರೀರಂಗವಿಠಲ ೩

## ೨೩

ರಾಗ : ನಾದನಾಮಕ್ರಿಯ ತಾಳ : ಆದಿತಾಳ

ದುರಿತಗಜ ಪಂಚಾನನ–ನರ
ಹರಿಯೆ ದೇವರ ದೇವ ಕಾಯೊ ಗೋವಿಂದ ಪ.

ಹೆಸರುಳ್ಳ ನದಿಗಳ ಒಳಗೊಂಬೊ ಸಮುದ್ರನು
ಬಿಸುಡುವನೆ ಕಾಲುಹೊಳೆಗಳ ಗೋವಿಂದ ೧

ಒಂದು ಮೊಲಕೆ ಆರು ಹುಲಿ ಬಂದು ಕವಿದಿವೆ
ಬಂಧನ ಬಿಡಿಸೆನ್ನ ತಂದೆ ಗೋವಿಂದ ೨

ಹೆತ್ತ ಮಕ್ಕಳು ಹುಚ್ಚರಾದರೆ ತಾಯಿ ತಂದೆ
ಎತ್ತದೆ ನೆಲಕೆ ಬಿಸುಡುವರೆ ಗೋವಿಂದ ೩

ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿದ್ದರೆ
ನಿನ್ನ ಪಾಲ್ಯೆಸಲ್ಯಾಕೆ ಗೋವಿಂದ ೪

ಆಪತ್ತು ತಾಪತ್ರಯು ಬೆನ್ನ ಬಿಡದಿದ್ದರೆ
ಶ್ರೀಪತಿ ಶರಣೆನ್ನಲ್ಯಾಕೆ ಗೋವಿಂದ ೫

ಅರಸು ಮುಟ್ಟಲು ದಾಸಿ ರಂಭೆಯಾದಳು ದೇವ
ಪರುಷ ಮುಟ್ಟಲು ಲೋಹ ಸ್ವರ್ಣ ಗೋವಿಂದ ೬

ಮಾನಾಭಿಮಾನದೊಡೆಯ ರಂಗವಿಠಲ
ಜ್ಞಾನಿಗಳರಸನೆ ಕಾಯೋ ಗೋವಿಂದ ೭

## ೨೪

**ರಾಗ : ಆನಂದಭೈರವಿ ತಾಳ : ಆದಿತಾಳ**

ದೃಷ್ಟಿ ತಾಕೀತೋ ಬೀದಿ ಮೆಟ್ಟಬ್ಯಾಡವೋ
ಸೃಷ್ಟಿಯ ನಾರಿಯರೆಲ್ಲ ಕಣ್ಣಿಟ್ಟು ಹೀರುವರೋ ನಿನ್ನ ಪ.

ಪುಟ್ಟ ಪದಕಮಲದಿ ಮೆಟ್ಟಿ ರತುನ ಪಾದುಕಾ
ಇಟ್ಟೆ ಕಿರುಗೆಜ್ಜೆ ಪೆಂಡ್ಯೆ ದಿಟ್ಟತನದಿ
ಘಟ್ಟಿ ಸಾಸಿರ ಬಾಳುವ ಪಟ್ಟೆಯನೆ ಬಿಗಿ
ದುಟ್ಟು ಮೇಗಿಲ್ಲದೆ ಬೆಲೆಯಾದ ಪಟ್ಟದುಡುದಾರವಿಟ್ಟು ೧

ಸಿರಿಯಿರುವ ಉರದಲ್ಲಿ ಪರಿಮಳ ಗಂಧವ ಪೂಸಿ
ಪರಿಪರಿ ಪದಕ ಮುತ್ತು ಸರ ವೈಜಯಂತಿ
ಕೊರಳ ಕೌಸ್ತುಭದ ಕಾಂತಿ ನಿರುಪಮ ಶ್ರೀವತ್ಸಲಾಂಛನ
ಸರಿಗೆ ತಾಳಿ ಪದಕವು ಸೇರಿದ ಮುತ್ತಿನ ಜಲ್ಲೆ ೨

ಉಗುರ ಗೋರಂಟಿ ಛಾಯಾ ಚಿಗುರು ಪೋಲುವ ಬೆರಳಂ
ಬಗೆಬಗೆ ರತುನಂಗಳ ನಗಗಳನಿಟ್ಟು
ನಗವನೆತ್ತಿದ ಭುಜಕೆ ಬಿಗಿದ ಬಾಹುಪುರಿ ಕೆಂಪು
ನಿಗಿನಿಗಿಗುಟ್ಟುವ ಕಾಂತಿ ನಗುತಿದೆ ಬಾಲ ಭಾನುವ ೩

ಎಳವಶಾವಿನ ಸೊಬಗಿನ ತಳಿರುಪೋಲುವ ಕೆಂದುಟಿ
ಸುಳಿಪಲ್ಲು ಮಂದಹಾಸವು ನಳಿನದಳಾಕ್ಷ
ಥಳಥಳಿಪ ಕುಂಡಲವು ಪೊಳೆವ ನಾಸಿಕ ಲಲಾಟ
ಚೆಲುವ ವುಬ್ಬು ಕಸ್ತೂರಿಯ ತಿಲಕ ಒಪ್ಪುವ ಮುಖದಿ ೪

ಕೋಟಿ ಹೊನ್ನು ಬಾಳುವ ಕಿರೀಟವಿಟ್ಟು ಕಡೆಗಣ್ಣ
ನೋಟದಿಂದ ತರುಣೇರ ವೋಟಿ ಮಾಡುತ
ಚಾಟುಮಾತುಗಳಾಡುತ ಪೊಟ್ಟನಂತೆ ತಿರುಗಿದರೆ
ನೀಟಲ್ಲವೊ ನಿನಗಿದು ಪಾಟಲಾಧರನೆ ಕೇಳು ೫

ಬಿಂಕದಿಂದ ಎರಡು ಕರದಿ ಶಂಖ ಚಕ್ರವ ಪಿಡಿದು
ಅಂಕಿತ ವೇಣುನೂದುತ ಶಂಕೆ ಇಲ್ಲದೆ
ಮಂಕು ಮಾಡುತ ಬಾಲೇರ ಪಂಕಜಾಕ್ಷ ಸುಳಿದರೆ
ಮಂಕುಗಾರನೆಂದು ನಿನ್ನ ಅಂಕಿತ ಮಾಡುವರಲ್ಲೋ ೬

ಮಂಗಳಮೂರುತಿ ಮುಂಚೆ ಶೃಂಗಾರಗಳನೆ ಮಾಡಿ
ಪೊಂಗೊಳಲನೂದುತ ಶ್ರೀರಂಗ ಸುಳಿದರೆ
ಹೆಂಗಳ ರಂಭೇರೊಂದಾಗಿ ಕಂಗಳಿಡಲು [ಉ]ನ್ನಂತ
ರಂಗವಿರಲಗಲದಿರೋ ಹಿಂಗದೆ ನರಸಿಂಗನೇ ೭

## ೨೫

### ಉಗಾಭೋಗ

ಧ್ಯಾನವು ಕೃತಯುಗದಿ
ಯಜನ ಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ಗಾನದಲಿ ಕೇಶವಯೆನಲು
ಕೈಗೊಡುವನು ರಂಗವಿಠಲ

## ೨೬

ರಾಗ : [ವಸಂತ] ತಾಳ : ಅಟ್ಟತಾಳ

ನಂದನಂದನ ಪಾಹಿ ಗುಣವೃಂದ
ಸುಂದರರೂಪ ಗೋವಿಂದ ಮುಕುಂದ ಪ.

ದಿನಕರಭವಪಾಲ ಕನಕಾಂಕಿತ ಚೇಲ
ಜನಕಜಾಲೋಲ ಜನಕಾನುಕೂಲ ೧

ಪವನಜಪರಿವಾರ ಯವನವಿದಾರ
ನವರತ್ನಹಾರ ನವನೀತಚೋರ ೨

ತುಂಗ ವಿಹಂಗತುರಂಗ ದಯಾಪಾಂಗ
ರಂಗವಿಠಲ ಭವಭಂಗ ಶುಭಾಂಗ ೩

## ೨೭

ರಾಗ : ವಸಂತ ತಾಳ : ತ್ರಿಪುಟತಾಳ

ನಾ ನಿನಗೇನು ಬೇಡುವುದಿಲ್ಲ—ಎನ್ನ
ಹೃದಯಕಮಲದೊಳು ನೆಲಸಿರು ಹರಿಯೆ ಪ.

ಹೇಯ ಶರೀರವ ಪೋಷಿಸಿಕೊಂಡು ಉ
ಪಾಯವ ಚಿಂತಿಸಿ ಬಳಲುವೆನು
ರಾಯರ ಮಾಡಿ ಶರಣರ ಸಲಹುವ
ರಂಗವಿಠಲನ ಬಿಡುವೆನೇನಯ್ಯ ೩

೨೯

ರಾಗ ಶಂಕರಾಭರಣ ತಾಳ: ಅಟ್ಟತಾಳ

ನಾರಾಯಣ ನಿನ್ನ ನಂಬಿದೆ-ಲಕ್ಷ್ಮೀ
ನಾರಾಯಣ ನಿನ್ನೊರತು ಪೊರೆವ ದೈವವೆಲ್ಲಿದೆ ಪ.

ನಾ ವಿಕಾರಿ ದುಷ್ಕರ್ಮವ ಮಾಡಿದೆ
ಅಪಾರ ಮಹಿಮ ದಯಾನಿಧೇ ಅ ಪ.

ನಾನಾ ಯೋನಿಗಳಿಂದ ಬಂದೆನೋ
ಮಾನ ತಾಳಲಾರದೆ ಬಲು ನೊಂದೆನೋ
ದೀನರಕ್ಷಕ ಎನ್ನ ಗತಿ ಮುಂದೇನೋ
ಮಾನದಿಂದಲಿ ಪಾಲಿಸುವಂಥ ದೊರೆ ನೀನೋ ೧

ದಾಸರ ಮನ ಉಲ್ಲಾಸನೆ
ಶ್ರೀಶ ಆಶ್ರಿತ ಜನರ ಪೋಷನೆ
ಸಾಸಿರ ಅನಂತ ಮಹಿಮನೆ
ಕ್ಲೇಶ ನಾಶಮಾಡಿಸೋ ಶ್ರೀನಿವಾಸನೆ ೨

ರಂಗನಗರ ಉತ್ತುಂಗನೆ
ಗಂಗಾಜನಕ ಗರುಡತುರಂಗನೆ ಉ
ತ್ತುಂಗ ಗುಣಗಳಂತರಂಗನೆ ಅ
ನಂಗನ ಪೆತ್ತ ರಂಗವಿಠಲನೆ ೩

## ೩೦

### ಸುಳಾದಿ

ರಾಗ: ಸಾರಂಗ

ಧ್ರುವತಾಳ

ನಿನ್ನಾಧೀನ ಶರೀರ ಕರಣ ಚೇಷ್ಟೆಗಳೆಲ್ಲ
ನಿನ್ನಾಧೀನ ಬಂಧ ಮೋಕ್ಷ ನಿರಯಂಗಳು
ನಿನ್ನಾಧೀನ ಯೋಗ್ಯತೆ ಸಾಧನ ಸಾಧ್ಯಗಳೆಲ್ಲ
ನಿನ್ನಾಧೀನ ಸುಕೃತ ದುಷ್ಕೃತ ಫಲವು
ನಿನ್ನಾಧೀನ ವಿಷಯಾತ್ಮ ಬುದ್ಧಿಗಳೆಲ್ಲ
ನಿನ್ನಾಧೀನ ಚರಾಚರವೆಂದು ಶ್ರುತಿ ಸಾರುತಲಿವೆ
ಇಂತು ಪುಣ್ಯ ಪಾಪವೆಲ್ಲ ನಿನ್ನ ಲೇಪಿಸವೋ ದೇವ
ಎಂತು ಜೀವರನು ಪುಣ್ಯ ಪಾಪಂಗಳನುಣಿಸುವೆ
ಅಂತರಾತ್ಮನೆ ನಿನ್ನ ಮಹಿಮೆಂಗೆ ನಮೋ ಎಂಬೆ
ಎಂತೋ ಚಿತ್ತವಿನ್ನೆಂತೋ ಪಾಲಿಸೋ ರಂಗವಿಠಲ ೧

ಮಠ್ಯತಾಳ

ಮುನ್ನ ನಿನ್ನ ಚರಣ ಕಮಲವ ನಂಬಿದೆ
ಭವಭವಂಗಳಲಿ ಬಂದೆನೋ
ಪನ್ನಗೇಶಶಯನ ಶ್ರೀಹರೇ
ಇನ್ನು ಬಿಡೆನೊ ಬಿಡೆನಯ್ಯಾ ಸಂಪನ್ನ
ಎನ್ನ ಗುಣ ದೋಷವರಸದೆ
ಇನ್ನು ಕಾಯೋ ರಂಗವಿಠಲ ೨

[ರೂಪಕ ತಾಳ]

ಕರಣಗಳು ಬಿಡದೆ ತಮ್ಮ ತಮ್ಮ
ವಿಷಯಂಗಳಿಗೆ ಎಳೆವುತಲಿವೆ
[ಎನ್ನ] ಹರಣ ನಿನ್ನದು ಕರುಣಾಕರನೇ
[ಈ ಧರೆ ರವಣ] ಮಾಣಿಸೋ ಹರಿಯೋ
ನಿನ್ನ ಚರಣ ಭಕುತರ ಶರಣನಾದೆನು
ಹೊರೆವುದು ಎನ್ನ ರಂಗವಿಠಲರೇಯ ೩

ಅಟ್ಟತಾಳ

ಒಂದು ಬಂದು ನಾನಾ ಭವದಲ್ಲಿ ಬೆಂದೆನಯ್ಯ
ನಂದನಂದನ ಇಂದಿರಾನಂದ
ಕುಂದ ಶುದ್ಧ ಧವಳದಂತೆ ಮಂದಹಾಸ
ನಂದನ ಕಂದ ಇಂದಿರಾನಂದ
ಇಂದೆನ್ನ ಸಲಹಯ್ಯ ರಂಗವಿಠಲ ೪

[ಏಕತಾಳ]

ಹರಿಯೇ ನಿನ್ನ ಒಮ್ಮೆ ನೆನೆ[ದವ]
ನರಕವ ಹೊಗನಂತೆ
ಆನು ಒಮ್ಮೆ ಇಮ್ಮೆ ನೆನೆವೆನಯ್ಯ
ಆನು ನಿನ್ನ ನಂಬಿದೆ ಕರುಣೆಗಳರಸ
ಹೊರೆದೆನ್ನ ಕಾಯೋ ರಂಗವಿಠಲ ೫

ಜತೆ

ಮಂಗಳ ಮಹಿಮ ಭುಜಂಗಶಯನ ನಮೋ
ಜಂಗುಳಿ ದೈವದ ಗಂಡ ರಂಗವಿಠಲ ೬

## ೩೧

ರಾಗ ಭೈರವಿ ತಾಳ ಆದಿತಾಳ

ನೀನೆ ಬಲ್ಲಿದನೋ ರಂಗಾ
ನಿನ್ನ ದಾಸರು ಬಲ್ಲಿದರೋ ಪ

ನಾನಾ ತೆರದಿ ನಿಧಾನಿಸಿ ನೋಡಲು
ನೀನೇ ಭಕ್ತರಾಧೀನನಾದ ಮ್ಯಾಲೆ ಅ.ಪ

ಪರಮ ಪುರುಷ ಪರ[ಬೊಮ್ಮನೆಂದೆನುತಲಿ]
ನಿರುತದಿ ಶ್ರುತಿಯು ಕೊಂಡಾಡಲು ನಿನ್ನನು
ನರ ಧರ್ಮಜನರಮನೆಯ ಒಳಗೆ ನಿಂ
ದ್ವಾರಪದಿಂದ ಕರೆದಲ್ಲಿ ಪೋದ ಮ್ಯಾಲೆ ೧

ಖ್ಯಾತಿಯಿಂದ ಪುರುಹೂತ ಸಹಿತ ಸುರ
ವ್ರಾತವು ನಿನ್ನನು ವಾಲೈಸುತಿರೆ
ಭೂತಳದೊಳು ಸಂಪ್ರೀತಿಯಿಂದ
ಪಾರ್ಥನ ರಥಕೆ ನೀ ಸೂತನಾದ ವಸ್ಯಾಲೆ ೨

ಜಲಜಭವಾಂಡದೊಡೆಯನೆಂದೆನಿಸುವ
ಬಲು ಬಲು ದೊಡ್ಡವನಹುದಹುದಾದಡೆ
ಒಲಿದು ಸದ್ಗತಿಯೀವೆ ಅನುದಿನದಲಿ ನೀ
ಬಲಿಯ ಮನೆಯ ಬಾಗಿಲ ಕಾಯ್ದ ವಸ್ಯಾಲೆ ೩

ಧುರದೊಳು ವಣೆಯನೆಚ್ಚೊಡೆದ ಭೀಷ್ಮನ
ಮರಳಿಪುದೆನುತಲಿ ಚಕ್ರವ ಪಿಡಿಯಲು
ಹರಿ ನಿನ್ನ ಕರುಣದ ಜೋಡು ತೊಟ್ಟಿರಲವ
ನಿರವ ಕಂಡು ಸುಮ್ಮನೆ ತಿರುಗಿದ ವಸ್ಯಾಲೆ ೪

ತರಳನು ಕರೆಯಲು ಒಡೆದು ಕಂಬದಿ ಬಂದು
ನರಮೃಗ ವೇಷದಿ ಭಕುತರ ತೆತ್ತಿಗನಾ[ದೆ]
ಕರುಣದಿ ಸಲಹೊ ಶ್ರೀರಂಗವಿಠಲ ನಿನ್ನ
ಸ್ಮರಿಪರ ಮನದಲಿ ಸೆರೆಯ ಸಿಕ್ಕಿದ ವಸ್ಯಾಲೆ ೫

## ೩೨

ರಾಗ : ಮಧ್ಯಮಾವತಿ ತಾಳ : ಆದಿತಾಳ

ಪಾಲೊಳಗದ್ದು ನೀರೊಳಗದ್ದು ಹರಿ
ನಾ ನಿನ್ನ ನಂಬಿದೆನೋ ಪ

ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯ ಅ.ಪ.

ಸುಖದುಃಖದೊಳಗಿಡು ಸುಕೃತ ದುಷ್ಕೃತ ಮಾಡು
ನಿಖಿಳ ದುರಿತದೊಳೆನ್ನ[ನೋ]ಲ್ಯಾಡಿಸು
[ಅಖಿಳ ಖಳನೆನಿಸು] [ಅಭಯ ಭಯವ] ಸೂಸು
ಮಕರಕುಂಡಲ ನಿನ್ನ ಮತವೆ [ಸನ್ಮ]ತವಯ್ಯ ೧

ಜ್ಞಾನಾಜ್ಞಾನದೊಳಗಿಡು ಮಾನಾಪಮಾನವೆ ಮಾಡು
[ಅನಾಥ ನಾಥ]ರೊಳೆನ್ನ ಅನವರತಾಗಿರಿಸು
ದೀನಾದೀನತೆಯೊಳಗೆನ್ನ ನೀನೀಡ್ಯಾಡು
ಶ್ರೀನಾಥ ನಿನ್ನಯ ಮತ ಮತವೆ ಸನ್ಮತವಯ್ಯ ೨

ಪ್ರಾಣಾಪಾನ ವ್ಯಾನೋದಾನ ಸಮಾನಂಗಳ ಭೇದಿಸು
ಘನ ದಾರಿದ್ರ್ಯ [ದಿ] ನೂಕು ಸುಖವೆ ಸುರರೊಳಗ್ಹಾಕು
ಮುನಿಜನರ ಸಂಗ ಪೊರೆವ ರಂಗವಿಠಲ
ನಿನ್ನಯ ಮತ ಮತವೆ ಸನ್ಮತವಯ್ಯ ೩

## ೩೩

ರಾಗ ಧನ್ಯಾಸಿ ತಾಳ ಆದಿತಾಳ

ಪೋಪು ಹೋಗೋಣ ಬಾರೊ ರಂಗ
ಪೋಪು ಹೋಗೋಣ ಬಾರೋ ಪ.

ಜಾಹ್ನವಿಯ ತೀರವಂತೆ ಜನಕರಾಯನ ಕುವರಿಯಂತೆ
ಜಾನಕಿಯ ವಿವಾಹವಂತೆ ಜಾಣ ನೀ ಬರಬೇಕಂತೆ ೧

ಕುಂಡಿನೀಯ ನಗರವಂತೆ ಭೀಷ್ಮಕನ ಕುವರಿಯಂತೆ
ಶಿಶುಪಾಲನ ಒಲ್ಲಳಂತೆ ನಿನಗೆ ವಾಲೆ ಬರೆದಳಂತೆ ೨

ಪಾಂಡವರು ಕೌರವರಿಗೆ ಲೆತ್ತವಾಡಿ ಸೋತರಂತೆ
ರಾಜ್ಯವನ್ನು ಬಿಡಬೇಕಂತೆ ರಂಗವಿಠಲ ಬರಬೇಕಂತೆ ೩

## ೩೪

ರಾಗ ವರಾಳಿ ತಾಳ ಆದಿತಾಳ

ಬಾರೋ ನಮ್ಮ ಮನೆಗೆ ಗೋಪಾಲಕೃಷ್ಣ ಪ.

ಗೊಲ್ಲ ಬಾಲಕರನು ನಿಲ್ಲಿಸಿ ಪೆಗಲೇರಿ
ಗುಲ್ಲು ಮಾಡದೆ ಮೊಸರೆಲ್ಲ ಸವಿದ ಕೃಷ್ಣ ೧

ಕಸ್ತೂರಿ ತಿಲಕವ ಶಿಸ್ತಾಗಿ ಪಣೆಯೊಳಿಟ್ಟು
ಮಸ್ತಕದಲಿ ಪರವಸ್ತು ತೋರಿದ ಕೃಷ್ಣ ೨

ಮುಜ್ಜಗವನೆಲ್ಲ ಬೊಜ್ಜೆಯೊಳಗಿಟ್ಟು
ಗೆಜ್ಜೆಯ ಕಟ್ಟಿ ತಪ್ಪೆಜ್ಜೆಯನಿಕ್ಕುತ ೩

ನಾರೇರು ಬಿಚ್ಚಿಟ್ಟ ಸೀರೆಗಳನೆ ವೊಯ್ದು
ವ್ಯಾರೆ ಇಲ್ಲದೆ ಕರತೋರೆಂದ ಶ್ರೀಕೃಷ್ಣ ೪

ಅಂಗನೆಯರ ವ್ರತಭಂಗವ ಮಾಡಿದ
ರಂಗವಿಠಲ ಭವಭಂಗವ ಪರಿಹರಿಸೋ ೫

## ೩೫

ರಾಗ : ಆರಭಿ ತಾಳ : ಅಟ್ಟತಾಳ

ಬಾರೋ ಮನೆಗೆ ಗೋವಿಂದ–ನಿನ್ನಂಘ್ರಿಕಮಲವ
ತೋರೋ ಎನಗೆ ಮುಕುಂದ ನಲಿದಾಡು ಮನದಲಿ
ಮಾರಪಿತ ಆನಂದನಂದನ್ನ ಕಂದ ಪ.

ಚಾರುತರ ಶರೀರ ಕರುಣಾ
ವಾರಿನಿಧಿ ಭವ ಘೋರ ನಾಶನ
ವಾರಿಜಾಸನ ವಂದ್ಯ ನಿರಜ
ಸಾರ ಸದ್ಗುಣ ಹೇ ರಮಾಪತೆ ಅ.ಪ.

ನೋಡೋ ದಯದಿಂದೆನ್ನ—ಕರಪದುಮ ಶಿರದಲಿ
ನೀಡೋ ಭಕ್ತಪ್ರಸನ್ನ—ನಲಿದಾಡೊ ಮನದಲಿ
ಬೇಡಿಕೊಂಬೆನೊ ನಿನ್ನ—ಆನಂದ ಘನ್ನ
ಮಾಡದಿರು ಅನುಮಾನವ—ಕೊಂ
ಡಾಡುವೆನು ತವ ಪಾದಮಹಿಮೆಗಳನು
ಜೋಡಿಸುವೆ ಕರಗಳನು ಚರಣಕೆ
ಕೂಡಿಸೊ ತವ ದಾಸಜನರೊಳು ೧

ಹೇಸಿ ವಿಷಯಗಳಲ್ಲಿ—ತೊಳಲ್ಯಾಡಿ ನಾ ಬಲು
ಕ್ಲೇಶ ಪಡುವುದು ಬಲ್ಲಿ—ಘನಯುವತಿಯರ ಸುಖ
ಲೇಸು ಎಂಬುದನು ಕೊಲ್ಲಿ—ಆಸೆ ಬಿಡಿಸಿಲ್ಲಿ
ಏಸು ಜನುಮದ ದೋಷದಿಂದಲಿ
ಈಸುವೆನು ಇದರೊಳಗೆ—ಇಂದಿಗೆ
ಮೋಸವಾಯಿತು ಆದುದಾಗಲಿ
ಶ್ರೀಶ ನೀ ಕೈಪಿಡಿದು ರಕ್ಷಿಸು ೨

ನೀನೆ ಗತಿಯೆನಗಿಂದು ಉದ್ಧರಿಸೊ ಬ್ಯಾಗನೆ
ದೀನ ಜನರಿಗೆ ಬಂಧು—ನಾ ನಿನ್ನ ಸೇವಕ
ಶ್ರೀನಿವಾಸ ಎಂದೆಂದು ಕಾರುಣ್ಯ ಸಿಂಧು
ಪ್ರಾಣಪತಿ ಹೃದಯಾಬ್ಜಮಂಟಪ—
ಸ್ಥಾನದೊಳಗಭಿವ್ಯಾಪ್ತ ಚಿನುಮಯ
ಧ್ಯಾನಗೋಚರನಾಗಿ ಕಣ್ಣಿಗೆ
ಕಾಣಿಸುವೆ ಶ್ರೀರಂಗವಿಠಲ ೩

## ೩೬

ರಾಗ : ಬೌಳಿ ತಾಳ : ಝಂಪೆತಾಳ

ಬಿಡಿ ಬಿಡಿ ಸಂದೇಹವನು ಪೊಡವಿಮನುಜರೆಲ್ಲ
ಒಡೆಯನೊಬ್ಬನೆ ಜಗಕೆ ರಂಗವಿಠಲ ಪ.

ಹರಿಹರ ವಿರಿಂಚರೊಳು ಪರದೈವವಾರೆಂದು
ಪರಮ ಮುನಿಗಳು ವಿವಾದವನು ಮಾಡೆ
ಸರಸಿಜಾತನ ಸುತನ ಭೃಗುವನಟ್ಟಲು ಪೋದ
ಅರಿದು ಬಹೆನೆಂದು ಪದ್ಮಜನ ಸಭೆಗೆ ೧

ಮುನಿವರನು ಕಂಡು ಪದ್ಮಜಗೆ ವಂದಿಸದಿರಲು
ವನಜಭವ ಕೋಪವನು ಮಾಡಿ ಜರಿಯೆ
ಮುನಿ ಪರಮ ತತ್ತ್ವ ಇವನಲ್ಲವೆಂದೆನೆ ಕನಲಿ
ಮನಸಿಜವೈರಿಯ ಲೋಕಕೆ ಪೋದನು ೨

ಗರುಡವಾಹನನಾಗಿ ಹರಿಬಂದವನ ಕಾಯ್ದ
ಪರದೈವವಾರು ಜಗದೊಳಗೆ ಪೇಳಾ ೯

ರಾಜಸೂಯವ ಧರ್ಮಸುತ ಮಾಡೆ ಅವನಗ್ರ
ಪೂಜೆಗರುಹರು ಸುರರೊಳಾರೆಂದೆನಲು
ಭಾಜನನು ಸದ್ಗುಣನು ಕೃಷ್ಣನೊಬ್ಬನೆಯೆಂದು
ರಾಜಸಭೆಯಲಿ ದೇವವ್ರತ ನುಡಿದನು ೧೦

ಗಂಗೆ ಈತನ ಪಾದಸಂಗದಿ ಪಾವನವೆನಲು
ಗಂಗಾಧರನು ಪರಮದಾಸನೆನಲು
ಮಂಗಳಾತ್ಮಕ ವಿಶ್ವಜನ್ಮಾದಿಕಾರಣನು
ರಂಗವಿಠಲರೇಯನ ನೆರೆನಂಬಿರೋ ೧೧

## ೩೭

ರಾಗ : ಶಂಕರಾಭರಣ ತಾಳ : ಆದಿತಾಳ

ಭಕ್ತಿ ಬೇಕು ವಿರಕ್ತಿ ಬೇಕು ಸರ್ವ
ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವಗೆ ಪ.

ಸತಿ ಅನುಕೂಲ ಬೇಕು ಸುತನಲ್ಲಿ ಗುಣಬೇಕು
ಮತಿವಂತನಾಗಬೇಕು ಮತ ಒಂದಾಗಿರಬೇಕು ೧

ಜಪದ ಜಾಣುವೆ ಬೇಕು ತಪದ ನೇಮವೆ ಬೇಕು
ಉಪವಾಸ ವ್ರತ ಬೇಕು ಉಪಶಾಂತವಿರಬೇಕು ೨

ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು
ರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು ೩

## ೩೮

ರಾಗ : ಸಾರಂಗ ತಾಳ : ಝಂಪೆತಾಳ

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀ ವರ ವೆಂಕಟೇಶ ಪ.

ನಾಲಿಗ್ಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ ವಿ
ಶಾಲ ಕರ್ಣಕೆ ಭೂಷಣ ವಿಷ್ಣುಕಥೆಯು ೧

ದಾನವೇ ಭೂಷಣ ಇರುವ ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೆ
ಜ್ಞಾನವೇ ಭೂಷಣ ಮುನಿಯೋಗಿವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು ೨

ರಂಗನನು ನೋಡುವುದೇ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರ ಭೂಷಣ
ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮ ನಾಮ ಅತಿ ಭೂಷಣ ೩

## ೩೯

### ಭ್ರಮರಗೀತೆ

ರಾಗ . ದೇಶೀ ತಾಳ . ಅಟ್ಟತಾಳ

ಭೃಂಗಾ ನಿನ್ನಟ್ಟಿದನೇ ಶ್ರೀರಂಗ ಮಧುರೆಲಿ ನಿಂದು
ಅಂಗಜಲುಬ್ಧಕ ಪೂಗೋಲಂಗಳ ತಡೆಯನಿಕ್ಕಿ
ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ ಗುರಿಯೆಂಚ್ಚು
ಹಿಂಗಿಸುತ್ತೈಧಾನೆ ಅಸುವ ಹೇ ಕಿತವಾ ಪ.

ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯ
ಚಿನ್ನಗರರಸ ಕುಶಲೋನ್ನತಿಯೊಳಿಹನೇನೋ
ಚಿಣ್ಣತನ ಮೊದಲಾಗವನ್ನ ಕಿತವ ಬಲ್ಲೆವೋ
ಗನ್ನಗಾರ ಚಿತ್ತ ಚೋರನ್ನ ಶ್ರೀ ಹರಿಯಶಾ
ಮನ್ನಣೆಗೆ ಮೆಚ್ಚಿ ತನುವನ್ನೊಪ್ಪಿಸಿದ ಮುಗುದೆ-
ಮೆಣ್ಣುಗಳ ವಿರಹಾಬ್ಧಿಯನ್ನೆ ದಾಟಿಸುವೆನೆಂದು
ತನ್ನ ನೇಹವೆಂಬೋ ನಾವೆಯನ್ನೇರಿಸಿ ಮೋಸದಿ
ನಡುನೀರೊಳು ತೊ[ರೆದ್ಹೋದನೆ ಹೇ] ಕಿತವಾ ೧

ತಮ್ಮ ನಂದಗೋಪ ಯಶೋದಮ್ಮನ ಕಂಡುಬಾರೆಂದು
ರಮ್ಮೆಯ ರಮಣ ನಿನ್ನನ್ನೊಮ್ಮೆ ಕಳುಹಿದನ್ಯೆಸೆ
ಹಮ್ಮುಗೆಟ್ಟಾರಮ್ಮಣೇರಿಂದುಮ್ಮಳಿಸುವೆವೊ ವೃಥಾ
ನಮ್ಮ ಹಂಬಲಿನ್ನೇನವಗೆ ಶ್ರೀಹರಿಗೆ
ಹೊಮ್ಮೇಲಟ್ಟದಲಂಚೆಯಗಮ್ಮನೇರ ಕುಚದ ಕುಂ
ಕುಮ್ಮ ಕಸ್ತೂರಿಯು ಕರದಿಮ್ಮನದಿ ಸಿಲುಕಿದಂಗೆ
ಕಮ್ಮಗೋಲನ ಬಾಣಂಗಳುಮ್ಮಳಿ ನೋಯಿಸುತಿವೆ
ಸುಮ್ಮನೆ ಬಾಹೋದು ಸುಲಭವೆ ಹೇ ಕಿತವಾ ೨

ಮಧುಕುಂಜವನದಲ್ಲಿ ಮಧುವೈರಿ ಕೊಳಲನೂದಲು
ಮಧುರ ನಿಸ್ವನ ಕೇಳಿ ಮದಿರಾಕ್ಷಿಯರೆಲ್ಲ ಧಾ
ಮದ ಧ್ಯಾನವ ಬಿಟ್ಟು ಮೃಗಮದಗಂಪವಿಡಿ
ದೈದಿ ಮಂದನನಯ್ಯನ ಕಾಣುತ ಶ್ರೀ ಹರಿಯ
ಮುದವೇರಿ ತಲೆವಾಗಿ ಮೇದಿನಿ ನಿಟ್ಟಿಸಲಾಗ
ಮೃದುವಾಕ್ಯದೊಳೆಮ್ಮಪ್ಪಿ ಅಧರಾಮೃತ ಭೋಜನೆ
ಕ್ಕೊದಗುವ ಸತತ ಸನ್ನದ್ಧ ನಮ್ಮನಗಲಿ ಕ
ಲ್ಲೆದೆಯಾದನೆಂತೋ ಕೃಪಾಳು ಹೇ ಕಿತವಾ ೩

ವಜ್ರಾಂಕುಶ ಧ್ವಜಾಂಕಿತ ಹೆಜ್ಜೆಯನ್ನೆ ತಿಳಿದ ನ
ಮ್ಮ ಬ್ಜಾಕ್ಷಿಯರೊಡನೆ ರತಿಕಜ್ಜದುಪವನದಲ್ಲಿ
ನಿರ್ಜರೋತ್ತಂಸರೊಡನೆ ಮಜ್ಜನ ಕ್ರೀಡೆಯಾಡುವ ಸಾ
ಯುಜ್ಯ ಸುಖವೆತ್ತಲಿಪ್ಪುದೊ ಶ್ರೀಹರಿಯ

ಅಬ್ಜಭವ ಮುನಿಜನ ಪೂಜ್ಯನಗಲಿದ ಮ್ಯಾಲೆ
ನಿರ್ಜೀವಿಗಳಾಗಿ ಕಣ್ಣ ಕಜ್ಜಲ ಕಲಕಿಕೊಂಡು
ಲಜ್ಜೆಗೆಟ್ಟು ತನುಲತೆ ಜರ್ಝರಿತದಿ ಜೀವಿಸೆ
ವಜ್ಜರೆದೆಯಲ್ಲವೆ ನಮ್ಮ [ದು] ಹೇ ಕಿತವಾ ೪

ಕತ್ತೂರಿಯು ಬಟ್ಟನಿಟ್ಟು ಮುತ್ತಿನ ಜೊಲ್ಲೆದುರುಬಿಲಿ
ಕಸ್ತೂರಿ ತಿಲಕ ಚಲತ್ಕುಂಡಲವೆಳಗು
ವೃತ್ತವದನದಿ ಮಂದಸ್ಮಿತ ತಿಂಗಳಿಂದಲೆಮ್ಮ
ಹೃತ್ತಾಪ ಪರಿಹರಿಸುವ ಶ್ರೀ ಹರಿಯು
ಮತ್ತೆ ವಕ್ಷದ ಶ್ರೀವತ್ಸ ಕೌಸ್ತುಭ ವೈಜಯಂತಿ ಮಾಲೆ
ಶ್ರೀ ತುಲಸಿ ಘಮಘಮಿಸುತ್ತಲಿಹ ವನಮಾಲೆ
ರತುನ ಕಂಕಣ ಭುಜಕೀರ್ತಿಯಿಂದೊಪ್ಪುವ ಪುರು
ಷೋತ್ತಮನ್ನ ಬಣ್ಣಿಪರುಂಟೆ ಹೇ ಕಿತವಾ ೫

ಉತ್ಪಲ ಶ್ಯಾಮಲ ಮುದವೆತ್ತ ಬಾವನ್ನವದೀಡಿ
ಅತ್ಯಮಲ ಪೊನ್ನಂಬರ ಸುತ್ತಿದ
ಮತ್ತಾ ನೂಪುರ ಝಣತ್ಕಾರದಿ ಮಿಂಚಿಯೆಮ್ಮ
ಚಿತ್ತಶಿಖಿಗೆ ಪೀಯೂಷಸಿಕ್ತ ಮೇಘದಂತೆ ಒಪ್ಪುವ ಶ್ರೀಹರಿಯು
ಹೆತ್ತ ತಾಯಿ ಆಪ್ತ ಬಂಧು ಗೋತ್ರ ಗತಿ ನೀನೆ ನಮ್ಮ
ಚಿತ್ತವೆಂದು ನಂಬಿ ತನ್ನ ಹತ್ತಿಲಿ ಸಾರಿದವರ
ಒತ್ತಿ ತಾಂ ರಥವನೇರಿ ಸತ್ವರ ಬರುವೆನೆಂದು
ಮತ್ತಕ್ರೂರನೊಡನೈದಿದ ಹೇ ಕಿತವಾ ೬

ಲಕ್ಷುಮಿರಮಣನವ ಸೂಕ್ಷುಮ ಗೊಲ್ಲತೇರಾವು
ಕುಕ್ಷಿಯೊಳು ಬೊಮ್ಮಾಂಡವವಗೆ ಮಕ್ಷಿಕಗಳಂತಿಪ್ಪೆವು
ಮೋಕ್ಷದರಸನು ಆವ ಗೋಕ್ಷೀರದಿ ತೃಪ್ತರಾವು
ಲಕ್ಷಿಸುವದೆಂತೋ ಎಮ್ಮನು ಶ್ರೀಹರಿಯು
ರಕ್ಷಿಸಲುದಿಸಿ ಜನರಕ್ಷಣೆಗೆ ಪಾಲ್ಬೆಣ್ಣೆಯ
ಭಕ್ಷಿಸಿ ನಿರುತ ನಮ್ಮ ಅಕ್ಷಿಗೆ ಹಬ್ಬವನುಣಿಸಿ
ಈ ಕ್ಷೋಣಿ ಚರಾಚರ ದೀಕ್ಷಿಗೆ ನರರ ಸಾಮ್ಯ
ವಕ್ಷ [ಮ]ಣರಾದೆವೊ ಮೂರ್ಖರೋ ಹೇ ಕಿತವಾ ೭

ಹಿಂದೆ ಮಾಡಿದ ಸದ್ಧರ್ಮದಿಂದ ಮಧುರಾನಗರದ
ಇಂದೀವರಾಕ್ಷಿಯರಾನಂದ ಸಿಂಧುವಿಗುದಿತ ಪೂರ್ಣ
ಚಂದ್ರನಂತೊಪ್ಪುವ ಸಿರಿ ಮಂದರೋದ್ಧರನಂಘ್ರಿಯ
ಪೊಂದುವ ಭಾಗ್ಯಕ್ಕೆಣೆ ಉಂಟೆ ಶ್ರೀಹರಿಯ
ಅಂದೆಮ್ಮೊಳು ರಾಸಕ್ರೀಡೆಯಿಂದ ಒಂದಪರಾಧವ-
ನೊಂದನೆಣಿಸದೆ ಸಲಹೆಂದು ಬಿನ್ನೈಸಿ ಸಾಷ್ಟಾಂಗದಿಂದ
ವಂದಿಪೆವೋ ಭಕ್ತ ಬಂಧುವಿಗೆ ನಮ್ಮ ಹೃದಯ
ಮಂದಿರದೊಳೆಂದೆಂದಿರೆಂದು ಹೇ ಕಿತವಾ ೮

ಹೆಂಗಳೀರೊಂದಾಗಿ ಅಂತರಂಗದರಸನಾಡಿದ
ಮಂಗಳಚರಿತ್ರೆಯನ್ನು ಸಂಗೀತದಿಂ ಪೊಗಳುತ್ತ
ಕಂಗಳಶ್ರುಗಳೆವುತ್ತ ಇಂಗಿತಜ್ಞ ದೇವ-
ನಂಗಸಂಗದ ಸುಖವ ನೆನೆದು ಶ್ರೀಹರಿಯ
ಮಂಗಳ ವೇದಸ್ತೇಯಾರಿ ಶೃಂಗಾರ ಕೂರುಮ ನಮ್ಮ
ಪೊಂಗಣ್ಣನ ಸೀಳ್ದ ನರಸಿಂಗ ವಟು ಭಾರ್ಗವನೆ
ಅಂಗದ ಪಾರ್ಥ ಕಂಬುತುರಂಗಪ ರಂಗವಿಠಲ
ತುಂಗಮಹಿಮ ನಮೋ ಎಂಬೆವೋ ಹೇ ಕಿತವಾ ೯

## ೪೦

### ಉಗಾಭೋಗ

ಮನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ
ಧನದಿಂದ ಸಂತೋಷ ಕೆಲವರಿಗೆ ಲೋಕದಲ್ಲಿ
ವನಿತೆಯಿಂ ಸಂತೋಷ ಕೆಲವರಿಗೆ ಲೋಕದಲ್ಲಿ
ತನಯರಿಂ ಸಂತೋಷ ಕೆಲವರಿಗೆ ಲೋಕದಲ್ಲಿ
ಇನಿತು ಸಂತೋಷ ಅವರವರಿಗಾಗಲಿ ನಿನ್ನ
ನೆನೆವೋ ಸಂತೋಷ ಎನಗಾಗಲಿ ನಮ್ಮ ರಂಗವಿಠಲ

೪೧

ರಾಗ: ನಾದನಾಮಕ್ರಿಯೆ ತಾಳ: ಅಟ್ಟತಾಳ

ಮರುದಂಶರ ಮತ ಪಿಡಿಯದೆ ಇಹ
ಪರದಲ್ಲಿ ಸುಖವಿಲ್ಲವಂತೆ ಪ.

ಅರಿತು ವಿವೇಕದಿ ಮರೆಯದೆ ನಮ್ಮ
ಗುರುರಾಯರ ನಂಬಿ ಬದುಕಿರೋ ಅ.ಪ.

ಕ್ಷೀರವ ಕರೆದಿಟ್ಟ ಮಾತ್ರದಿ ಸಂ
ಸ್ಕಾರವಿಲ್ಲದೆ ಘೃತವಾಗದಂತೆ
ಸೂರಿಜನರ ಸಂಗವಿಲ್ಲದೆ ಸಾರ
ವೈರಾಗ್ಯ ಭಾಗ್ಯ ಪುಟ್ಟದಂತೆ ೧

ಉಪದೇಶ[ವಿ]ಲ್ಲದ ಮಂತ್ರ ವಿಸು
ಜಪಿಸಲು ಫಲಗಳ ಕೊಡದಂತೆ
ಉಪವಾಸ ವ್ರತಗಳಿಲ್ಲದೆ ಜೀವ
ತಪಸಿಯೆನಿಸಿಕೊಳ್ಳಲರಿಯನಂತೆ ೨

ಸಾರ ಮಧ್ವಶಾಸ್ತ್ರವೋದದೆ ಗುರು
ತಾರತಮ್ಯ ಜ್ಞಾನ ಪುಟ್ಟದಂತೆ
ಶ್ರೀರಂಗವಿಠಲನ ಭಜಿಸದೆ ಮುಂದೆ
ಪರಮಗತಿ ದೊರಕೊಳ್ಳದಂತೆ ೭

೪೨

ರಾಗ: ಕಾಂಬೋಧಿ ತಾಳ: ಝಂಪೆತಾಳ

ಮರೆ[ತೆ]ಯೋನೋ ರಂಗಾ ಮಂಗಳಾಂಗ
ತುರುಕರ ಕಾಯ್ವಲ್ಲಿ ತೊಂಡನಾಗಿದ್ದೆನ್ನ ಪ.

ಕೋಲು ಕೈಯಲಿ ಕೊಳಲು ಜೋಲುಗಂಬಳಿ ಹೆಗಲ
ಮೆಲ್ಯಾಲೆ ಕಲ್ಲಿ ಚೀಲ ಕೊಂಕಳಲ್ಲಿ
ಕಾಲಗಡಗವನಿಟ್ಟು ಕಾಡೊಳಿಹ ಪಶುಹಿಂಡ
ಲಾಲಿಸುವ ಬಾಲಕರ ಮೆಲ್ಯಾಳದೊಳಗಿದ್ದೆನ್ನ ೧

ಕಲ್ಲು ಮಣಿ ಕವ[ಡೆ]ಯನು ಕಾಡೊಳಿಹ ಗುಲಗಂಜಿ
ಸಲ್ಲದೊಡವೆಯು ನೀನು ಸರ್ವಾಂಗಕೆ
ಅ[ಲ್ಲ]ಲ್ಲಿಸೆ[ಯಿ] ಧರಿಸಿ ನವಿಲಗರಿಗಳ ಗೊಂಡೆ
ಅಲ್ಲಿ ಗೊಲ್ಲರ ಕೂಡ ಚೆಲ್ಲಾಟ ಮಾಡುತಲಿ ೨

ಸಿರಿದೇವಿ ಬಂದು ಸೇರಿದ ಬಳಿಕ ಲೋಕದಲಿ
ಸಿರಿ ಅರಸನೆಂದು ಸೇವಕರರಿವರೋ
ಶರಣಾಗತರ ಪೊರೆವ ಶ್ರೀರಂಗವಿಠಲಯ್ಯ
ನರಸಿಂಗ ನೀನಿರುವ ಪರಿಯು ಮುಂದಿನ ಸಿರಿಯು ೩

೪೩

ರಾಗ: ರೇಗುಪ್ತಿ ತಾಳ: ಝಂಪೆತಾಳ

ಮಾನನಿಧಿ ಶ್ರೀಕೃಷ್ಣ ಮಧುರೆಗೈದುವನಂತೆ
ಏನು ಪಥವಮ್ಮ ನಮಗೆ ಪ.

ಮಾನವೇನಿನ್ನಿದಕೆ ಮಾನಿನಿಯರೆಲ್ಲರು
ಆಣೆಯನು ಕಟ್ಟಿವನಿಗಡ್ಡ ನಿಲ್ಲುವ ಬನ್ನಿ ಅ.ಪ.

ಕಳ್ಳತನವೇ ನಮ್ಮ ವಲ್ಲಭರು ಈ ಸುಳುವು
ಎಲ್ಲವನು ಬಲ್ಲರಮ್ಮ
ಒಲ್ಲದಲೆ ನಮ್ಮ ಬಿಟ್ಟರೆ ಒಳಿತು ವನಜಾಕ್ಷ
ಎಲ್ಲಿಗೈದಿದರೆ ನಾವಲ್ಲಿಗೈದುವ ಬನ್ನಿ ೧

ಇಂದುದಯದಿ ಮೊದಲು ಇಂದೀವರಾಕ್ಷಿಯರು
ಗೋವಿಂದನ ಬಳಿಗೈದುವ

ಒಂದು ಕಡೆಯಲಿ ಕುಳಿತು [ವನಜಾಕ್ಷಿಯೋರ್ವಳ ಕೈ
ಯಿಂದಲಲ್ಲಿಗೆ ಕಳುಹಿ] ಕೇಳ್ವೆವೇನು ಪೇಳುವನೋ ೨

ಹರಿಣಾಂಕವದನೆಯರು ನೆರೆದು ಬರುತಿರೆ ಕಂಡು
ಪರಮ ಹರುಷದಲಿ ಬಂದು
ಸರಿ ರಾತ್ರಿಯೊಳು ಹೀಗೆ ಬರುವುದೇನೆಂದೆನಲು
ಎರಗಿ ಬಿನ್ನೈಸಿದರು ಅಂಬುಜದಳಾಕ್ಷನಿಗೆ ೩

ಶ್ಲೋಕ

ಹಲವು ಕಾಲವು ನಿನ್ನ ಸ್ನೇಹ ಸುಖವ ಹಾರೈಸಿಕೊಂಡಿರುತಿಹ
ಲಲನಾವ್ಯೂಹವ ಬಿಟ್ಟು ಅಕ್ರೂರನೊಡನೆ ನೀ ಮಧುರೆಗೆ ಪೋದರೆ
ಕಳೆಯಲಾಪೆವೇ ಕಾಂತ ಕೇಳು ದಿನವ ಈ ಕಂತುವಿನ ಬಾಧೆಗೆ
ಘಳಿಗೊಂದು ಯುಗವಾಗಿ ತೋರುತಿಹುದೋ ಜಲಜಾಕ್ಷ ನೀನಿಲ್ಲದೆ

ಪದ

ಬ್ಯಾಡ ಮಧುರೆಗೆ ಪೋಗಬ್ಯಾಡೆಲವೊ ಶ್ರೀಕೃಷ್ಣ
ಬೇಡಿಕೊಂಬೆವೋ ದೈನ್ಯದಿ
ನೋಡು ನಮ್ಮ್ಯಾಲೆ ದಯಮಾಡು ಮದನಂಗೀಡು
ಮಾಡುವುದೇನುಚಿತವೆಲೋ ಮಾಧವ ಕೃಪಾಕರನೆ ೪

ಶ್ಲೋಕ

ಬಾಲಭಾವದಲಿಂದಲಂಗಸುಖವ ಬಹುಬಗೆಯಲಿಂದುಳುಹಿದೆ
ಲೋಲಲೋಚನೆ ನಿಮ್ಮ ಬಿಟ್ಟು ಪುರದ ನಾರೇರಿಗಾನೊಲಿದರೆ
ನೀಲಕಂಠನ ಮೆಚ್ಚ ನೋಡು ನಿಜವ ನಿಮಗ್ಯಾತಕೀ ಸಂಶಯ
ಕಾಲಕ್ಷೇಪವನಲ್ಲಿ ಮಾಡೆ ಕಿಂಚಿತ್ಕಾಲದೊಳಾನೈದುವೆ

ಪದ

ಪಾಲಿಸಿರೆನಗಪ್ಪಣೆಯ ಪಾಟಲ ಸುಗಂಧಿಯರೆ
ಕಾಲಹರಣವ ಮಾಡದೆ
ನಾಳೆ ಉದಯಕೆ ಪೋಗಿ ನಾಲ್ಕೆಂಟು ದಿನದೊಳು
ವ್ಯಾಳೆದಿಲ್ಲಿಗೆ ಬರುವೆ ಕಾಳಾಹಿವೇಣಿಯರೆ ೫

ಶ್ಲೋಕ

ಮಾರನಯ್ಯನೆ ಕೇಳು ಅಲ್ಲಿರುತಿಹ ನಾರೇರು ಬಲು ನಿಪುಣರೋ
ನೀರಜಾಂಬಕ ನೋಡು ನಿನ್ನ ಮನವ ನಿಮಿಷಾರ್ಧದೊಳು ಸೆಳೆವರೋ
ಮಾರಕೇಳಿಯು [ಶಾಸ್ತ್ರಮರ್ಮವರಿದ ಆ] ನಾ[ರೇ]ರು ನೆರೆಯಲು
ಗಾರು ಮಳ್ಳಿಯಲಿಪ್ಪ ಗೋಪಿಯರ ವಿಚಾ[ರಂಗಳಂ ಸ್ಮರಿಪೆಯಾ]

ಪದ

ಬಿಲ್ಲ ಹಬ್ಬವೆ ಸುಳ್ಳು ಬಿಸರುಹಾಕ್ಷಿಯರಿಕ್ಷು
ಬಿಲ್ಲಿನುತ್ಸವಕೆ ನಿನ್ನ
ಖುಲ್ಲ ಅಕ್ರೂರನನು ಕಳುಹಿ ಕರೆಸಿದರಲ್ಲಿ
ವಲ್ಲಭೆಯರನು ನೆರೆವೆ ನಮ್ಮೆಲ್ಲರನು ಮರೆವೆ ೬

ಶ್ಲೋಕ

ನಾರೀಹಾರ ಕಿರೀಟ ಕುಂಡಲಯುಗ ಕೇಯೂರವಲಯಾದಿಗಳು
ಚಾರು ವಸ್ತ್ರ ಸುಗಂಧ ಪುಷ್ಪ ನಿಚಯ ಹಾರಂಗಳಂ ಧರಿಸದೆ
ಮಾರ ಕೇಳಿಯ ಮಾತಿಲಿಂದಲವರ ಮನಸೆಮ್ಮೊಳೊಂದಾಗದೆ
ನಾರೇರೊಲುಮೆಯುಂಟೆ ಲೋಕದೊಳಗೆ ನನ್ನಾತ್ಮಕೆ ದೂರ್ವಿರೇ

ಪದ

ಮಲ್ಲಯುದ್ಧವ ನೋಡಬೇಕೆನುತ ನಮ್ಮಾವ
ಅಲ್ಲಿಗೆ ಕರೆಸಲದಕೆ
ಇಲ್ಲದಪವಾದ ಈ ಸುಳ್ಳು ಸುದ್ದಿಗಳ ನೀ
ವೆಲ್ಲಿ ಸೃಜಿಸಿದಿರಿ ಸರಿಯಿಲ್ಲ ನಿಮಗಿಳೆಯೊಳಗೆ ೭

ಶ್ಲೋಕ

ವಾರಿಜಾಂಬಕ ವಾರಿಜಾರಿವದನ ವಾರಾಶಿಜಾವಲ್ಲಭ
ವಾರಿವಾಹನಿಭಾಂಗ ವಾಸವನುತ ವಾಕೆಮ್ಮದೊಂದಾಲಿಸೋ
ವಾರಿಜೋದ್ಭವನಯ್ಯ ನಿನ್ನ ವಿರಹ ವಾರಾಶಿಯೊಳು ಮುಳುಗಿ ಹ
ನಾರೀನಿಚಯವ ಪಾರುಗಾಣಿಸು ಕೃಪಾನಾವೆಯಲಿಂದೆಮ್ಮನು

ಪದ

ಮಾರನೆಂಬುವನು ಬಲು ಕ್ರೂರ ನಮ್ಮಗಲಿ ನೀ
ಊರಿಗ್ಹೋದುದನು ಕೇಳಿ
ವಾರಿಜಾಸ್ತ್ರವನು ಎದೆಗೇರಿಸೆಮ್ಮನು ಬಿಡದೆ
ಹೋರುವನು ಅಹೋ ರಾತ್ರಿಯಲಿ ತಪಿಸುತ ೮

ಶ್ಲೋಕ

ನೀಲಕುಂತಳೆ ಕೇಳು ನಿಮ್ಮ ಮನೆಯೊಳಾ ನೆ[ಲು]ವಿನ ವಾಕ್ಯಲಿನ
ಪಾಲು ಬೆಣ್ಣೆಯು ಕದ್ದು ಮೆದ್ದು ಬಹಳ ಕಾಲಂಗಳಂ ಕಳೆದೆನೆ
ಬಾಲೆ ಮನ್ಮಥಬಾಣ[ದೆ]ಚ್ಚು ತಪಿಸೆ ಬಹು ಬಗೆಯಲಿಂದುಳುಹಿದ
ಲೋಲಲೋಚನೆ ನಿಮ್ಮೊಳಾನು ಬಹಳ ಜಾಲತ್ವವಂ ಮಾಳ್ಪೆನೇ

ಪದ

ಬಟ್ಟಗಂಗಳೆ ನಿಮ್ಮ ಬಿಟ್ಟು ಘಳಿಗಿರಲಾರೆ
ದುಷ್ಟ ಕಂಸನು ಕರೆಸಲು
ಅಟ್ಟಿದರೆ ಪೋಗದಿರೆ ಸಿಟ್ಟಿನಿಂದಲಿ ವ್ರಜಕೆ
ಅಟ್ಟುಳಿಯ ಮಾಡುವನು ಅಂಬುಜ ಸುಗಂಧಿಯರೆ ೯

ಶ್ಲೋಕ

ಪತಿ ಸುತ ಪಿತೃ ಮುಖ್ಯ ಭ್ರಾತೃ ಬಾಂಧವರು ಎಂಬ
ಅತಿಶಯ ನಮಗಿಲ್ಲ ಆಲಿಸೋ ಮಾತನೆಲ್ಲ
ರತಿಪತಿಪಿತ ನೀನೇ ರಾತ್ರಿಯೊಳು ಕೊಳಲನೂದೆ
ಕ್ಷಿತಿಪತಿ ನಿನ್ನೆಡೆಗೆ ಕ್ಷಿಪ್ರದಿಂ ಬಂದೆವಲ್ಲೊ

ಪದ

ಬಾಲತನದಲಿ ಯಮುನಾ ತೀರದಲಿ ನೀ ವತ್ಸ
ಪಾಲನೆಯ ಮಾಡುತಿರಲು ಆ
ಕಾಲ ಮೊದಲಾಗಿ ಈ ವ್ಯಾಳೆ ಪರಿಯಂತರವು
ಕಾಲುಘಳಿಗಗಲದಿಹ ಕಾಂತೆಯರ ತ್ಯಜಿ[ಸುವರೆ] ೧೦

ಶ್ಲೋಕ

ಪರಿಪರಿಯಲಿ ನಿಮ್ಮ ಪಾರಿಸಿ ನೋಡೆ ಮುನ್ನ
ಕರುಣ[ಕೆ] ಕೊರತಿಲ್ಲ ಕಾಂತೆ ಕೇಳೆನ್ನ ಸೊಲ್ಲ
ತ್ವರಿತದಿ ಬಾರದಲೆ ತಡೆದು ನಾ ನಿಂತರಲ್ಲೆ
ಸಜಭವ ಮಾರರಾಣೆ ಕಾಣೆ ಪ್ರವೀಣೆ

ಪದ

ಹರಿಣಾಂಕ ವದನೆಯು[ರೆ] ಹರುಷಪೂರಿತರಾಗಿ
ಕರೆದು ತಾಂಬೂಲವಿತ್ತು
ಕಳುಹಿರೆನ್ನನು ನಿಮ್ಮ ಕ್ಲುಪ್ತ ಕಾಲಕೆ ಬಂದು
ನೆರೆಯದಿದ್ದರೆ ನಾನು ಪರಮ ಪುರುಷೋತ್ತಮನೆ ೧೧

ಶ್ಲೋಕ

ಮಾರನೆಂಬುವನಂದೆ ಮಡಿದನು ಶಿವನ ಮೂರನೆ ಕಣ್ಣಲಿ
ನಾರೇರಿಲ್ಲದೆ ನಾಭಿಯಿಂದ ಪಡೆದ ಆ ಬ್ರಹ್ಮನೆಂಬಾತನ
ನಾರಿ ಈರ್ವ ಕುಮಾರರಾಣೆ ಹರಿಯು ತಾನಿಟ್ಟನೇನೆಂಬೆವೆ
ಮಾರಿ ಹೊರಗಿನ ಹೊರಗೆ ಹೋಯಿತೆಂಬೊ ತೀರಾಯಿತೆ ಭಾವುಕಿ

ಪದ

ಹಲವು ಮಾತುಗಳ್ಯಾಕೆ ಜಲಜಾಕ್ಷ ನಿನ್ನ ಪದ
ನಳಿನಗಳ ನೆರೆ ನಂಬಿಹ
ಒಲುಮೆಯಲ್ಲಿರುತಿಪ್ಪ ಲಲನೆಯರನೆಲ್ಲರನು
ಸಲಹೊ ಸಲಹದೆ ಮಾಣು ರಂಗವಿರಲರೇಯು ೧೨

೪೪

ರಾಗ: ಪಾಡಿ   ತಾಳ: [ಆದಿತಾಳ]

ಮಾಯಮಂತ[ವೊ]ಳಿತಲ್ಲ ನಿನಗೆ
ನಾಯಿ ಜನ್ಮವು ಬಾರದೆ ಬಿಡದಲ್ಲ ಪ.

ಜಗಕೆ ಕಾರಣ ದೇವ [ತಾ]ನಿರಲು
[ಬೊಗಳಿಕೊಂಬೆ] ಭೇದವಿಲ್ಲೆಂದು
[ತೆಗೆವನು] ಯಮ ಬೆನ್ನ ಚರ್ಮ ಇದ
ನ[ಗೆ]ಯಲ್ಲ ಕೇಳೊ ತಿಳಿಯೊ ದುಷ್ಕರ್ಮಿ ೧

ಭೇದವಿಲ್ಲೆಂದು ತಿಳಿದು ನೀ
ವಾದಿಗರ ಮನೆಯಲ್ಲಿ ಉಣಲೊಲ್ಲೆ ಯಾಕೊ
ಸಾಧಿಸಿ ನೋಡಲು ನಿನಗೆ ಇಷ್ಟು
ಬದುಕಂ[ಂ]ಟಾದರು ಉ[ಸು]ರಲಿನ್ಯಾಕೊ ೨

ಅಕ್ಕ ತಂಗಿಯರಿರಲು ನೀನು
ರೊಕ್ಕವಿಕ್ಕಿ ಮ[ದುವೆ] [ಆ]ಗುದ್ಯಾಕೊ
ಚಿಕ್ಕ ತಂಗಿ ತಾಯಿ ಮೊದಲು ನಿನ್ನ
[ಲೆಕ್ಕದಲಿ] ನೋಡಲು ಒಂದಲ್ಲವೇನೋ ೩

ಶಂಕರಮತಕೆ ನೀ ಹೊಂದಿ
ಪಂಕದೊಳು ಬೀಳಬೇಕಲ್ಲೊ
ಸಂಕಟಗೊಳಗಾದಿಯಲ್ಲ ನಿನ್ನ
ಬಿಂಕವ ಮುರಿವರು ಯಮನವರಲ್ಲೊ ೪

ಇನ್ನಾದರು ಭೇದಮತವನು ನೀನು
ಚೆನ್ನಾಗಿ ತಿಳಿಯೊ ರಂಗವಿಠಲನು
ತನ್ನ ದಾಸ್ಯವನು ಕೊಟ್ಟು
ಉನ್ನಂತ ಪದವೀವನು ನಿ[ನ]ಗೆ ೫

## ೪೫

ರಾಗ: ಸುರಟಿ ತಾಳ: ಆದಿತಾಳ

ಮೋಸ ಹೋದೆನಲ್ಲ ಸಕಲವು ವಾಸುದೇವ
ಭಾಸುರಾಂಗ ಶ್ರೀವಾಸುಕಿಶಯನನ
ಸಾಸಿರ ನಾಮವ ಲೇಸಾಗಿ ಪಠಿಸದೆ ಪ.

ದುಷ್ಟ ಜನರ ಕೂಡಿ ನಾನತಿ
ಭ್ರಷ್ಟನಾದೆ ನೋಡಿ
ಶ್ರೇಷ್ಠರೂಪ ಮುರ ಮುಷ್ಟಿಕ ವೈರಿಯು
ನಿಷ್ಠೆಯಿಂದ ನಾ ದೃಷ್ಟಿಸಿ ನೋಡದೆ ೧

ಕಾಯುವು ಸ್ಥಿರವಲ್ಲ ಎನ್ನೊಳು
ಮಾಯೆ ತುಂಬಿತಲ್ಲ
ಪ್ರಾಯಮದದಿ ಪರಸ್ತ್ರೀಯರ ಕೂಡಾಡಿ
ಕಾಯಜಜನಕನ ಗಾಯನ ಮಾಡದೆ ೨

ಕಂಗಳಿಂದಲಿ ನೋಡೋ ದೇವ ನಿ
ನ್ನಂಗಸಂಗವ ನೀಡೋ
ಮಂಗಳಮಹಿಮ ಶ್ರೀರಂಗವಿಠಲ ಮುಂ
ದಂಗ ಬಾರದಂತೆ ನೀ ದಯಮಾಡೋ ೩

೪೩

ರಾಗ · ವರಾಳಿ ತಾಳ ಆದಿತಾಳ

[ಯಾಕೆ ಇಂಥ ದುಡುಕು ಕೃಷ್ಣಯ್ಯ ನಿನ
ಗೇಕೆ ಇಂಥ ದುಡುಕು]
ಪಾಕಶಾಸನ ವಂದ್ಯ ಪೋಕತನಗಳಿನ್ನು
ಸಾಕುಸಾಕಯ್ಯ ಕೃಷ್ಣ ಪ.

ಗೊಲ್ಲ ಬಾಲಕರು ನೀವೆಲ್ಲರು ಕೂಡಿಕೊಂಡು
ಗುಲ್ಲು ಮಾಡದೆ ಮೊಸರೆಲ್ಲ ಸವಿದೆಯಂತೆ ಕೃಷ್ಣ ೧

ಪೂತನಿ ಮೊಲೆಯುನ್ನು ಭೀತಿಯಿಲ್ಲದೆ ಉಂಡು
ಘಾತವ ಮಾಡಿದೆ ಮಾತನಾಡಯ್ಯ ಕೃಷ್ಣ ೨

ದುಷ್ಟಕಂಸನ ನೀನು ಕಷ್ಟವಿಲ್ಲದೆ ಮಡುಹಿ
ಮುಷ್ಟಿಕನ ಕೊಂ[ದೆ] ದೃಷ್ಟಿ ತಾಕೀತಂದು ೩

ನಿರ್ಜ[ನ]ಸ್ಥಳದಿ ಯಮಳಾರ್ಜುನರನ್ನು ಮುರಿದು
ದುರ್ಜನರ ಕೊಂದೆ ಅರ್ಜುನ ಸಾರಥಿ ೪

ಅಂಗಿ ಟೊಪ್ಪಿಗೆ ಉಂಗುರ ಉಡಿದಾರ
ಶೃಂಗರಿಸಿಕೊಂಡು ರಂಗವಿಠಲ ಬಾರೋ ೫

೪೭

ರಾಗ : ವರಾಳಿ ತಾಳ : ಝಂಪೆತಾಳ

ಯಾಕೆ ಪುಟ್ಟಿಸಿದಿ ನೀ ಸಾಕಲಾರದೆ ಜಗ
ದೇಕ ಕಾರಣಪುರುಷನೆ ಕೃಷ್ಣ ಪ.

ಏಕೋ ವಿಷ್ಣುಯೆಂಬೊ ವಾಕು ಚಿಂತಿಸೆ ಇಂಥ
ಕಾಕು ಮಾಡುವುದುಚಿತವೆ ಕೃಷ್ಣ ಅ.ಪ.

ಒಡಲಿಗನ್ನವ ಕಾಣೆ ಉಡಲು ಅರಿವೆಯ ಕಾಣೆ
ಗಡಗಡನೆ ನಡಗುತಿಹೆನೋ ಕೃಷ್ಣ
ಮಡದಿ ಮಾತೆಯರ ಬಿಟ್ಟು ಒಡಹುಟ್ಟಿದವರ ಬಿ
ಟ್ಟಡವಿ ಪಾಲಾದೆನಲ್ಲೋ ಕೃಷ್ಣ
ಕಂಡುತೆ ಕೊಡುವವರಿಲ್ಲ ನುಡಿಯ ಕೇಳುವರಿಲ್ಲ
ಬಡತನವು ಕಂಗೆಡಿಸಿತೋ ಕೃಷ್ಣ
ಕಡೆ ಹಾಯಿಸುವರ ಕಾಣೆ ನಡುಮಡುವಿನೊಳು ಕೈ
ಬಿಡದೆ ದಡವನು ಸೇರಿಸೋ ಕೃಷ್ಣ ೧

ಕೊಟ್ಟವರ ಸಾಲವನು ಕೊಟ್ಟು ತೀರಿಸದವರ
ಪೊಟ್ಟೆಯೊಳು ಪುಟ್ಟಲಾಯ್ತೋ ಕೃಷ್ಣ
ಎಷ್ಟು ಜನುಮದಿ ಮನಮುಟ್ಟಿ ಮಾಡಿದ ಕರ್ಮ
ಕಟ್ಟೀಗ ಉಣಿಸುತಿಹುದೋ ಕೃಷ್ಣ
ಸೃಷ್ಟಿಯೊಳಗೆನ್ನಂಥ ಕೆಟ್ಟ ಪಾಪಿಷ್ಠಜನ
ಘಟ್ಟಿಸಲಿಲ್ಲವೇನೋ ಕೃಷ್ಣ
ವಿಠಲನೆ ನಿನ್ನ ಮನಮುಟ್ಟಿ ಭಜಿಸಿ ಹಿಂದೆ
ಎಷ್ಟು ಜನ ಬದುಕಲಿಲ್ಲೋ ಕೃಷ್ಣ ೨

ಆಳು ದೇಹವು ಗೇಣು ಕೀಳಾಗಿ ಪಲ್ಮೊರೆದು
ಖೂಳ ಜನರ ಮನೆಗೆ ಕೃಷ್ಣ
ಹಾಳು ಒಡಲಿಗೆ ತುತ್ತು ಕೂಳಿಗೆ ಹೋಗಿ ಅವರ
ಪಾಲೈಸಲಾರೆನಲ್ಲೋ ಕೃಷ್ಣ
ಬಾಳು ಈ ಪರಿಯಾದ ಮ್ಯಾಲೆ ಭೂಮಿಯಲಿ ಬಹು
ಕಾಲ ಕಳೆಯುವುದುಚಿತವೆ ಕೃಷ್ಣ
ಆಲಸ್ಯ ಮಾಡದಲೆ ಈ ವ್ಯಾಳ್ಯದಲಿ ಅರಿತು
ಪಾಲಿಸಲು ಬಹು ಕೀರ್ತಿಯೋ ಕೃಷ್ಣ ೩

ಎಂದೆಂದು ಸಿರಿ ಅರಸನೆಂದು ಶ್ರುತಿ ಸಾರುತಿದೆ
ಬಂದುದೀಗೇನು ಸಿರಿಯೋ ಕೃಷ್ಣ
ಒಂದೊಂದು ನಿಮಿಷ ಯುಗಕಿಂತಧಿಕವಾಗುತಿದೆ
ಮುಂದೋರದ್ಹಾಂಗಾಯಿತೋ ಕೃಷ್ಣ
ಸಂದೇಹವಿಲ್ಲ ಗೋವಿಂದ ಶ್ರೀಪದದಾಣೆ
ತಂದೆ ನೀ ರಕ್ಷಿಸದಿರೆ ಕೃಷ್ಣ
ಮುಂದೆ ಭಜಿಸುವರು ಹೀಗೆಂದು ಪಾರುತೆ ಕೇಳಿ
ಬಂದುದಪಕೀರ್ತಿಮಾತು ಕೃಷ್ಣ ೪

ಪೃಧಿವಿಯೊಳಗುದಿಸಿ ಮುವ್ವತ್ತಾರು ವತ್ಸರ ಈ
ರೀತಿ ಕಾಲಕಳೆದೆನೋ ಕೃಷ್ಣ
ವ್ಯರ್ಥವಾಯಿತು ಜನುಮ ಸಾರ್ಥಕಾಗದು ಕಣ್ಣು
ಕತ್ತಲೆಗವಿಸಿತಲ್ಲೋ ಕೃಷ್ಣ
ಇತ್ತ ಬಾರೆಂತೆಂದು ಹತ್ತಿಲಿಗೆ ಕರೆದೊಂದು
ತುತ್ತು ಕೊಡುವರ ಕಾಣೆನೋ ಕೃಷ್ಣ
ವಿಸ್ತರಿಸಲಾರೆ ಇನ್ನೆತ್ತ ಪೋಗಲೊ ನಿನ್ನ
ಚಿತ್ತವ್ಯಾತಕೆ ಕರಗದೋ ಕೃಷ್ಣ ೫

ಆರು ಗತಿ ನಿನಗಧಿಕರಾರು ಧಾರುಣಿಯೊಳಗೆ
ತೋರಿಸೈ ಕರುಣನಿಧಿಯೆ ಕೃಷ್ಣ
ಈರೇಳು ಲೋಕಕಾಧಾರವಾದವಗೆ ಬಲು
ಭಾರವಾದವನೆ ನಾನು ಕೃಷ್ಣ

ವಿಹಾರಿ ನುಡಿಯಲು ಹದಿನಾರೆರಡು ಪಲ್ಗ[ಳಂ]
    ಬೇರು ಕಳಕಳಿಯಿತೋ ಕೃಷ್ಣ
ತೋರು ಬಂಕಾಪುರದ ಧಾರುಣಿಪುರವಾಸ
    ವೀರ ನರಸಿಂಹದೇವ ಕೃಷ್ಣ ೬

ಹರಿಯಾತ್ರೆ ಮಾಡಲಿಲ್ಲ ಹರಿಮೂರ್ತಿ ನೋಡಲಿಲ್ಲ
    ಹರಿದಾಸ ಸಂಗವಿಲ್ಲ ಕೃಷ್ಣ
ಹರಿಸ್ಮರಣೆ ಮಾಡಲಿಲ್ಲ ಸುರನದಿಯ ಮಿಾಯಲಿಲ್ಲ
    ಧರಣಿ ಸಂಚರಿಸಲಿಲ್ಲ ಕೃಷ್ಣ
ಅರಿತರಿತು ಮನ ವಿಷಯಕೆರಗಿ ಹರುಷವ ತಾಳಿ
    ಬರಿದಾಯಿತಾಯುವೆಲ್ಲ ಕೃಷ್ಣ
ಮರುತಾಂತರ್ಗತ ಸಿರಿಯರಸ ಹರಿಯೆಂದು
    ಹರುಷಾಬ್ಧಿ ಮಗ್ನನಲ್ಲ ಕೃಷ್ಣ ೭

ಹರಿ ನಾರಾಯಣನೆಂದು ಕರವೆತ್ತಿ ಮುಗಿದೊಮ್ಮೆ ಮೈ
    [ಮರೆದು] ನಟಿಸಲಿಲ್ಲ ಕೃಷ್ಣ
ಹರಿಸ್ಮರಣೆ ಸ್ಮರಿಸಿ ಸಿರಿತುಳಸಿ ಪುಷ್ಪವನು
    ಕರವೆತ್ತಿ ನೀಡಲಿಲ್ಲ ಕೃಷ್ಣ
ಸರ್ವಜ್ಞರಾಯರು ವಿರಚಿಸಿದ ಗ್ರಂಥವನು
    ದರುಶನವೆ ಮಾಡಲಿಲ್ಲ ಕೃಷ್ಣ
ಸ್ಮರಿಸಲಾರದ ಪಾಪ ಸ್ಮರಣೆಪೂರ್ವಕ ಮಾಡಿ
    ಸ್ಥಿರಭಾರನಾದೆನಲ್ಲೋ ಕೃಷ್ಣ ೮

ದುರುಳಜನರೊಡನಾಡಿ ಹರಿಣಾಕ್ಷಿಯರ ಕೂಡಿ
    ಸರಿ ಯಾರು ಎಂದು ತಿರುಗಿ ಕೃಷ್ಣ
ನಿರುತ ಕ್ಷುದ್ರವ [ನೆನೆಸಿ] ನೆರೆದೂರ ಮಾರಿ ಹೆ
    ಗ್ಗೆರೆಗೋಣನಂತೆ ತಿರುಗಿ ಕೃಷ್ಣ
ಪರರ ಅನ್ನವ ಬಯಸಿ ಶರೀರವನೆ ಪೋಷಿಸಿ
    ಶಿರ ಬಲಿದು [ಶಿಲೆಗೆ] ಹಾಯಿದು ಕೃಷ್ಣ
ಶರಣವತ್ಸಲನೆಂಬೊ ಬಿರುದು ಪಸರಿಸುವಂಥ
    ಕರುಣ ಇನ್ನೆಂದಿಗಹುದೊ ಕೃಷ್ಣ ೯

ಉರಿಯೊಳಗೆ ಬಿದ್ದು ಶರೀರವನು ಕಳೆಯಲೊ
ಪರುವತವನೇರ್‍ಯಾರುಳಲೋ ಕೃಷ್ಣ
ಗರಳವುಂಡುವನೆ ಧುಮುಕಿ ಉರಗ ಫಣ ತುಳಿಯಲೊ
ಎರಡೊಂದು ಶೂಲಕ್ಹಾಯಲೋ ಕೃಷ್ಣ
ಕೊರಳಿಗ್ಹಗ್ಗವ ಹಾಕಿ ಮರವೇರಿ ಕರಬಿಡಲೋ
ಕರಗಸದಿ ಶಿರಗೊಯ್ಯಲೋ ಕೃಷ್ಣ
ಕರುಣವಾರುಧಿ ಎನ್ನ ಕರಪಿಡಿದು ಸಲಹದಿರೆ
ಧರೆಯೊಳುದ್ಧರಿಪರ್‍ಯಾರೋ ಕೃಷ್ಣ ೧೦

ಎಷ್ಟು ಹೇಳಲಿ ಎನ್ನ ಕಷ್ಟ ಕೋಟಿಗಳನ್ನು
ಸುಟ್ಟೀಗ [ಬೆಯ್ಸು]ತಿಹವೋ ಕೃಷ್ಣ
ಕಷ್ಟಬಟ್ಟ ಮಗನೆಂದು ದೃಷ್ಟಿ ನೀರೊರೆಸೆನ್ನ
ಪೊಟ್ಟೆಯೊಳ್ಪಿಡಿವರ್‍ಯಾರೋ ಕೃಷ
ಕೃಷ್ಣನಾಮ ವಜ್ರಕ್ಕೆ ಬೆಟ್ಟ ದುರಿತವು ನೀಗಿ
ಧಟ್ಟನೆ ಬಂದು ನೀನು ಕೃಷ್ಣ
ಇಷ್ಟವನು ಸಲಿಸಿ ಗುಟ್ಟಲಿ ಶ್ರೀರಂಗ
ವಿಠಲ್ಲ ಎನ್ನ ಕಾಯೋ ಕೃಷ್ಣ ೧೧

## ೪೮

**ರಾಗ: [ನಾಟಿ] ತಾಳ: ಛಾಪುತಾಳ**

ರಂಗನಾಥನ ನೋಡುವ ಬನ್ನಿ ಶ್ರೀ ಪ.

ರಂಗನ ದಿವ್ಯ ವಿಮಾನದಲ್ಲಿಹನ ಅ.ಪ.

ಕಮನೀಯಗಾತ್ರನ ಕರುಣಾಂತರಂಗನ
ಕಾಮಿತಾರ್ಥವೀವ ಕಲ್ಪವೃಕ್ಷನ
ಕಮಲದಳ ನೇತ್ರನ ಕಸ್ತೂರಿ ರಂಗನ
ಕಾಮಧೇನು ಕಾವೇರಿ ರಂಗನ ೧

ವಾಸುಕಿಶಯನನ ವಾರಿಧಿನಿಲಯನ
ವಾಸುದೇವ ವಾರಿಜನಾಭನ
ವಾಸವಾದಿ ಭಕ್ತ ಹೃದಯಾಂಬುಜದಲ್ಲಿ
ವಾಸವಾಗಿರುತಿಹ ವಸುದೇವಸುತನ ೨

ಮಂಗಳಗಾತ್ರನ ಮಂಜುಳ ಭಾಷನ
ಗಂಗಾಜನಕ ಅಜಜನಕನ
ಸಂಗೀತಲೋಲನ ಸಾಧುಸಮ್ಮತನ
ರಂಗವಿರಲ ರಾಜೀವನೇತ್ರನ ೩

## ೪೯

ರಾಗ : [ಗೂರ್ಜರಿ] ತಾಳ : ಆದಿತಾಳ

ರಂಗಾ ಮನೆಗೆ ಬಾರೊ ಕೃಪಾಂಗ ಶ್ರೀರಂಗ ಪ.

ರಂಗ ಕಲುಷವಿಭಂಗ ಗರುಡ ತು
ರಂಗ ನವಮೋಹನಾಂಗ ಶ್ರೀರಂಗ ಅ.ಪ.

ಪಚ್ಚೆ ಬಾವುಲಿಗಳನು ನಿನ್ನ ಕಿವಿಯೊಳಗಿಟ್ಟು
ಮೆಚ್ಚಿ ಮುದ್ದಾಡುವೆನು
ಹೆಚ್ಚಿದ ವಾಲಿಯನು ಬಾಣದಿ ಚುಚ್ಚಿದ
ಸಪ್ತ ತಾಳಂಗಳನು ಬಿಚ್ಚಿದ
ಸಮುದ್ರವ ಸುತ್ತ ಮುಚ್ಚಿದ
ಎಚ್ಚರಿಕೆಯಲಿ ಲಂಕೆಯನು ಪೊಕು
ಕಿಚ್ಚುಗಳ ಹಚ್ಚಿಸಿದ ಹನುಮನ
ಮೆಚ್ಚಿದ ಖರದೂಷಣರ ಶಿರಗಳ
ಕೊಚ್ಚಿದ ಅಚ್ಯುತಾನಂತ ೧

ಮುತ್ತಿನ ಹಾರವನು ಕಂಠದೊಳಿಟ್ಟು
ಎತ್ತಿ ಮುದ್ದಾಡುವೆನು
ಹತ್ತಿದ ರಥವನು ಮುಂದೊತ್ತಿದ
ಕೌರವರ ಸೇನೆಗೆ ಮುತ್ತಿದ
ಉಭಯರಿಗೆ ಜಗಳವ ಬಿತ್ತಿದ
ಮತ್ತ ಮಾತಂಗಗಳನೆಲ್ಲ
ಒತ್ತರಿಸಿ ಮುಂದೊತ್ತಿ ನಡೆಯುತ
ಇತ್ತರದಿ ನಿಂತ ವರರಥಿಕರ
ಕತ್ತರಿಸಿ ಕಾಳಗವ ಮಾಡಿದ ೨

ಉಂಗುರಗಳನು ನಿನ್ನ ಅಂಗುಳಿಗಿಟ್ಟು
ಕಂಗಳಿಂದಲಿ ನೋಡುವೆ
ಹೆಂಗಳ ಉತ್ತುಂಗದ ಕುಚಂಗಳ
ಆಲಿಂಗಿಸಿದ ಭುಜಂಗಳ
ಕಮಲ ಸಮ ಪಾದಂಗಳ
ಹಿಂಗದೆ ಸ್ಮರಿಸಿದ ಮಾತಂಗನ
ಭಂಗವ ಪರಿಹರಿಸಿ ಬ್ಯಾಗದಿ
ಮಂಗಳ ಸ್ವರ್ಗವನಿತ್ತ ಉ
ತ್ತುಂಗ ವಿಕ್ರಮ ರಂಗವಿಠಲನೆ ೩

## ೫೦

ರಾಗ . ಆನಂದಭೈರವಿ ತಾಳ . ಝಂಪೆತಾಳ

ಲಾಲಿ ಗೋವಿಂದ ಲಾಲಿ ಕೌಸಲ್ಯಾ
ಬಾಲ ಶ್ರೀರಾಮ ಲಾಲಿ ಪ.

ಲಾಲಿ ಮುನಿವಂದ್ಯ ಲಾಲಿ ಜಾನಕೀ
ರಮಣ ಶ್ರೀರಾಮ ಲಾಲಿ ಅ.ಪ.

ಕನಕರತ್ನಗಳಲ್ಲಿ ಕಾಲ್ಗಳನೆ ಹೂಡಿ
ನಾಲ್ಕು ವೇದಗಳನ್ನು ಸರಪಣಿಯ ಮಾಡಿ

ಅನೇಕ ಭೂಮಂಡಲವ ಹಲಗೆಯನು ಮಾಡಿ
ಶ್ರೀಕಾಂತನುಯ್ಯಾಲೆಯನು ವಿರಚಿಸಿದರು ೧

ಆಶ್ಚರ್ಯಜನಕವಾಗಿ ನಿರ್ಮಿಸಿದ
ಪಚ್ಚೆಯ ತೊಟ್ಟಿಲಲ್ಲಿ
ಅಚ್ಯುತಾನಂತನಿರಲು ತೂಗಿದರು
ಮತ್ಸ್ಯಾವತಾರ ಹರಿಯ ೨

ಧರ್ಮಸ್ಥಾಪಕನು ಎಂದು ನಿರವಧಿಕ
ನಿರ್ಮಲ ಚರಿತ್ರನೆಂದು
ಮರ್ಮ ಕರ್ಮಗಳ ಪಾಡಿ ತೂಗಿದರು
ಕೂರ್ಮಾವತಾರ ಹರಿಯ ೩

ಸರಸಿಜಾಕ್ಷಿಯರೆಲ್ಲರು ಜನವಶೀ
ಕರ ದಿವ್ಯರೂಪನೆಂದು
ಪರಮ ಹರುಷದಲಿ ಪಾಡಿ ತೂಗಿದರು
ವರಾಹಾವತಾರ ಹರಿಯ ೪

ಕರಿಕುಂಭಗಳ ಪೋಲುವ ಕುಚದಲ್ಲಿ
ಹಾರ ಪದಕವು ಹೊಳೆಯಲು
ವರ ವರ್ಣನಿಯರು ಪಾಟ ತೂಗಿದರು
ನರಸಿಂಹಾವತಪರ ಹರಿಯ ೫

ಭಾಮಾಮಣಿಯರೆಲ್ಲರು ಯದುವಂಶ
ಸೋಮನಿವನೆಂದು ಪೊಗಳಿ
ನೇಮದಿಂದಲಿ ಪಾಡಿ ತೂಗಿದರು
ವಾಮನಾವತಾರ ಹರಿಯ ೬

ಸಾಮಜವರದನೆಂದು ಅತುಳ ಭೃಗು
ರಾಮಾವತಾರನೆಂದು
ಶ್ರೀಮದಾನಂದ ಹರಿಯ ತೂಗಿದರು
ಪ್ರೇಮಾತಿರೇಕದಿಂದ ೭

ಕಾಮುನಿಗೆ ಕಾಮುನೆಂದು ಸುರಸಾರ್ವ
ಭೌಮು ಗುಣಧಾಮುನೆಂದು
ವಾಮುನೇತ್ರೆಯುರು ಪಾಡಿ ತೂಗಿದರು
ರಾಮಾವತಾರ ಹರಿಯು ೮

ಸೃಷ್ಟಿಯು ಕರ್ತನೆಂದು ಜಗದೊಳಗೆ
ಶಿಷ್ಟ ಸಂತುಷ್ಟನೆಂದು
ದೃಷ್ಟಾಂತರಹಿತನೆಂದು ತೂಗಿದರು
ಕೃಷ್ಣಾವತಾರ ಹರಿಯು ೯

ವೃದ್ಧನಾರಿಯುರೆಲ್ಲರು ಜಗದೊಳಗೆ ಪ್ರ
ಸಿದ್ಧನಿವನೆಂದು ಪೊಗಳಿ
ಬದ್ಧಾನುರಾಗದಿಂದ ತೂಗಿದರು
ಬೌದ್ಧಾವತಾರ ಹರಿಯು ೧೦

ಧಳಧಳಾತ್ಕಾರದಿಂದ ರಂಜಿಸುವ
ಮಲಯುಜಲೇಪದಿಂದ
ಜಲಜಗಂಧಿಯುರು ಪಾಡಿ ತೂಗಿದರು
ಕಲ್ಕ್ಯಾವತಾರ ಹರಿಯು ೧೧

ಕನಕಮುಯ ಖಚಿತವಾದ ತಲ್ಪದಲಿ
ವನಜಭವ ಜನಕನಿರಲು
ವನಜನಾಭನ್ನ ಪಾಡಿ ತೂಗಿದರು
ವನಿತಾಮುಣಿಯುರೆಲ್ಲರು ೧೨

ಪದ್ಮರಾಗವ ಪೋಲುವ ಹರಿ ಪಾದ
ಪದ್ಮವನು ತಮ್ಮ ಹೃದಯು
ಪದ್ಮದಲಿ ನಿಲಿಸಿ ಪಾಡಿ ತೂಗಿದರು
ಪದ್ಮಿನೀ ಭಾಮಿನಿಯುರು ೧೩

ಹಸ್ತ ಭೂಷಣ ಮೆರೆಯುಲು ದಿವ್ಯತರ
ಹಸ್ತಲಾಘವಗಳಿಂದ
ಹಸ್ತಗಳ ಪಿಡಿದುಕೊಂಡು ತೂಗಿದರು
ಹಸ್ತಿನೀ ಭಾಮಿನಿಯುರು ೧೪

ಮತ್ತಗಜಗಾಮಿನಿಯರು ದಿವ್ಯತರ
ಚಿತ್ರ ವಸ್ತ್ರಗಳನುಟ್ಟು
ಚಿತ್ತ ಸಂತೋಷದಿಂದ ತೂಗಿದರು
ಚಿತ್ರಿನೀ ಭಾಮಿನಿಯರು ೧೫

ಕಂಕಣಧ್ವನಿಗಳಿಂದ ರಂಜಿಸುವ
ಕಿಂಕಿಣೀಸ್ವನಗಳಿಂದ
ಪಂಕಜಾಕ್ಷಿಯರು ಪಾಡಿ ತೂಗಿದರು
ಶಂಕಿನೀ ಭಾಮಿನಿಯರು ೧೬

ಚೊಕ್ಕ ಕಸ್ತೂರಿ ಪಂಕದಿಂ ರಂಜಿಸುವ
ಮಕರಿಕಾಪತ್ರ ಬರೆದು
ಲಿಕುಚಸ್ತನಿಯರು ಪಾಡಿ ತೂಗಿದರು
ಅಕಳಂಕ ಚರಿತ ಹರಿಯ ೧೭

ಪಲ್ಲವಾಧರೆಯರೆಲ್ಲ ಈ ಶಿಶುವು
ತುಲ್ಯವರ್ಜಿತನೆನುತಲಿ
ಸಲ್ಲಲಿತಗಾನದಿಂದ ತೂಗಿದರು
ಕಲ್ಯಾಣಿರಾಗದಿಂದ ೧೮

ಆನಂದ ಸದನದೊಳಗೆ ಗೋಪಿಯರು
ಆ ನಂದಸುತನ ಕಂಡು
ಆನಂದಭರಿತರಾಗಿ ತೂಗಿದರು
ಆನಂದ ಭೈರವಿಯಿಂದ ೧೯

ದೇವಾ[ಧಿ]ದೇವನೆಂದು ಈ ಶಿಶುವು
ಭಾವನಾತೀತನೆಂದು
ದೇವಗಂಧರ್ವರ್ಪಾಡಿ ತೂಗಿದರು
ದೇವಗಾಂಧಾರದಿಂದ ೨೦

ನೀಲಘನಲೀಲ ಜೋ ಜೋ ಕರುಣಾಲ
ಪಾಲ ಶ್ರೀಕೃಷ್ಣ ಜೋ ಜೋ
ಲೀಲಾವತಾರ ಜೋ ಜೋ ಪರಮಾತ್ಮ
ಬಾಲ ಗೋಪಾಲ ಜೋ ಜೋ ೨೧

ಇಂದುಧರಮಿತ್ರ ಜೋ ಜೋ ಶ್ರೀಕೃಷ್ಣ
ಇಂದು ರವಿ ನೇತ್ರ ಜೋ ಜೋ
ಇಂದು ಕುಲ ಪುತ್ರ ಜೋ ಜೋ ಪರಮಾತ್ಮ
ಇಂದಿರಾರಮಣ ಜೋ ಜೋ ೨೨

ತುಂಗ ಭವಭಂಗ ಜೋ ಜೋ ಪರಮಾತ್ಮ
ರಂಗ ಕೃಪಾಂಗ ಜೋ ಜೋ
ಮಂಗಳಾಪಾಂಗ ಜೋ ಜೋ ಮೋಹನಾಂಗ
ರಂಗವಿಠಲನೆ ಜೋ ಜೋ ೨೩

## ೫೧

ರಾಗ: ಭೈರವಿ ತಾಳ: ರೂಪಕ

ವಂದನೆ ಮಾಡಿರೈ ಯತಿಕುಲಚಂದ್ರನ ಪಾಡಿರೈ ಪ.

ಬಂದ ದುರಿತಗಳ ಹಿಂದೆ ಕಳೆದು ಆ
ನಂದಪಡುವ ವಿಬುಧೇಂದ್ರ ಕರೋದ್ಭವರ ಅ.ಪ.

ರಘುಕುಲವರಪುತ್ರ ರಾಮನಚರಣ ಕರುಣಾಪಾತ್ರ
ನಿಗಮೋಕ್ತಿಯ ಸೂತ್ರಪಾರ ಪ್ರವಚನರತ
ಸಂಗುಣಜಿತಾಮಿತ್ರ ನಗಧರ ಶ್ರೀ ಪನ್ನಗಶಯನನ ಗುಣ
ಪೊಗಳುವ ಅಪಾರ ಅಗಣಿತಮಹಿಮರ ೧

ವರಮಹಾತ್ಮೆತಿಳಿಸಿ [ಮೊದಲಿಂ ಧರೆ ಆನಂದದಿ] ಚರಿಸಿ
ನಿರುತ ಮನವ ನಿಲಿಸಿ ಶ್ರೀಹರಿ ಕರಿವರದನ ಒಲಿಸಿ
ಧರೆಜನರಿಗೆ ಅರಿಯದೆ ಮರೆಯಾಗುತ
ಹರುಷದಿ ಗೋನದತರುವಲ್ಲಿರುವವರ ೨

ಮುಂದದಿ ಕೃಷ್ಣಾತಟಿಯ ಮಧ್ಯದಿ ಸದನದ ಪರಿಯ
ಸದಮಲ ಯತಿವರ್ಯ ತಪಮೌನದ[ಲಿದ್ದುದನರಿಯ]
ಒದಗಿ ನದಿಯು ಸೂಸುತ ಬರಲೇಳುದಿನ
ಕುದಯಾದವರ ಸಂಪದ ಕಮಲಂಗಳ ೩

ಮಾಸಮಾರ್ಗಶೀರ್ಷಾರಾಧನೆಗಶೇಷ ದಿನ ಅಮಾ
ವಾಸ್ಯ ದಾಸರು ಪ್ರತಿವರುಷಮಾಳ್ಪರು
ಲೇಸೆನಲು ಶ್ರುತಿಘೋಷ ಕಾಶಿಕ್ಷೇತ್ರಕೆ ಈ ಸ್ಥಳ ಮಿಗಿಲೈ
ದಾಸಜನಕೆ ಭೂರುಹಯುತಿ ಪದಗಳ ೪

ಮಧ್ವಶಾಸ್ತ್ರ ಗ್ರಂಥಸಾರದ ಪದ್ಧತಿ ತಿಳಿದಂಥ
ಅದ್ವೈತಪಂಥ ಮುರಿದು ಮತ ಉದ್ಧರಿಸಿದಂಥ
ರುದ್ರವಂದ್ಯಮೂರುತಿ ರಂಗವಿಠಲನ ಪದ
ಪದ್ಮಾರಾಧಕ ಪ್ರಸಿದ್ಧಮುನೀಂದ್ರರ ೫

೫೨

ರಾಗ: ಆಹರಿ ತಾಳ: ಝಂಪೆತಾಳ

ವನಜನಯನನ ಮನವ ಮಧುವ ನಂಬುವರೆ
ಮನದೆಗೆದ ಮದನಪಿತ ವಿಠಲರೇಯಾ ಪ.

ಅರಿಯದ ಬಾಲೇರಿಗೆ ತನ್ನ ಪರಿಯನರುಹಿಸಿ ಮುನ್ನ
ನೆರೆದು ರತಿಪತಿಯ ಸುಖ ನೆರೆದೋರಿದ
ತೊರೆದು ಬದುಕುವೆವೆಂತೋ ರತಿಪತಿಯ ಪಿತನಗಲಿ
ವಿರಹದುರಿ ತಾನಳವಡರಿ ಸುಡುತಿಹು[ದು] ೧

ನಡೆ ನಗೆಯ ತುದಿನೋಟ ಬಲೆಯನೆಮ್ಮೊಳು ಬೀಸಿ
ಬಿಡದೆಯೆಮ್ಮನು ತನ್ನ ವಶಮಾಡಿದ
ಪಡಿಯಿಲ್ಲದನುಭವದ ಸುಖದ ಸವಿಯನೆ ತೋರಿ
ಮಡದಿ ತಡೆದಳೊ ಮಧುರೆಯಲಿ ನಲ್ಲನ ೨

ಎಂದೆಂದು ನಿಮ್ಮ ವಶದಲ್ಲಿಹೆನೆಂದಭಯವಿತ್ತು
ಇಂದುಮುಖಿ ನಾರಿಯರ ನೆರೆ ನಂಬಿಸಿ
ನಂದನಂದನ ನಮ್ಮ ಕಾನನದೊಳೀಡ್ಯಾಡಿ
ಇಂದು ಮಧುರೆಯ ನಾರಿಯರ ನೆಚ್ಚಿದ ೩

ಇವನ ವಚನದ ಕಪಟ ತಿಳಿಯಲರಿಯದೆ ನಾವು
ನವ ಹರಿಣಿಯಂತೆ ಮರುಳಾಗಿ ಕೇಳಿ

ವಿವರವರಿಯದೆ ನಾವು ಕಡು ನೊಂದೆವೆಲೊ ಮಧುಪ
ಇವನ ಗುಣವರಿಯದೆ ಕಡುಕರುಣಿ ಎಂಬುವರು ೪

ಪತಿಸುತರ ಭವಬಂಧನಗಳೆಲ್ಲ ಈಡ್ಯಾಡಿ
ಗತಿ ನಮಗೆ ಅವನೆಂದು ಮನ ಸೋತೆವೋ
ಕೃತಕವರಿಯದೆ ನಮ್ಮ ವನದೊಳು ನಿಲ್ಲಿಸಿ ಪೋದ
ಪತಿಯೊಡನೆ ಸಂಧಾನವೆಂತೊ ಎಲೊ ಮಧುಪ ೫

ಮರುಳುಗಳು ನಾವು ಶ್ರೀಪತಿಯ ಕೊಟವ ಬಯಸಿ
ಇರುಳು ಹಗಲು ಜರಿಜರಿದಳಲುವೆ[ವು]
ಸಿರಿಯವನ ಉಂಗುಟದ ಉಗುರು ಗುಣ ಕಾಣಳೆಲೋ
ಹರಿ ನಮ್ಮ ನೆನೆವುದಚ್ಚರಿಯಲ್ಲವೆ ೬

ತುಂಗಗುಣನಿಲಯ ಅಂಗಜನ ಪಿತನೆಂದು
ರಂಗನಿಗೆ ಮನಸೋತು ಮರುಳಾದೆವೋ
ಹಿಂಗಿ ಬದುಕುವುದೆಂತೋ ಭೃಂಗ ಮಧುರೆಗೆ ಪೋಗಿ
ರಂಗವಿರಲನ ತಂದೆಮ್ಮನುಳುಹುವುದೋ ೭

## ೫೩

ರಾಗ ತೋಡಿ ತಾಳ · ಛಾಪುತಾಳ

ವಿಧಿಗೆ ದಯವಿಲ್ಲವಕ್ಕ ಎಮ್ಮ ಮ್ಯಾಲೆ ಪ.

ಯದುಪತಿಯನಗಲಿಸಿದ ಒಮ್ಮೆಂದಲೊಮ್ಮೆ ಅ.ಪ.

ಎವೆಯ ಮರೆಯ ಮಾಡಿ ಪೋದ ಯಾಕೋ ವಿಧಿಯೋ
ಸುಳಿಗುರುಳು ಕಡೆಗಣ್ಣ ನೋಟದಿಂದಲಿ
ಕವಕವಿಸಿ ನಗುವ ಮುದ್ದು ಮುಖವನು
ತವಕದಿಂದ ಮರಳಿ ಮರಳಿ ನೋಡ[ದ್ಯೋ]ದೆವೆ ೧

ಹಕ್ಕಿಯ ಮ್ಯಾಲುಳ್ಳ ದಯ ನಮ್ಮ ಮ್ಯಾಲೆ
ಇಕ್ಕದೇಕೆ ಹೋದ್ಯೋ ವಿಧಿಯೋ
ರೆಕ್ಕೆ ಎರಡುಳ್ಳರೆ ಮಧುರೆಗೆ ಪೋಗಿ
ಘಕ್ಕನೆ ಶ್ರೀಹರಿಯೊಡನೆ ಕೂಡುತಿದ್ದೆವಲ್ಲ ೨

ತಂಗೀ ನಮ್ಮೆದೆಯು ಕಲ್ಲಾಗಿ ಇದ್ದೇವೆ
ಹಿಂಗುವರೆ ಸಖಿಯರು ಒಮ್ಮೊಂದಲೊಮ್ಮೆ
ರಂಗವಿರಲನ್ನ ಅಂಗ ಸಂಗವ ಬಿಟ್ಟು ಇಂಥ
ಭಂಗಜೀವ ಸುಡಸುಡಸುಡಲ್ಯಾತಕೋ ೩

೫೪

ರಾಗ [ಗುಂಡಕ್ರಿಯೆ] ತಾಳ ಆದಿತಾಳ

ವೃಷಭನೇರಿದ ವಿಷಧರನ್ಯಾರೆ ಪೇಳಮ್ಮಯ್ಯ ಪ.

ಹಸುಳೆ ಪಾರ್ವತಿಯು ತಪಸಿಗೆ ಮೆಚ್ಚಿದ
ಜಟಾಮಂಡಲಧಾರಿ ಕಾಣಮ್ಮ ಅ.ಪ.

ಕೈಲಾಸಗಿರಿಯ ದೊರೆಯಿವನಮ್ಮ - ಅದು ಅಲ್ಲದೆ ಕೇಳೆ
ಬೈಲು ಸ್ಮಶಾನದಿ ಮನೆಯಿವಗಮ್ಮ - ಸಂಕರ್ಷಣನೆಂದು
ಕೇಳೆ ಮಹಿಯೊಳು ಜನಪೊಗಳುವರಮ್ಮ - ಇದು ನೈಜವಮ್ಮ
ನಾಲಿಗೆ ಸಾಸಿರ ಫಣಿಭೂಷಣನಮ್ಮ
ರಮೆಯರಸಗೆ ಇವ ಮೊಮ್ಮಗನಮ್ಮ ೧

ಬಾಲೆ ದಾಕ್ಷಾಯಣಿ ಪತಿ ಇವನಮ್ಮ - ಮಾವನ ಯಾಗದಲಿ
ಬ್ಹಾಳ ಕೃತ್ಯಗಳನು ನಡೆಸಿದನಮ್ಮ - ಸಾಗರದಲಿ ಹುಟ್ಟಿದ
ಕಾಳಕೂಟವ ಭಕ್ಷಿಸಿದನಮ್ಮ - ರಾಮನ ದಯವಮ್ಮ
ಮೇಲೆ ಉಳಿಯಲು ಶೇಷಗರಳವು
ನೀಲಕಂಠನೆಂದೆನಿಸಿದನಮ್ಮ ೨

ಹರನೊಂದಿನ ವೈಕುಂಠಕೆ ಬರಲು— ತಾತಗೆ ವಂದಿಸುತ
ತರುಣೀರೂಪವ ನೋಡೇನೆನಲು— ಹರಿ ತಾ ನಸುನಗುತ
ಕರೆದು ಸ್ಮೈರಿಸಲಾರೆ ನೀ ಎನಲು— ಹರದಿ ಕುಳ್ಳಿರಲು
ಕರುಣಿಗಳರಸನು ಹರನ ಮೊಗವ ನೋಡಿ
ಅರುಣೋದಯಕೆ ಬಾರೆಂದು ಕಳುಹಿದ ೩

ಅರುಣೋದಯಕೆ ಗಂಗಾಧರ ಬರಲು– ಹದಿನಾರು ವರುಷದ
ತರುಣೀರೂಪದಿ ಹರಿ ವನದೊಳಗಿರಲು– ಚರಣನಖಾಗ್ರದಿ
ಧರಣೀ ಬರೆಯುತ್ತ ನಿಂತಿರಲು– ಸೆರಗ ಪಿಡಿಯೆ ಬರಲು
ಕರದಿ ಶಂಖ ಗದೆ ಚಕ್ರವ ತೋರಲು
ಹರನು ನಾಚಿ ತಲೆತಗ್ಗಿಸಿ ನಿಂತ ೪

ಮಂಗಳಾಂಗನೆ ಮಾರಜನಕ- ನಾ ಮಾಡಿದ ತಪ್ಪ
ಹಿಂಗದೆ ಕ್ಷಮಿಸೊ ಯದುಕುಲ ತಿಲಕ- ವಕ್ಷದಲೊಪ್ಪುವ ನಿ
ನ್ನಂಗನೆ ಅರಿಯಳು ನಖಮುಹಿಮಾಂಕ- ಹೀಗೆನುತಲಿ ತವಕ
ರಂಗವಿಠಲನ ಪದಂಗಳ ಪಿಡಿದು ಸಾ
ಷ್ಟಾಂಗವೆರಗಿ ಕೈಲಾಸಕೆ ನಡೆದ ೫

## ೫೫

ರಾಗ : [ಧನ್ಯಾಸಿ] ತಾಳ ರೂಪಕತಾಳ

ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ ಪ.

ತೀರ್ಥಪಾದರ ಭಜಿಸಿ ಕೃತಾರ್ಥನಾಗದವನ ಜನ್ಮ ಅ.ಪ.

ಅರುಣ ಉದಯದಲ್ಲಿ ಎದ್ದು ಸರಿತದಲಿ ಸ್ನಾನವ ಮಾಡಿ
ಅರಳುಮಲ್ಲಿಗೆ ಮಾಲೆ ಹರಿಯ ಚರಣಕರ್ಪಿಸದವನ ಜನ್ಮ ೧

ಒಂದು ಶಂಖ ಉದಕ ತಂದು ಚಂದದಿಂದ ಹರಿಗೆ ಎರೆದು
ಗಂಧ ಪುಷ್ಪದಿಂದ ಹರಿಯ ವಂದನೆ ಮಾಡದವನ ಜನ್ಮ ೨

ಮುಗುಳುತೆ[ನೆ]ಯಲೆಸೆವ ತುಳಸಿದಳ[ವ] ತಂದು ಪ್ರೇಮದಿಂದ
ಜಗನ್ಮಯಗೆ ಅರ್ಪಿಸಿ ಕರವ ಮುಗಿದು ಸ್ತುತಿಸದವನ ಜನ್ಮ ೩

ಭೋಗಿಶಯನನ ದಿನದಿ ಸಕಲ ಭೋಗಗಳನು ತಾನು ತೊರೆದು
ಭಾಗವತರ ವ್ಯಾಳದಿಂದ ಜಾಗರಣೆ ಮಾಡದವನ ಜನ್ಮ ೪

ಜಂಗಮರೊಳಗಧಿಕವೆನಿಪ ಭಂಗುರ ಮನುಷ್ಯದೇಹ ಪಡೆದು
ರಂಗವಿಠಲನೆನಿಪ ಪಕ್ಷಿಮರಂಗಗರ್ಪಿಸದವನ [ಜನ್ಮ] ೫

೫೬

ರಾಗ : ಕಲ್ಯಾಣಿ ತಾಳ · ಅಟ್ಟತಾಳ

ಸದ್ದುಮಾಡಲು ಬೇಡವೊ– ನಿನ್ನ ಕಾಲಿಗೆ
ಬಿದ್ದು ನಾ ಬೇಡಿಕೊಂಬೆ ಪ.

ನಿದ್ದೆಗೆಯ್ಯುವರೆಲ್ಲ ಎದ್ದರೆ ನೀನು ಬಂ
ದಿದ್ದುದ್ದು ಕಂಡರೇನೆಂಬುವರೊ ರಂಗ ಅ.ಪ.

ಬಳೆ ಘಲ್ಲುಕೆನ್ನದೇನೊ– ಕೈಯ ಪಿಡಿದು
ಎಳೆಯದಿರೊ ಸುಮ್ಮನೆ
ಮೊಲೆಗಳ ಮೇಲಿನ ಸೆರಗನೆಳೆಯಲು ಕೊ
ರಳ ಪದಕಂಗಳು ಧ್ವನಿಗೆಯ್ಯುವುವೊ ರಂಗ ೧

ನಿರುಗೆಯ ಪಿಡಿಯದಿರೊ– ಕಾಂಚಿಯ ದಾಮ
ಕಿರುಗಂಟೆ ಧ್ವನಿಗೆಯ್ಯದೆ
ಕಿರುದುಟಿಗಳ ನೀನು ಸವಿದು ಚಪ್ಪರಿಸಲು
ತರವಲ್ಲ ಗಂಡ ಮತ್ಸರವ ತಾಳುವನಲ್ಲ ೨

ನಾಡಮಾತುಗಳೇತಕೊ– ಸಂಗೀತವ
ಪಾಡುವ ಸಮಯವೇನೊ
ಗಾಡಿಕಾರ ಶ್ರೀರಂಗವಿಠಲನೆ
ಪಾಡುಪಂಥಗಳೊಡಗೂಡುವ ಸಮಯದಿ ೩

೫೭

ರಾಗ . ಮೋಹನ ತಾಳ : ಛಾಪುತಾಳ

ಸರಸಿಜಾಕ್ಷ ಸರಸದಿಂದ ಸರಸಿಜೋದ್ಭವಗೊಲಿದು ಬಂದ ಪ.

ಉರಸಿನ ಮ್ಯಾಲೆ ಸರಸಿಜಾಕ್ಷಿಯನಿರಿಸಿ ಬಂದ ಅ.ಪ.

ಧೀರ ಶರಧಿಗಂಭೀರ ವರಘನಸಾರ ಕಸ್ತೂರಿ ತಿಲಕಧರ
ಹೀರ ಮೌಕ್ತಿಕ ಕೇಯೂರ ಧರಿಸಿದ ನವನೀತ ಚೋರ ಬಂದ ೧

ನಂದ ಗೋಪಿ[ಗಾ]ನಂದ[ವ]ಡಿದ ಕಂದ ಗೋಕುಲದಿ ಬಂದ
ಅಂದದಿಂದ ಸೌಂದರಿಯರ ಗೋವಿಂದ ಮುಕುಂದ ೨

ಅಂಗನೆಯುರ ಕುಚಗಳಾಲಿಂಗನವ ಮಾಡಿ ನವಮೋಹನಾಂಗ
ರಂಗವಿಠಲ[ನು] ನಮ್ಮಂತರಂಗದೊಳಗಿಹ ಕಲ್ಮಷಭಂಗ ೩

೫೮

ರಾಗ : [ಮಾಲವ ಶ್ರೀ] ತಾಳ : ಏಕತಾಳ

ಸಾಸಿರ ಜಿಹ್ವೆಗಳುಳ್ಳ ಶೇಷನೆ ಕೊಂಡಾಡಬೇಕು
ವ್ಯಾಸಮುನಿರಾಯರ ಸಂನ್ಯಾಸದಿರವ ಪ.

ಆಸೆಯಿಂದ ತಮ್ಮುದರ ಪೋಷಣಕಾಗಿ ಛಪ್ಪನ್ನ
ದೇಶವ ತಿರುಗಿ ಸಂಚಾರ ಮಾಡುತ
ವಿಶಾಸಲ ಮಡಿ ಬಚ್ಚಿಟ್ಟು ಮಿಂಚುಕೂಳನುಂಡು ದಿನ
ಮೋಸಮಾಡಿ ಕಳೆವ ಸಂನ್ಯಾಸಿಗಳ ಸರಿಯೆ ೧

ಕೆರೆ ಬಾವಿ ಪುರ ಅಗ್ರಹಾರಂಗಳ ಮಾಡಿ ಭೂ
ಸುರರೊಂದು ಲಕ್ಷ ಕುಟುಂಬಗಳ
ಪೊರೆವ ವೈಭವ ಕೀರ್ತಿಯಿಂದಲಿ ವ್ಯಾಸರಾ
ಯರ ಗುಣಗಣ ಗಾಂಭೀರ್ಯಾದಿಗಳ ೨

ಹಗಲಿರುಳೆನ್ನದೆ ಆವಾಗ ಶ್ರೀಹರಿ ಪದಪದ್ಮ
ಯುಗಳವನರ್ಚಿಸಿ ಭಕುತಿಯಿಂದ
ರಘುಪತಿಭಜಕ ಬ್ರಹ್ಮಣ್ಯತೀರ್ಥರ ಕುವರ
ರಂಗವಿಠಲನನ್ನು ಬಿಡೆಬಿಡೆನು ಎಂಬ ೩

೫೯

ರಾಗ : [ನಾರಾಯಣಿ] ತಾಳ . ಆದಿತಾಳ

ಸುಮ್ಮನೆ ವೈಷ್ಣವನೆಂಬಿರಿ ಪರ
ಬೊಮ್ಮ ಸುಜ್ಞಾನವನರಿಯದ ಮನುಜನ ಪ.

ಮುಖವ ತೊಳೆದು ನಾಮವನಿಟ್ಟೆನಲ್ಲದೆ
ಸುಖತೀರ್ಥ ಶಾಸ್ತ್ರವನೋದಿದೆನೆ
ಸುಖಕೆ ಶೃಂಗಾರಕೆ ಮಾಲೆ ಹಾಕಿದೆನಲ್ಲದೆ
ಭಕುತಿ ರಸದಲ್ಲಿ ಮುಳುಗಿದೆನೇನಯ್ಯ ೧

ಊರು ಮಾತುಗಳಾಡಿ ದಣಿದೆನಲ್ಲದೆ
ನಾರಾಯಣ ಕೃಷ್ಣ ಶರಣೆಂದೆನೆ
ನಾರಿಯ ನುಡಿ ಕೇಳಿ ಮರುಳಾದೆನಲ್ಲದೆ
ಗುರುಹಿರಿಯರ ಮಾತ ಮನ್ನಿಸಿದೆನೇನಯ್ಯ ೨

ನರೋತ್ತಮರಿಗಧಿಕ ಗಂಧರ್ವರಿಗಧಿಕ
ಸುರೇಂದ್ರಗಧಿಕ ಹರಗಧಿಕ
ವಿರಿಂಚಿಗಧಿಕ ಸಿರಿಗಧಿಕ
ಹರಿ ಸರ್ವೋತ್ತಮನೆಂದು ತಿಳಿದೆನೇನಯ್ಯ ೩

ಜಗತು ಸತ್ಯವೆಂದು ಪಂಚಭೇದವ ತಿಳಿದು
ವಿಗೆ ರಾಗದ್ವೇಷಂಗಳನು ವರ್ಜಿಸಿ
ಭಗವಂತನ ಲೀಲೆ ಶ್ರವಣ ಕಥೆಗಳಿಂದ
ನಿಗಮಗೋಚರನೆಂದು ತಿಳಿದೆನೇನಯ್ಯ ೪

ಗಂಗೆ[ಯಲಿ] ಮೈಮಣ್ಣ ತೊಳೆ[ದೆ]ನಲ್ಲದೆ ಭವ
ಹಿಂಗುವ ಸ್ನಾನವ ಮಾಡಿದೆನೆ
ರಂಗವಿಠಲನ ನಿಜವಾದ ದಾಸರ
ಸಂಗ ಸುಖವೆಂದು ತಿಳಿ[ದೆ]ನೇನಯ್ಯ ೫

## ೬೦

ರಾಗ : ಭೈರವಿ ತಾಳ : ಆದಿತಾಳ

ಸ್ಮರಿಸಿದವರನು ಕಾಯ್ವ ನಮ್ಮ ಸೂರ್ಯಾನೇಕ ಪ್ರಭಾವ
ಸುರಮುನಿಗಳ ಸಂಜೀವ ಶ್ರೀ ವೆಂಕಟ ನಮ್ಮನು ಪೊರೆವ ಪ.

ವೈಕುಂಠದಿಂದ ಬಂದು ಶೇಷಾಚಲದಲಿ ನಿಂದು
ಭಕ್ತರ ಪಾಲಿಪೆನೆಂದು ಅಭಯ ದಯಾಕರ ಸಿಂಧು
ಭಕುತಿ ಮುಕುತಿಯೀವ ಮತ್ಕುಲದೇವನೆ
ಸಕಲ ಜನಸೇವಿತ ಘನ ಪರಿಪೂರ್ಣ[ನೆ]
ವಿಕಸಿತ ಕಮಲನಯನ ಕಂಜನಾಭನೆ
ಪ್ರಕಟಿತ ಶುಭಕೀರ್ತಿಯಿಂದ ಮೆರೆವನೆ ೧

ಜ್ಞಾನಿಗಳ ಗೋಚರನೆ ತನ್ನ ಧ್ಯಾನಿಪರ ಮನೋಹರನೆ
ದಾನವರ ಸಂಹರನೆ ಮಹಾದ್ಯೈನ್ಯಾದಿಗಳುದ್ಧರನೆ
ಆನಂದಮಯನೆ ಅನೇಕಾವತಾರನೆ
ಅನುದಿನ ನೆನೆವರ ಹೃದಯಮಂದಿರನೆ
ಘನಮಾಣಿಕ ಭೂಷಣ ಶೃಂಗಾರನ
ತನುವಿನ ಕ್ಲೇಶ ದುರಿತಸಂಹರನೆ ೨

ಜಯತು ದೋಷವಿನಾಶ ಜಯ ಮಹಿಮಾ ವಿಶೇಷ
ಜಯತು ಲಕುಮಿಾ ಪರಿತೋಷ ಜಯ ಶ್ರೀ ವೆಂಕಟೇಶ
ಜಯ ಕಮಲಜಜನಕನೆ ಜಯ ಜಗದೀಶ
ಜಯ ಗಜವರದ ಪಾಲಿತ ಪುಣ್ಯಘೋಷ
ಜಯತು ಜನಾರ್ದನ ಜಗನ್ಮೋಹನ ವೇಷ
ಜಯ ರಂಗವಿಠಲಕರುಣಾವಿಲಾಸ ೩

## ೬೧

ರಾಗ · [ಬೌಳಿ] ತಾಳ ಝಂಪೆತಾಳ

ಹರಿಹರರು ಸರಿಯೆಂಬ ಮರುಳು ಜನರು
ಹರಿಹರರ ಚರಿತೆಯನು ತಿಳಿದು ಭಜಿಸುವುದು ಪ.

ಸುರರು ಮುನಿಗಳು ಕೂಡಿ ಪರದೈವವಾರೆಂದು
ಅರಿಯಬೇಕೆಂದೆರಡು ವರಧನುಗಳ
ಹರಿಹರರಿಗಿತ್ತು ಸಂಗರವ ಮಾಡಿಸಿ ನೋಡೆ
ಮುರಹರನು ಪುರಹರನ ಗೆಲಿದುದರಿಯಾ ೧

ಹರನ ಕುರಿತಸುರ ಮಹತಪವ ಮಾಡಲು ಮೆಚ್ಚಿ
ವರವನವಗಿತ್ತು ಹರ ಬಳಲಿ ಓಡಿಬರಲು
ಹರಿ ಬಂದವನ ಕರವ ಶಿರದ ಮ್ಯಾಲಿರಿಸಿ ಖಳ
ನುರುಹಿ ಹರನನು ಕಾಯಿದ ಕಥೆಯ ನೀನರಿಯಾ ೨

ದೂರ್ವಾಸರೂಪ ಹರನಂಬರೀಷನ [ಮುಂದೆ]
ಗರ್ವವನು [ಮೆರೆ]ಸಿ ಜಡೆಯನು ಕಿತ್ತಿಡೆ
ಸರ್ವಲೋಕದೊಳವನ ಚಕ್ರ ನಿಲ[ಲೀ]ಯದಿರೆ
ಉರ್ವೀಶನ[ನು] ನಾರಿ ಉಳಿದನರಿಯಾ ೩

ಹರನಂಶ ದ್ರೋಣಸುತ[ನು] ಪಾಂಡವಾ ಎಂದು
ಉರವಣಿಸಿ ನಾರಾಯಣಾಸ್ತ್ರವನು ಬಿಡಲು
ಹರಿ ಬಂದು ಬೇಗ ತನ್ನಸ್ತ್ರವನು ತಾ ಸೆಳೆದು
ಶರಣಾಗತರ ಕಾಯಿದ ಕಥೆಯನರಿಯಾ ೪

ನರ ನಾರಾಯಣರು ಬದರಿಕಾಶ್ರಮದಲಿರೆ
ಹರನು ಹರಿಯೊಡನೆ ಕದನವನು ಮಾಡೆ
ಹರಿ ಹರನ ಕಂಠವನು ಕರದಲಿ ಪಿಡಿದು ನೂಕೆ
ಕೊರಳ ಕಪ್ಪಾದ ಕಥೆ ಕೇಳಿ ಅರಿಯಾ ೫

ಹರಿ ಸುರರಿಗಮೃತವನು ಎರೆದ ರೂಪ ವನೊಮ್ಮೆ
ಹರ ನೋಡುವೆನೆಂದು ಸಂಪ್ರಾರ್ಥಿಸೆ
ಪರಮ ಮೋಹನ ರೂಪಲಾವಣ್ಯವನು ಕಂಡು
ಹರ ಮರುಳುಗೊಂಡ ಕಥೆ ಕೇಳಿ ಅರಿಯ ಶಾ ೬

ಹರಿಯು ಮೊಮ್ಮನ ಬಾಣಾಸುರನು ಸೆರೆವಿಡಿಯೆ
ಗರುಡವಾಹನನಾಗಿ ಕೃಷ್ಣ ಬಂದು
ಹರನ ಧುರದಲಿ ಜಯಿಸಿ ಆವನ ಕಿಂಕರನ ಸಾ
ವಿರ ತೋಳುಗಳ ತರಿದ ಕ[ಥೆ]ಯು ನೀನ ರಿಯಾ ೭

ಸುರತರುವ ಕಿತ್ತು ಹರಿ ಸುರಲೋಕದಿಂದ ಬರೆ
ಹರನು ಹರಿಯೊಡನೆ ಕದನವನು ಮಾಡೆ
ತರಹರಿಸಲಾರದೋಡಿದ ಕಥೆಯು ನೀನೊಮ್ಮೆ
ಹಿರಿಯರ ಮುಖದಿ ಕೇಳಿ ನಂಬು ಹರಿಯಾ ೮

ಹರಸುತನು (?) ತಪದಿಂದ ಹರಿಯು ಚಕ್ರವ ಬೇಡೆ
ಪರಮ ಹರುಷದಲಿ ಚಕ್ರವನೀಯಲು
ಭರದಿಂದ ಧರಿಸಲಾರದೆ ಚಕ್ರವನಂದು
ಹರನು ಭಂಗಿತನಾದನೆಂದರಿಯಲಾ ೯

ರಾವಣಾಸುರ ಕುಂಭಕರ್ಣ ನರಕಾದಿಗಳು
ಶೈವತಪವನು ಮಾಡಿ ವರವ ಪಡೆಯೆ
ಅವರುಗಳನು ವಿಷ್ಣು ನರರೂಪಿನಿಂದರಿದು
ದೇವರ್ಕಳನು ಕಾಯಿದ ಕಥೆಯು ನೀನರಿಯಾ ೧೦

ಗಂಗಾಜನಕನ ಸನ್ಮಂಗಲ ಚರಿತ್ರಗಳ
ಹಿಂಗದಲೆ ಕೇಳಿ ಸುಖಿಸುವ ಜನರಿಗೆ
ಭಂಗವಿಲ್ಲದ ಪದವನಿತ್ತು ಸಲಹುವ ನಮ್ಮ
ರಂಗವಿಠಲರಾಯನ ನೆರೆ ನಂಬಿರೋ ೧೧

## ೬೨

ರಾಗ ನಾದನಾಮಕ್ರಿಯೆ ತಾಳ ಏಕತಾಳ

ಹರೇ ವೆಂಕಟಶೈಲವಲ್ಲಭ
ಪೊರೆಯಬೇಕು ಎನ್ನ ಪ.

ದುರಿತದೂರ ನೀನಲ್ಲದೆ ಧರೆಯೊಳು
ಪೊರೆವರ ನಾ ಕಾಣೆ ನಿನ್ನಾಣೆ ಅ.ಪ.

ಆರು ನಿನ್ನ ಹೊರತೆನ್ನ ಪೊರೆವರು
ನೀರಜಾಕ್ಷ ಹರಿಯೆ ಅ
ಪಾರಮಹಿಮ ಪುರಾಣಪುರುಷ
ಘೋರ ದುರಿತಗಳ ದೂರ ಮಾಡಿಸೋ ೧

ಇಂದಿರೇಶ ಅರವಿಂದನಯನ ಎನ್ನ
ತಂದೆ ತಾಯಿ ನೀನೆ
ಹೊಂದಿದವರ ಅಘವೃಂದ ಕಳೆವ
ಮಂದರಾದ್ರಿಧರನೇ ಶ್ರೀಧರನೆ ೨

ಮಂಗಳಾಂಗ ಮಹನೀಯ ಗುಣಾರ್ಣವ
ಗಂಗೋದಿತ ಪಾದ
ಅಂಗಜಪಿತ ಅಹಿರಾಜಶಯ್ಯ ಶ್ರೀ
ರಂಗವಿಠಲ ದೊರೆಯೋ ಶ್ರೀ ಹರಿಯೋ ೩

೧

ರಾಗ : ವಸಂತ ತಾಳ : ತ್ರಿಪುಟತಾಳ

ನಾ ನಿನಗೇನು ಬೇಡುವುದಿಲ್ಲ ಎನ್ನ
ಹೃದಯ ಕಮಲದೊಳು ನಿಂದಿರೊ ಹರಿಯೆ ಪ.

ಶಿರ ನಿನ್ನ ಚರಣದಲ್ಲೆರಗಲಿ ಎನ್ನ
ಚಕ್ಷುಗಳು ನಿನ್ನ ನೋಡಲಿ ಹರಿಯೆ
ಕರ್ಣ ಗೀತಂಗಳ ಕೇಳಲಿ ಎನ್ನ
ನಾಸಿಕ ನಿರ್ಮಾಲ್ಯ ಘ್ರಾಣಿಸಲಿ ಹರಿಯೆ ೧

ನಾಲಿಗೆ ನಿನ್ನ ಕೊಂಡಾಡಲಿ ಎನ್ನ
ಕರಗಳೆರಡು ನಿನಗೆ ಮುಗಿಯಲಿ ಹರಿಯೆ
ಪಾದ ತೀರ್ಥಯಾತ್ರೆ ಹೋಗಲಿ ನಿನ್ನ
ಧ್ಯಾನ ಎನಗೊಂದು ಕೊಡು ಕಂಡ್ಯ ಹರಿಯೆ ೨

ಬುದ್ಧಿ ನಿನ್ನೊಳು ಕುಣಿದಾಡಲಿ ಎನ್ನ
ಚಿತ್ತ ನಿನ್ನಲಿ ನಲಿದಾಡಲಿ ಹರಿಯೆ
ಭಕ್ತಜನರ ಸಂಗವು ದೊರಕಲಿ ರಂಗ
ವಿಠಲ ನಿನ್ನ ದಯವಾಗಲಿ ಹರಿಯೆ ೩

೨

ರಾಗ : ಕಲ್ಯಾಣಿ ತಾಳ : ಅಟ್ಟತಾಳ

ಸದ್ದು ಮಾಡಲಿ ಬ್ಯಾಡವೋ ನಿನ್ನ ಕಾಲಿಗೆ
ಬಿದ್ದು ನಾ ಬೇಡಿಕೊಂಬೆ ಪ.

ನಿದ್ರೆಗೈವರೆಲ್ಲ ನೀ ಬಂದುದ ಕಂಡು ನೀ
[ಪೆ]ದ್ದಿ ಎಂಬರು ಕಾಣೋ ಅ.ಪ.

ಬಳೆ ಘಲುಕೆನುತಲಿದೆ ಎನ್ನ ಕೈಯ
ಸುಮ್ಮನೆ ಪಿಡಿವರೇನೋ

ಮೊಲೆಗಳ ಪಿಡಿದು ನೀ ಎಳೆಯುವಾಗ
ಕೊರಳೊಳಗಿನ ಹಾರ ತೆರಳುತಲಿದೆ ೧

ನೆರಿಗೆಯು ತುಡಕದಿರೊ ಕಾಂಚೀದಾಮ
ಉಡಿಘಂಟೆ ಧ್ವನಿದೋರ್ಯಾವೋ
ತೊರೆದ ಕೆಂದುಟಿಗಳ ಸವಿದು ಚಪ್ಪರಿ[ಪುದು]
ತರವಲ್ಲ ಗಂಡ ಎಚ್ಚತ್ತು ತಾಳುವನಲ್ಲ ೨

ನಾಡು ಮಾತುಗಳ್ಯಾತಕೊ ಸಂಗೀತವ
ಪಾಡುವ ಸಮಯವೇನೋ
ಗಾಡಿಕಾರ ಶ್ರೀರಂಗವಿಠಲನ್ನ
ಪಾಡಿ ಪಂಥಗಳೊಡಗೂಡುವ ಸಮಯಂದಿ ೩

೧

ಉಗಾಭೋಗ

ಅಂಬರದಾಳವನು ಇನಶಶಿಗಳಲ್ಲದೆ
[ಅಂಬರತಳದಲಾಡುವ] ಪಕ್ಷಿ ತಾವು ಬಲ್ಲವೆ ?
ಜಲದ ಪ್ರಮಾಣವ ತಾವರೆಗಳಲ್ಲದೆ
ಮೇಲಿದ್ದ ಮರ ಗಿಡ ಬಳ್ಳಿಗಳು ತಾವು ಬಲ್ಲವೆ ?
ಮಾವಿನ ಹಣ್ಣಿನ ರುಚಿ ಅರಗಿಳಿಗಳಲ್ಲದೆ
[ಚೀರ್ವ] ಕಾಗೆಗಳು ತಾವು ಬಲ್ಲವೆ ?
ನಿನ್ನ ಮಹಿಮೆ ನಿನ್ನ ಭಕ್ತರು ಬಲ್ಲರು—ಮ
ತ್ತನ್ಯರೇನು ಬಲ್ಲರಯ್ಯ ?
ಭಕ್ತರಾಧೀನನೆ ಭಕ್ತರೊಡೆಯನೆ
ಭಕ್ತರ ಸಲಹಯ್ಯ ನಮೋ ರಂಗವಿಠಲಯ್ಯ *

೨

ಉಗಾಭೋಗ

ಕಲಿಕಾಲಕೆ ಸಮಯುಗವಿಲ್ಲವಯ್ಯ
ಕಲುಷ ಹರಿಸಿ ಕೈವಲ್ಯವೀವುದಯ್ಯ
ಸಲೆ ನಾಮಕೀರ್ತನೆ ಸ್ಮರಣೆ ಸಾಕಯ್ಯ
ಸ್ಮರಿಸಲು ಸಾಯುಜ್ಯ ಪದವೀವುದಯ್ಯ
ಬಲವಂತ ಶ್ರೀರಂಗವಿಠಲನ ನೆನೆದರೆ
ಕಲಿಯುಗವೆ ಕೃತಯುಗವಾಗುವುದಯ್ಯ §

೩

ರಾಗ [ತೋಡಿ] ತಾಳ . ಆದಿತಾಳ

ತಾ ತಾ ತಾ ತಾ ತಾ ರಂಗ ನಿನ್ನ ಪಾದ
ಧೈ ಧೈ ಧೈ ಧೈ ಧೈ ಯೆಂದು ಕುಣಿಯುತ ಪ.

ನಿಗಮವ ತಂದು ನಗವ ಬೆನ್ನಲಿ ಪೊತ್ತು
ಅಗೆದು ಬೇರು ತಿಂದು ಬಾಲನ ಸಲಹಿದೆ ಅಂದು ೧

* ಅಚಲಾನಂದವಿಠಲಾಂಕಿತದಲ್ಲಿಯೂ ದೊರೆಯುತ್ತದೆ.
§ ಪಾಂಡುರಂಗವಿಠಲಾಂಕಿತದಲ್ಲಿಯೂ ದೊರೆಯುತ್ತದೆ.

ಪೊಡವಿ ಈರಡಿ ಮಾಡಿ ಕೊಡಲಿ ಪಿಡಿದು ಮುನಿ
ಮಡದಿಯ ಸಲಹಿದೆ ಎನ್ನೊಡೆಯ ಶ್ರೀಕೃಷ್ಣ ೨

ಅಂಗನೆಯರ ವ್ರತಭಂಗವ ಮಾಡಿ[ದೆ]
ತುಂಗ ಕುದುರೆಯೇರಿದ ರಂಗವಿಠಲನೆ* ೩

೪

ಉಗಾಭೋಗ

ಬರುವುದು ಬುದ್ಧಿಯು ಬಲವು ಕೀರುತಿಯು
ನಿರುತದಿ ಧೈರ್ಯವು ನಿರ್ಭಯತ್ವವು
ಆರೋಗಾನಂದ ಅಜಾಡ್ಯ ವಾಕ್ಪಟುತ್ವವು
ಹರೇ ರಂಗವಿಠಲ ಹನುಮಾ ಎನಲು†

೫

ಉಗಾಭೋಗ

ಬಲ್ಲವನು ಉಳ್ಳವನು ನೀನಿರಲು ಭಜಿಸದೆ
ಕ್ಷುಲ್ಲಕರ ಮತವಿಡಿದು ಸುಖವ ಬಯಸುವೆ ನಾನು
ಕಲ್ಲು ಗೋವಿನ ಹಾಲು ಕರು ಬಯಸಿದಂತೆ ನಾ
ಹಲ್ಲು ಹೋಹುದನರಿಯೆ ಅಕಟಕಟ ಮಂದಮತಿಯು
ಕಳ್ಳಗೋವನು ಹುಲ್ಲು ಗಂಜಿಯನೆರೆದು ಸಲಹಿದಡೆ ಏನು ಫಲ
ಬಲ್ಲಿದಾಸೆಯ ಬಿಡಿಸೋ ನಮೋ ರಂಗವಿಠಲ‡

೬

ರಾಗ : ಮುಖಾರಿ ತಾಳ : ಅಟತಾಳ

ವಾಸುದೇವ ನಿನ್ನ ಮರ್ಮಕರ್ಮಂಗಳ
ದೇಶದೇಶದಲ್ಲಿ ಪ್ರಕಟಿಸಲೊ ಪ

* ಹಯವದನಾಂಕಿತದಲ್ಲಿಯೂ ದೊರೆಯುತ್ತದೆ.
† ಹರಿವಿಠಲಾಂಕಿತದಲ್ಲಿಯೂ ದೊರೆಯುತ್ತದೆ.
‡ ಶ್ರೀರಾಮಕೃಷ್ಣಾಂಕಿತದಲ್ಲಿಯೂ ದೊರೆಯುತ್ತದೆ.

ಬೇಸರದೆ ಎನ್ನ ಹೃದಯಕಮಲದಲ್ಲಿ
ವಾಸವಾಗಿ ಸುಮ್ಮನಿದ್ದೀಯೊ ಅ.ಪ.

ತರಳತನದಲಿದ್ದು ದುರುಳನಾಗಿ ಬಂದು
ಒರಳಿಗೆ ಕಟ್ಟಿಸಿಕೊಂಡುದನು
ತುರುವ ಕಾಯಲಿ ಪೋಗಿ ಕಲ್ಲಿಯೋಗರವನು
ಗೊಲ್ಲರ ಕೂಡೆ ನೀ ಉಂಡುದನು
ನೆರೆಮನೆ ಹೊರಮನೆಗಳ ಪೊಕ್ಕು ಬೆಣ್ಣೆಯು
ಅರಿಯದಂತೆ ಕದ್ದು ಮೆದ್ದುದನು
ಕೆರಳಿಸಿದೆಯಾದರೆ ಒದರುವೆ ಎಲೊ ನರ
ಹರಿ ಎನ್ನ ಬಾಯಿಗೆ ಬಂದುದನು ೧

ಕಟ್ಟಿಕರೆವ ಏಳುದಿನದ ಮಳೆಗೆ ಪೋಗಿ
ಬೆಟ್ಟವ ಪೊತ್ತುದ್ದು ಹೇಳಲೊ
ಅಟ್ಟಿಸಿಕೊಳ್ಳುತ ಯಾಗಶಾಲೆಗೆ ಪೋಗಿ
ಹೊಟ್ಟೆಯು ಹೊರೆದದ್ದು ಹೇಳಲೊ
ದುಷ್ಟ ಹಾವಿನ ಹೆಡೆಯನು ತುಳಿದಾಡಿದ
ದುಷ್ಟತನವನು ಹೇಳಲೊ
ನೆಟ್ಟನೆ ಅಂಬರಕೆತ್ತಿದನ ಹೊಯ್ದು
ಹಿಟ್ಟುಕುಟ್ಟಿಟ್ಟುದ ಹೇಳಲೊ ೨

ಪಿಡಿಯುವಲಿಗೆ ಮೆಚ್ಚಿ ಸಂಪದವನು ಕೊಟ್ಟ
ಬೆಡಗತನವನಿಲ್ಲಿ ಹೇಳಲೊ
ಹಿಡಿಯಬಂದ ಕಾಲಯವನಗಂಜಿ ಕಲ್ಲ
ಪಡೆಯು ಹೊಕ್ಕಿದ್ದುದ ಹೇಳಲೊ
ಮಡಿದ ಮಗನ ಗುರುವಿಗೆ ಕೊಡಬೇಕೆಂಬ
ಸಡಗರತನವಿಲ್ಲಿ ಹೇಳಲೊ
ಮಡದಿಮಾತಿಗೆ ಪೋಗಿ ನೀ ಪಾರಿಜಾತವ
ತಡೆಯದೆ ತಂದದ್ದು ಹೇಳಲೊ ೩

ಮೌನಗೌರಿಯು ನೋನ ಬಂದ ಹೆಂಗಳನೆಲ್ಲ
ಮಾನವ ಕೊಂಡದ್ದು ಹೇಳಲೊ

ತಾನಾಗಿ ಮೊಲೆಯನೂಡಿಸ ಬಂದವಳನ್ನು
ಪ್ರಾಣವ ಕೊಂಡದ್ದು ಹೇಳಲೊ
ಕಾನನದೊಳು ತುರುವಿಂಡುಗಳನು ಕಾಯ್ದ
ಹೀನತನವನಿಲ್ಲಿ ಹೇಳಲೊ
ಮಾನಿನಿಯರ ಮನೆಗಳ ಪೊಕ್ಕು ಬೆಣ್ಣೆಯ
ಹಾನಿಯ ಮಾಡಿದ್ದು ಹೇಳಲೊ ೪

ಧರಣಿಮಗನ ಕೊಂದು ತರುಣಿಯರನು ತಂದ
ದುರುಳತನವನಿಲ್ಲಿ ಹೇಳಲೊ
ಜರೆಯಮಗನಿಗಂಜಿ ಪುರವ ಬಿಟ್ಟು ಹೋಗಿ
ಶರಧಿಯ ಪೊಕ್ಕದ್ದು ಹೇಳಲೊ
ಧರೆಯೊಳಧಿಕ ಶ್ರೀರಂಗಪಟ್ಟಣದಲ್ಲಿ
ಸ್ಥಿರವಾಗಿ ನಿಂತದ್ದು ಹೇಳಲೊ
ಶರಣಾಗತರ ಕಾವ ರಂಗವಿಠಲನ್ನೆ
ಪರಮ ದಯಾಳೆಂದು ಹೇಳಲೊ ೫

೧

ರಾಗ : ಶುದ್ಧಸಾವೇರಿ ತಾಳ : ಅಟ್ಟತಾಳ

ಇಂದಿನಿರುಳಿನ ಕನಸಿನಲ್ಲಿ ಬಂದು
ಮುಂದೆ ನಿಂದುದ ಕಂಡೆನೆ ಗೋವಳನ ಪ.

ಆಣಿಮುತ್ತಿನ ಪೆಂಡೆಯುದ ಕಾಲಂದುಗೆ ಗೆಜ್ಜೆ
ಜಾಣನಂಗಜನ ಪಿತನ ಕೈಯ ವೇಣು
ಮಾಣಿಕ್ಯದ ಕಂಕಣ ಹೊನ್ನುಡಿ ಘಂಟೆ
ವಾಣಿಯು ರಚನೆ ಎಲ್ಲಿ[ಯು] ಈ ಗೋವಳನಾ ೧

ಮೊಲ್ಲೆ ಮಲ್ಲಿಗೆ ಚೊಲ್ಲೆಯುದ ಚಲ್ಲಣದ ಶಿರ-
ದಲ್ಲಿ ಗುಂಜಿಯು ದಂಡೆಯು ಚೆಲ್ವ ಕಂಗಳ
ಗೋಪಿಯರ ಮೇಲೆ ಕಡೆಗಣ್ಣ
ಚೆಲ್ಲುತೊಯ್ಯನೆ ನಡೆದ ಗೋವಳನ ೨

ತಿತ್ತಿ ಮೌರಿ ಕೊಂಬು ಸುತ್ತಿದ ಕತ್ತ ತಾವಿಲಿ
ತುತ್ತುರೂ ತೂರು ತೂರೆನುತ
ಚಿತ್ರವ ಮುರುಳು ಮಾಡಿದನೆ ಪೊಂಗೊಳಲೂದಿ
ಮೊತ್ತದ ಗೋಪಿಯರನೆಲ್ಲ ಗೋವಳನ ೩

ಎಸಳಂಕಂಗಳ ಢಾಳ ಶಶಿ ನೊಸಲ ತಿಲಕ
ಎನೆವ ಬಿಂಬಾಧರದ
ಪೊಸ ಮುತ್ತಿನೋಲೆ ಮೂಕುತಿ ಹೊನ್ನುಡಿ ಘಂಟೆ
ಎಸೆವ ನೂರ(ಪು ?)ರ ಹಾಹೆಯ (?) ಗೋವಳನ ೪

ಉಂಗುಟದಲಿ ಗಂಗೆಯುಂಗಾಲಲವುಂಕೆ
ತುಂಗವಕ್ಷದ ಲಕ್ಷುಮೀ
ಮುಂಗಳ ಮುಹಿಮ ಭುಜಂಗಶಯನ ಸಿರಿ
ರಂಗವಿಠಲ ನೆರೆದ ಗೋವಳನ ೫

(ಓ. ೨, ಗ. ೧೫೪)

೨

ರಾಗ ಮುಖಾರಿ ತಾಳ· ಝಂಪೆತಾಳ

ಇನ್ನಿವನು ಈಗ ಬರಲಿದಕೆ ಬಗೆಯೇನು
ಚೆನ್ನಾಗಿ ಪೇಳೆ ರಮಣಿ ಪ.

ಮನ್ನಿಸಿ ಮಮತೆಯಲಿ ಮನವ ಸೆಳಕೊಂಡೊಯ್ದು
ಅನ್ಯರನು ಕೂಡುವನೆ ಕೆಳದಿ ಕೆಳದಿ ಅ.ಪ.

ಬಣ್ಣದ ಗಿಣಿ ಬರೆದ ಸಣ್ಣ ಕುಪ್ಪಸವುಳ್ಳ
ಚಿನ್ನದ ಶ್ರೀರೇಖೆ ಸೀರೆ
ಬಿನ್ನಣವುಳ್ಳ ಬಿಳಿಯೆಲೆ ಅಡಿಕೆ ಕೆನೆಸುಣ್ಣ
ಕರ್ಪೂರ ಕಾಚಿನುಂಡೆ
ಕಣ್ಣಿಗಿಂಪಾದ ಕಡುಚೆಲ್ವ ಮಲ್ಲಿಗೆ ಮೊಗ್ಗೆ
ಉನ್ನತವಾದ ದಂಡೆ
ಇನ್ನು ಈ ಪರಿಮಳವು ಬಗೆಬಗೆಯ ಆಭರಣ
ರನ್ನ ಕೆತ್ತಿಸಿದ ಗೊಂಡೆ
ಮುನ್ನ ಸಿಂಗರ ಮಾಡಿ ಎದೆ ಹಿಡಿದು ಬಿಗಿಯುಪ್ಪಿ
ನಿನ್ನೆ ಈ ವೇಳೆ ಕೂಡಿದೆ ದೃಢದೆ ೧

ಈಗಾಗ ಬಾಹನೆಂತಿರುವೆ ತಾನೂರಿದ್ದ
ಉಗುರು ಗುರುತನು ನೋಡುತ
ಸೋಗೆಗಣ್ಣಿನ ಕಾಡಿಗೆಯು ಕಲಕಿದನೆಂದು
ಬೇಗ ನಟನೆಯು ಮಾಡುತ
ರಾಗದಿಂದಲಿ ರವಿಕೆನೆರಿಯನು ಬದಲುಟ್ಟು
ಭೋಗಕ್ಕೆ ಅನುವಾಗುತ
ಹೀಗೆ ಸಿಂಗರಿಸಿಕೊಂಡಿಷ್ಟು ಹೊತ್ತನು ಕಳೆದೆ
ಹೇಗೆ ಸೈರಿಪೆ ಕೂಡದೆ ಮುಂದೆ ೨

ಇಂದಲ್ಲದಿರೆ ನಾಳೆ ಬಹನೆಂದು ಇದ್ದರೆ
ಕಂದರ್ಪ ಕಾಡುತಿಹನೆ
ತಂದು ತೋರಿಸು ತನ್ನ ತಂದೆಯನೆಂದು ಪೂ–
ವಿಂದ ಬಾಣವ ಎಸೆವನೆ

ಇಂದುಬಿಂಬವು ಮಂದಮಾರುತವು ಸುಮದ ಮಳೆ-
ಯಿಂದ ಸೆಕೆಗಾನಾರೆನೆ
ಒಂದು ನಿಮಿಷದಲಿ ಶ್ರೀರಂಗವಿಠಲನನ್ನು
ಹೊಂದಿಸೆನ್ನಗಲದಂತೆ ಕಾಂತೆ ೩

(ಮು. ೩, ಪು. ೮೭)

೩

ರಾಗ : ಕಲ್ಯಾಣಿ ತಾಳ : ಅಟ್ಟತಾಳ (ತ್ರಿಪುಟಿ ?)

ಏಕೆ ದೂರುವಿರೇ ರಂಗಯ್ಯನ
ಏಕೆ ದೂರುವಿರೇ ಪ.

ಸಾಕು ನಿಮ್ಮ ದೂರ ಬಲ್ಲೆನು
ಈ ಕುವರನಾ ಕೃತ್ಯ ಮಾಳ್ಪನೆ ಅ.ಪ.

ದಟ್ಟಡಿಯಿಡಲರಿಯ ಗೋವತ್ಸವ
ಬಿಟ್ಟು ಚಲಿಸಬಲ್ಲನೆ
ಘಟ್ಟಿಯಾಗಿ ಗೊತ್ತಿನಲ್ಲಿ
ಕಟ್ಟಿನೊಳು ಕಟ್ಟಿದ್ದ ಕರುಗಳ
ಬಿಟ್ಟನೇ ಈ ಕೃಷ್ಣನ ಮೇ
ಲೆಷ್ಟು ಹೊಟ್ಟೆಕಿಚ್ಚು ನಿಮಗೆ ೧

ಕೆನೆಹಾಲು ಬೆಣ್ಣೆಯನು ಇತ್ತರೆ ಆ
ದಿನವೊಲ್ಲನು ಊಟವ
ಮನೆಮನೆಮನೆಗಳನು ಪೊಕ್ಕು
ಬೆಣ್ಣೆ ಪಾಲ್ಮೊಸರನ್ನು ತಿನ್ನುತ
ವನಿತೆಯರ ಕೂಡಾಡಿದನೆಂ-
ದೆನಲು ನಿಮಗೆ ನಾಚಿಕಿಲ್ಲವೆ ೨

ಪಾಲು ಮೊಸರು ಬೆಣ್ಣೆಯು ಇಲ್ಲವೆ ನ-
ಮ್ಮಾಲಯದೊಳು ನೋಡಿರೆ
ಹೇಳುವರೆ ಈ ಶಾಳಿಗಳ ಗೋ

ಪಾಲಬಾಲನ ನೋಡಿ ಸೈಸದೆ
ಬಾಳುವಿರ ಭವ ಜಲಧಿಯಿಂದಲಿ
ತೇಲಿಸುವನೆ ರಂಗವಿಠಲ ೩

(ಮು. ೩, ಪು. ೯೪)

## ೪

ರಾಗ ಹಿಂದೋಳ ತಾಳ. ರೂಪಕತಾಳ

ಏನು ಭ್ರಮೆ ಮನುಜರಿಗೆ ಎಷ್ಟು ಮಮತೆ ಪ್ರಕೃತಿಯಲಿ
ಮೀನು ಗಾಣಳ[?]ವ ನುಂಗಿ ಮೋಸಹೋದ ತೆರನಂತೆ ॥ ಧ್ರುವ ॥

ನನ್ನ ಮನೆ ನನ್ನ ಸತಿ ನನ್ನ ಸುತರೆಂದೆನಿಸಿ
ಹೊನ್ನುಗಳ ಗಳಿಸಿ ಹೆಚ್ಚಾಗಿ ಹೋರ್ಯಾಡಿ
ಸಣ್ಣವರ ಮದುವೆ ಸಂಭ್ರಮದಿ ಮಾಡುವೆನೆಂದು
ಅನ್ನ ಮೊದಲು ಕಾಣದೆ ಅಂತರ ಪಿಶಾಚಿಯಂತೆ ೧

ಬಲುವೋದಿಕೆಯಲ್ಲಿ ಬಲ್ಲವರೆನಿಸಬೇಕೆನುತ
ಹಲವು ಬುದ್ಧಿಯಲಿ ಹಿರ್ರನೆ ಹಿಗ್ಗುತ
ಮಲಿನ ಮನಸಿನಜ್ಞಾನನ[ದ ?]ಲಿ ತಾನರಿಯದೆ
ಬಲೆಯಲ್ಲಿ ಸಿಲುಕಿದ ಪಕ್ಷಿಯಂತೆ ಬಳಲುತಿಹ ೨

ಮಿಗಿಲು ಆಸೆಗೆ ಬಿದ್ದು ಬಗೆ ಬಗೆ ಹೂಣಿಕೆಯಲಿ
ಹೊಗದಲ್ಲಿ ಹೊಗುವರು ಹೊಲಬಿಟ್ಟು ತಿಳಿಯರು
ಖಗವಾಹನ ಮುದ್ದು ರಂಗವಿಠಲನ ನಾಮ ಸ್ಮರಿಸಲು
ವಿಗಡ ಸಂಸಾರ ಹಗರಣ ನೀರಗುಳ್ಳೆ[ಯ]ಂತೆ ೩

(ಬೇ. ೪೧, ಪು. ೬೨)

## ೫

ರಾಗ ಶಂಕರಾಭರಣ ತಾಳ. [ಆದಿತಾಳ]

ಒಲಿದೆ ಯಾತಕಮ್ಮಾ ಲಕ್ಷುಮೀ
ವಾಸುದೇವಗೆ ಪ.

ಶುದ್ಧ ನೀಲವರ್ಣದ ಮೈಯ
ಕಪ್ಪಿನವನಿಗೆ ಹ್ಯಾಗೆ ಅ.ಪ.

ಹುಟ್ಟಿದ ಮನೆಗಳ ಬಿಟ್ಟು– ಕಳ್ಳ
ದಿಟ್ಟತನದಿ ಗೋಕುಲದಲ್ಲಿ ಬೆಳೆದ
ಚಟ್ಟಿ ಸಹಿತ ಹಾಲು ಕುಡಿದ– ಅಲ್ಲಿ
ದಿಟ್ಟ ಕಾಳಿಂಗನ ಹೆಡೆಯ ತುಳಿದವನಿಗೆ ೧

ಗೊಲ್ಲರ ಮನೆಗಳ ಪೊಕ್ಕು–ಅಲ್ಲಿ
ಗುಲ್ಲು ಮಾಡದೆ ಮೊಸರೆಲ್ಲ ಸವಿದ
ಮೆಲ್ಲನೆ ಸವಿಮಾತನಾಡಿ–ಅಲ್ಲಿ
ಎಲ್ಲ ಸಖಿಯರ ಅಭಿಮಾನಗೇಡಿಗೆ ೨

ಮಾವನ ಮರ್ದಿಸಿದವಗೆ–ಅಲ್ಲಿ
ನೋಳ ಸಾಸಿರ ಗೋಪೇರಿಗೆ ಮದುವೆ ಆದವಗೆ
ಹಾವಿನ ಮ್ಯಾಲೊರಗಿದವಗೆ
ಕಾವೇರಿ ತೀರದ ರಂಗವಿಠಲಗೆ ೩

(ಲ. ೧೭, ಪು. ೬)

೬

ರಾಗ : ಕಾಂಬೋಧಿ ತಾಳ : [ರೂಪಕತಾಳ] (ಆದಿತಾಳ ?)

ಕಂತುಪಿತನೆ ನಿನ್ನ ಎಂತು ವರ್ಣಿಪೆ ಲಕ್ಷ್ಮೀ-
ಕಾಂತ ಪಾಲಿಸೆನ್ನನು ನಿರಂತರದಲಿ ಪ.

ಕುಂತೀಪುತ್ರಗೆ ನೀನತ್ಯಂತ ಸಾರಥಿತ್ವವ ಮಾಡಿ
ನಿಂತು ದುರ್ಯೋಧನನ ಶಿರವ ಅಂತಕನಿಗೊಪ್ಪಿಸಿದ ಧೀರ ಅ.ಪ.

ಸುಂದರ ವದನ ನಿನ್ನ ಕಂದ ಭಜಿಸಲು ಮುದ–
ದಿಂದ ಕಂಬದೊಳ್ಬಂದೆ ಮಂದರೋದ್ಧಾರ
ಸಿಂಧುಶಾಯಿ ರಕ್ಕಸನ ಕೊಂದು ಕರುಳ ಮಾಲೆಯನ್ನು
ಚೆಂದದಿಂ ಕಂಧರದೊಳ್ಧರಿಸಿದಾನಂದಮೂರ್ತಿ ಇಂದಿರೇಶ ೧

ಜಂಭವೈರಿ ಮುಖ್ಯ ಸುರ ಕದಂಬ ಪೂಜಿತಾಂಘ್ರಿಯುಗಳ
ನಂಬಿದ ಭಕ್ತರ ಕಾಯ್ವ ಅಂಬುಜನೇತ್ರ
ಅಂಬರೀಷ ದ್ವಾದಶಿ ವ್ರತವ ಸಂಭ್ರಮದಿ ಮಾಡುತಿರೆ
ಡೊಂಬಿಯಿಂ ದೂರ್ವಾಸ ಶಪಿಸೆ ಬೆಂಬಿಡದೆ ಚಕ್ರದಿ ಸಲಹಿದ ೨

ಗಂಗೆಯು ಜನಕ ನಿನ್ನ ಅಂಗನೆ ದ್ರೌಪದ ದೇವಿ
ಭಂಗಬಿಡಿಸೆಂದು ಕೂಗೆ ಮಂಗಳಾಂಗನೆ
ಸಾಂಗದಿಂದ ವಸ್ತ್ರಂಗಳ ಹಿಂಗದೆ ಪಾಲಿಸಿದಂಥ
ರಂಗವಿಠಲ ಪಾಲಿಸೀಗ ತುಂಗವಿಕ್ರಮ ಎನ್ನ ಮಾತು ೩

(ಗೋ. ೨, ಪು. ೨೧೫)

## ೭

### ಉಗಾಭೋಗ

ರಾಗ ಪುನ್ನಾಗವರಾಳಿ

ಕಂಬಳಿಯು ಬುತ್ತಿಯಲಿ ಕಸವನಾರಿಸುವರುಂಟೆ (?)
ಅಂಬುಜೋದರನ ನೆಲೆ ಅರಿಯದ ದುರಾತುಮರು
ಬೆಂಬಿಡದೆ ಸುಖನರಸುವರುಂಟೆ ? ಉದ
ರಂಭರದಿ ಡಂಭಕರು ಇಹಪರಕೆ ಬಾಹ್ಯರೆಂದೂ
ಶಂಬರಾಂತಕ ಪಿತ ರಂಗವಿಠಲರೇಯನ್ನ ಪಾ
ದಾಂಬುಜೋದ್ಭ್ರಮರದೊಳು(?)ವಿಗೆ ದೂರರಾದವರು
ಬೆಂಬಿಡದೆ ಸುಖವನರಸುವರುಂಟೆ ?

(ವ. ೧೪, ಪು. ೧೧)

## ೮

ರಾಗ ಸುರಟಿ ತಾಳ ಆದಿತಾಳ

ಕೀರ್ತಿಸಿ ಜನರೆಲ್ಲ ಹರಿಯ ಗುಣ ಪ.

ಕೀರ್ತಿಸಿ ಜನರು ಕೃತಾರ್ಥರಾಗಿರೊ ಅ.ಪ.

ಆವನು ವನದೊಳಗೆ ನಿತ್ಯದಿ
ಬಾಹ ಜನರ ಬಡಿದು
ಜೀವನ ಮಾಳ್ಪ ಕಿರಾತನು ಕೀರ್ತಿಸೆ
ತಾ ಒಲಿದಾತನ ಕೋವಿದನೆನಿಸಿದ ೧

ಆವನ ಪಾದರಜ ಸೋಕಲು
ಆ ವನಿತೆಯು ಜಡ
ಭಾವವ ತೊಲಗಿಸಿ ಆ ವನಿತೆಯುನು
ಪಾವನ ಮಾಡಿದ ದೇವಾಧಿದೇವನ ೨

ಅಂದು ಶಬರಿ ತಾನು ಪ್ರೇಮದಿ
ತಿಂದ ಫಲವ ಕೊಡಲು
ಕುಂದು ನೋಡದೆ ಆನಂದದಿ ಗ್ರಹಿಸಿ
ಕುಂದದ ಪದವಿಯನಂದು ಕೊಟ್ಟವನ ೩

ದುಷ್ಟರಾವಣ ತಾನು ಸುರರಿಗೆ
ಕಷ್ಟಬಡಿಸುತಿರಲು
ಪುಟ್ಟಿ ಭುವನದೊಳು ಕುಟ್ಟಿ ಖಳರ ಸುರ-
ರಿಷ್ಟವ ಸಲಿಸಿದ ಸೃಷ್ಟಿಗೊಡೆಯನ ೪

ತನ್ನ ನಂಬಿದ ಜನರ ಮತ್ತೆ ತಾ-
ನನ್ಯರಿಗೊಪ್ಪಿಸದೆ
ಮುನ್ನಿನಘವ ಕಳೆದಿನ್ನು ಕಾಪಾಡುವ
ಘನ್ನಮಹಿಮ ಶ್ರೀರಂಗವಿಠಲನ್ನ ೫

(ಮು ೩, ಪು ೮೩)

೯

ರಾಗ : [ಆಹರಿ] ತಾಳ : [ತ್ರಿಪುಟ]

ಗುಮ್ಮ ಬಂದನೆಲೊ ದುರ್ಜನ ಬೇಡ
ಸುಮ್ಮನಿರೆಲೊ ರಂಗಯ್ಯ ॥ ಧ್ರುವ ॥

ಉಟ್ಟ ಪುಲಿತೊವಲು ತೊಟ್ಟ ಮುತ್ತಿನಹಾರ
ಇಟ್ಟ ಕಾಮಾಕ್ಷಿ ಕಪಾಲ ತ್ರಿಶೂಲ
ಬಟ್ಟು ಹಣೆಮೆರಿಯ(ರೆಯ ?)ಚರಣದಲಿ ಮೆಟ್ಟಿದ ಹಾವುಗೆಯ
ದಿಟ್ಟ ಮೂರುತಿ ನಿಮ್ಮ ಚರಣ ಸೇವೆಗೆ ನಿತ್ಯ ೧

ಕಡಗ ಕಂಕಣ ಬಾಹುಪುರಿ ಭುಜಕೀರ್ತಿಯು
ಉರದಲ್ಲಿ ಧರಸಿದ ರುಂಡಮಾಲಿಯು ತನ್ನ
ಸಿರದ ಜಟಾಜೂಟಿಯು ತಾಂ ಧರಸಿದ ಉರಗನಾ
ಭರಣಗಳು ಪರಮ ಮೂರುತಿ ನಿಮ್ಮ ಚರಣಸೇವೆಗೆ ನಿತ್ಯಾ ೨

ಕಾಮನ್ನ ರೂಪಕ್ಕೆ ಜರಿವಾ ಚನ್ನಿಗನಾಗಿ
ಕೋಮಲಾಂಗೇರು ಭಿಕ್ಷವ ನೀಡಲು ಪ್ರೇಮದಿಂದವರಿಗೆಲ್ಲ
ಮುಕ್ತಿಯನೀವ ಸೋಮಶೇಖರನ ಚೆಲ್ವ
ರಾಮನಾ ಭಾವ ಮೃದುವಾ[ಕ್ಯ]ವಿದು ಮುದ್ದು ೩

ಕೋಟಿ ಸೂರ್ಯರ ಕಾಂತಿ ನೇಟಾದ (?) ತನುವಿನ
ಪೂಸಿದ ಭಸ್ಮವು ನೊಸಲ ಮುಕ್ಕಣ್ಣಿನ ನೋಟದ
ಕಿಡಿಯುದುರೆ ಭೂತಗಣಂಗಳು ಕುಟಕಿಚ್ಚಕ (?) ಬೆದರೆ
ನಾಟ್ಯವನಾಡುತ ನಗುತ ಮೋಹನ ಮುದ್ದು ೪

ಅಂಜೆ ಕಾಣಮ್ಮ ನಾ ಅಗಲಿದವ (?) ಜೋಗಿ
ಜಂಗಮವೇಷವು ಕೈಕೊ[ಂ]ಡು ಮಲೆಯಾಳ
ಕೊಂಗ ಗುಜ್ಜರ ಭಾಷೆಯು (ಯ ?) ಭಾಷಿಸುತಲಿ
ರಂಗವಿಠಲನೆ ಚೆಲ್ವ ಮಂಗಳ ಮೂರುತಿ ನಿಮ್ಮ ಚರಣಸೇವೆಗೆ ನಿತ್ಯಾ ೫

(ಬೇ ೪೧, ಪು ೭೩*a*)

## ೧೦

ರಾಗ ಮೋಹನ ತಾಳ . ಝಂಪೆತಾಳ

ಚಿಂತೆಯನು ಮಾಡದಿರು ಚದುರೆ ನಿನಗೆ ನಾನು
ಕಂತುಪಿತನನು ತೋರುವೆ ಪ.

ಸಂತೋಷದಿಂದ ಸರ್ವಾಭರಣವಿಟ್ಟುಕೊಂಡು
ನಿಂತು ಬಾಗಿಲೊಳು ನೋಡೆ ಪಾಡೆ ಅ.ಪ.

ಒಂದು ಕ್ಷಣ ಪಾದಾರವಿಂದ ತೊಳೆದು ಕುಡಿದು
ಮಂದಹಾಸದಲಿ ನಲಿದು
ಒಂದೆ ಮನದಲಿ ದಿವ್ಯಗಂಧವನು ತಂದ್ಹಚ್ಚಿ
ನಂದದಿಂದವನ ಮೆಚ್ಚಿ
ಅಂದವಾದ ಕುಸುಮ ಹಾರವನು ಸುಖನಿಧಿಗೆ
ಕಂಧರದಿ ನೀಡಿ ನೋಡಿ
ಸಂದೇಹ ಬಿಟ್ಟು ಬಿಗಿದಪ್ಪಿ ಮನವೊಂದಾಗಿ
ಎಂದೆಂದಿಗಗಲದಿರೆನ್ನ ರನ್ನೆ ೧

ಆಸನವ ಕೊಟ್ಟು ಕಮಲಾಸನನ ಪಿತಗೆ ಸವಿ-
ಯೂಟಗಳನುಣ್ಣಿಸಿ
ಲೇಸಾಗಿ ತಾಂಬೂಲ ತಬಕದಲಿ ತಂದಿಟ್ಟು
ವಾಸನೆಗಳನೆ ತೊಟ್ಟು
ಸೂಸುವ ಸುಳಿಗುರುಳುಗಳ ತಿದ್ದುತಲಿ ನಕ್ಕು
ಶ್ರೀಶನ್ನ ಮರೆಯ ಹೊಕ್ಕು
ಆ ಸಮಯದಲಿ ನಿನಗೆ ದಾಸಿ ಎನ್ನಯ ಮನದಿ
ವಾಸವಾಗು ಬಿಡದೆ ಎನ್ನ ರನ್ನೆ ೨

ಇಂತು ಈ ಪರಿಯಲ್ಲಿ ಶ್ರೀಕಾಂತನನು ಕೂಡಿ ಏ-
ಕಾಂತದಲಿ ರತಿಯ ಮಾಡಿ
ಸಂತೋಷವನು ಪಡಿಸಿ ಸಕಲ ಭೋಗವ ತಿಳಿಸಿ
ಸಂತತ ಸ್ನೇಹ ಬೆಳೆಸಿ
ಅಂತರಂಗಕೆ ಹಚ್ಚಿ ಅವನಾಗಿ ತಾ ಮೆಚ್ಚಿ
ಪ್ರೀತಿಯಿಂದಧರ ಕಚ್ಚಿ
ಕಂತು ಕೇಳಿಯೊಳು ಕಡುಚೆಲ್ವ ರಂಗವಿಠಲ
ಇಂತು ನಿನ್ನಗಲ ಕಾಣೆ-ಜಾಣೆ ೩

(ಮು. ೩, ಪು. ೮೪)

## ೧೧

ರಾಗ [ಸೌರಾಷ್ಟ್ರ] ತಾಳ . [ಝಂಪೆತಾಳ]

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಮಂಗಳ ರಂಗ ನರಸಿಂಗ ಉತ್ತುಂಗನಿಗೆ
ಮಂಗಳಂ ಸಂ(ಸಿಂ ?)ಗರಚಿತ್ತಾಂಗದ ಹರಿಗೆ
ಮಂಗಳಂ ಸಂ(ಸಿಂ ?)ಗರದಿ ಕಂಗೊಳಿಪ ಮುಂಗುರುಳ
ಕಂಗಳ ಧ(ಧ ?)ವಳಾಂಗ ಶುಭಾಂಗ ಹರಿಗೆ ೧

ಇತ್ತರದಿ ಚಿತ್ತಿಣಿಯರೊತ್ತಿಡರಸತ್ತಿಗೆಯು
ಮತ್ತಗಜವೆತ್ತವೆನೆ ಕೆತ್ತಿಸಿರಲು
ಹತ್ತಿದರೆ ಚಿತ್ತದಿಂದೊತ್ತಿರಗ(ವ ?)ನ ಹತ್ತಿರಕೆ
ನೆತ್ತಿಯೊಳು ಹೊತ್ತರಾರತಿಗಳನು ೨

ಕಡಕಡಲೆ(ಲ ?) ತೆರೆಯಂತೆ ನೊ(ಒ ?)ಡನೊಡನೆ ನಾರಿಯರು
ಬೆಡಗಿನಿಂದಡಸಿದಾರತಿಯನು
ಬಡನಡುವು ನಡುನಡುಗೆ ಮೃಡಸಖನಿಗೆತ್ತುತಲಿ
ಎಡೆಬಿಡದೆತ್ತಿ ಪಾಡಿದರು ಕಡಲಶಯನನ್ನ ೩

. . . . . . . . ವಿಭವದಿಂ ಪೊಗಳಲು
ಅಭಯರಿಗೆ (?) ಶುಭಕರದೊಳಭಯವಿತ್ತು
ನಭದೊಳಗೆ ಇಭಪತಿಯ (ಯು ?) ರಭಸದಿಂ ಪೊಗಳಲು
ತ್ರಿಭುವನವ ಪೊರೆವ ರಂಗವಿಠಲನಿಗೆ ೪

(ಓ. ೬, ಗ. ೬೪)

## ೧೨

ರಾಗ . ಮೋಹನ ತಾಳ . ಆದಿತಾಳ

ತುರುಗಾಯ ಬಂದ ಗೋಪಿಯ ಕಂದ
ಆನಂದದಿಂದ ಪ.

ಸುರ ನರ ತರು ಮೃಗ ಜಲಚರ ಮೋಹಿಸೆ
ತರಳೇರ ಮನಸೂರೆಯಾಗೆ ಕೊಳಲಿನಿಂದ ಅ.ಪ.

ತಂದೆಯು ಕಂದನೆಂದು ಕೊಂಕುಳೊಳಿಟ್ಟು
ಕಂದನ ಕೆಳಗಿಟ್ಟು
ಅಂದಿಗೆ ಗೆಜ್ಜೆ ಕಿವಿಗಳಿಗಿಟ್ಟು
ಮುತ್ತಿನ ಬಟ್ಟು
ಹೊಂದಿಸಿ ಗಲ್ಲದಲ್ಲಿ ತಾನಿಟ್ಟು
ಕಸ್ತೂರಿಯು ಬಟ್ಟು
ಮುಂದಾಗಿ ಮೂಗಿನ ಮೇಲಳವಟ್ಟು
ಮನೆಬಾಗಿಲ ಬಿಟ್ಟು
ಕಂದರ್ಪನ ಶರದಿಂದ ನೊಂದು ಬಹು
ಕಂದಿಕುಂದುತಲಿಂದುವದನೆಯರು
ಇಂದಿರೇಶನಾನಂದದ ಗಾನಕೆ
ಚಂದ್ರಮುಖಿಯರೊಂದಾಗುತ ಬರುತಿರೆ ೧

ಮುರಳಿಯ ಸ್ವರಕೆ ಮೋಹಿತರಾಗೆ
ಕರುಗಳನು ತಂದು
ಕರದಿಂದಲೆತ್ತಿ ತೊಟ್ಟಿಲೊಳಗೆ
ಇರಿಸುತ್ತ ಹಾಲ
ಬೆರಸುತ್ತ ಮಜ್ಜಿಗೆ ಮೊಸರಿನೊಳಗೆ
ಪರಮಾತ್ಮನ ನೆನೆದು
ಹೊರಟರು ಬಿಸಿಲು ಚಳಿ ಮಳೆಯೊಳಗೆ
ಮನೆಮನೆಯೊಳಗೆ
ತರಳರ ಬೆದರಿಸಿ ಮಾರ್ಜಾಲಕೆ ಮೊಲೆ
ತ್ವರಿತದಿ ಉಣಿಸುತ ಸರಿಸರಿಯೆನುತಲಿ
ಪರಿಪರಿ ಭ್ರಾಂತರಾಗಿ ನೋಡುತ
ಪುರಮಾರ್ಗಕೆ ಬರುವರು ನಿರುಕಿಸುತ ೨

ಮದನ ಶತಕೋಟಿ ತೇಜನು ಬಂದ
ಸ್ತ್ರೀರೆದುರಲಿ ನಿಂದ
ಅಧರಾಮೃತ ಪಾನಮಾಡಿರೆಂದ
ಬಾಯಾರಿದಿರೆಂದ

ಬದಿಯಲ್ಲಿ ಬಂದು ಕುಳ್ಳಿರಿಯೆಂದ
ಅವರಿರವನೆ ನೋಡ್ದ
ಚದುರೇರ ಮೋಹಕನೆ ನಾನೆಂದ
ವಾದ್ಯದ ರವದಿಂದ
ಸದಯನೆದುರ ರಂಭೆ ಊರ್ವಶಿ ಮೇನಕೆ
ಒದಗಿ ನಾಟ್ಯಗಳ ಚದುರತನದಲಾಡೆ
ಮಧುಸೂದನ ಭಕ್ತರ ಕಾಯ್ವುದಕೀ
ವಿಧದೊಳಗಾಡಿದ ರಂಗವಿಠಲ ತಾ ೩

(ಮು. ೩, ಪು. ೧೦)

## ೧೩

ರಾಗ · ಕಾಪಿ ತಾಳ . ರೂಪಕ

ತೆರಳೆ ನೀ ಮಧುರೆಗೆ ಗೋಕುಲದಲಿ ನಾವು
ಇರಲಾರೆ ಇರಲಾರೆವೋ ಗೋಪಾಲ ಪ.

ತರಳತನದಿ ನೀ ಆಡಿದ ಆಟಗಳ ಸ್ಮರಿಸಿ
ಸ್ಮರಿಸಿ ನಾವು ಮರುಗುವುದೆಲೊ ದೇವ ಅ.ಪ.

ವ್ರಜದ ಒಳಗೆ ನಿನ (ನೀನು ?) ಇದ್ದದ್ದು ಕೇಳಿ
ಭರದಿ ಪೂತನಿ[ಯು] ಕೆಳಗಿ (ಕಳುಹಿ ?) ಕೊಟ್ಟರೆ
ತೊಡೆಯ ಒಳಗೆ ಇಟ್ಟು ಸ್ತನಕೊಡುತಿರಲವಳ
ಹುಲಿಯಂತೆ ಹೀರಿ ಹಿಪ್ಪೆಯ-
ಮಾಡಿದೆಯೊ ದೇವ. ತೃಣದ ಅಸುರನ ಕೊರಳ
ಮಿಸುಗುತ್ತ ಅವನ ಕೆಡಹಿದಿ
ಭರದಿ ಬಂಡಿಯು ಒದ್ದು ಶಕಟನ ಪುಡಿಯು
ಮಾಡಿದ ಪರಮ ಪುರುಷನೆ ೧

ಕೊ(ಕ್ಷು ?)ಲ್ಲ ಕಂಸನು ಭಾಳ ಯೋಚಿಸಿ ಮನದಿ
ಕೊಲ್ಲಬೇಕೆಂದೆನುತ ಸೂಚಿಸಿ (ಸೆ ?)
ಬಿಲ್ಲನೆ ಮುರಿದು ಆ ನಲ್ಲೆಯ ಕರಪಿಡಿದು
ಒಳ್ಳೆ ಪುರಕೆ ಪೋಗಿ ಎಲ್ಲ ಕಾರ್ಯವ ನಡೆಸಿ

ಮೆಲ್ಲನೆ ಏಕಾಂತ ಗೃಹದಲಿ
ಸೊಲ್ಲ ಕೇಳುತ ಅವನ (ನು ?) ಕೋಪಿಸಿ (ಸೆ ?)
ಅಲ್ಲಿಯನುಜನ ಕರೆದು ಅವನ
ಕೊಲ್ಲ ಕಳುಹಿದ ಕಠಿಣ ಹೃದಯನೆ ೨

ಎಲ್ಲ ಹಿಂದಿನ ಸುದ್ದಿ ಬಲ್ಲೆವೊ ನಾವು
ಇಲ್ಲಿ ಮರೆತೀಯೆಂದು ತಿಳಿದೆವೊ
ಬಲ್ಲ ಅಕ್ರೂರನು ಬಂದು ಇಲ್ಲಿಗೆ ನಮ್ಮ
ಇಲ್ಲದ ಮಾತ ಕೇಳಿ ಮೆಲ್ಲನೆ ಕರೆದೊಯ್ದ
ಅಲ್ಲಿ ರಥವನೆ ಕಾಣುತ ಎದೆ
ಝಲ್ಲೆನಿಸಿ ನಡುಗಿದೆವೊ
ಫುಲ್ಲನಾಭನೆ ಜ್ಞಾನ ಭಕುತಿ ನ-
ಮ್ಮೆಲ್ಲರಿಗೆ ನೀನಿತ್ತು ಪೋಗೆಲೊ ೩

ಹೆಂಡತಿಯರ ಕೂಡಿ (ಡೆ ?) ಕದನ ಮಾಡಿ
ಮುಂದೆ ಮೂವರು ತೆರಳಿದಿರಿ
ಬಂದು ಋಷಿಯಶ್ರಮದಿ ನಿಂತು ಗ್ರಾಸವ ಬೇಡೆ
ಮಂದಗಮನೆ ನೋಡಿ ಚೆಂದಾಯಿ
ತೆಂದು ತಂದು ಕಲಶೋದಕವ ಚೆಲ್ಲಲು
ಕಂದರುಗಳು ನೀವಾದಿರೊ
ತಂದ ಹಲಸಿನ ದೊನ್ನೆ ಪಾಲನು
ಚೆಂದದಿಂದಲಿ ಕುಡಿದ ದೇವನೆ ೪

ಮಂದಗಮನೇರಿಂದ ನಿಮಗೆ ಮತ್ತೆ
ಒಂದುಪಕಾರವ ಕಾಣೆವೊ
ಚೆಂದಾದಿ ಮಾನದಿ ಮಂದಿರದಲಿ ಇರದೆ
ಗಂಡರ ಬಿಟ್ಟು ನಿಮ್ಹಿಂದೆ ತಿರುಗಿದೆವೊ
ಇಂದಿರೆಯು ಕಾರಣಗಳಲ್ಲವೊ
ನೀಗೆ ನೀನೆ ಸ್ವರಮಣನು
ಮಂಗಳಾಂಗನೆ ಮಾರಜನಕನೆ
ರಂಗವಿಠಲನೆ ರಾಜೀವಾಕ್ಷನೆ ೫

(ಲೀ. ೧, ಪು. ೩೭೪)

## ೧೪

ರಾಗ : ತೋಡಿ ತಾಳ : ಆದಿತಾಳ

ನಿನ್ನ ಪೂಜೆಯೊ–ರಾಮ ಪ.

ನಿನ್ನ ಪೂಜೆ ಹೊರತಿಲ್ಲ
ಎನ್ನ ವ್ಯಾಪಾರವೆಲ್ಲ ಅ.ಪ.

ಸ್ನಾನ ಸಂಧ್ಯಾವಂದನ ಹೋಮ ಮೌನ ಜಪ ಸದ್ಗ್ರಂಥ್ಯ ವ್ಯಾ
ಖ್ಯಾನ ಯಜ್ಞಸಾಧನ ಸಂಪಾದನ ಅಧ್ಯಯನ
ನಾನಾ ರಸ ನೈವೇದ್ಯ ಭೋಜನ ತಾಂಬೂಲ ಚರ್ವಣ
ಮಾನಿನಿ ಮೊದಲಾದ ಚಂದನ (ಸ್ಯಂದನ) ಗಾನದ ಭೋಗದಳೆಲ್ಲ ೧

ಸರ್ವೇಂದ್ರಿಯಗಳಲಿಹ ಶರ್ವಾದಿ ದೇವರ್ಕಳಿಗೆ
ಸರ್ವಚೇಷ್ಟಾಪ್ರದನಾದ ಪ್ರಾಣಗೆ ನಿರ್ವಾಹಕನಾಗಿ
ಸರ್ವಜೀವರ ಕೈಯಿಂದ ಸರ್ವಜ್ಞಾನ ಕರ್ಮಗಳನು
ಸರ್ವದಾ ಮಾಡಿಸಿ ಅವರ ಸರ್ವಶುಭಭೋಕ್ತನಹೆ ೨

ಅಂಗಾಂಗ[ಗ]ಳಲ್ಲಿ ಸುರರು ಕಂಗಳಲ್ಲಿ ಭಾಗ್ಯಲಕ್ಷ್ಮಿ
ಉಂಗುಷ್ಠಾದಿ ಲೋಕಪಾವನೆ ಗಂಗಾದೇವಿಯು
ಹಿಂಗದೆ ನಿನ್ನಲ್ಲಿರಲು ತುಂಗಗುಣ ಪರಿಪೂರ್ಣ
ರಂಗವಿಠಲ ನೆಲೆಯಾಗಿ ಮಂಗಳಾಂಗನೆ ಮನ್ನಿಸುವೆಯೊ ೩

(ಗೋ. ಲಿ. ಪ್ರ.)

## ೧೫

ರಾಗ : [ಕುರಂಜಿ] ತಾಳ : [ಆದಿತಾಳ]

ನಿನ್ನ ಮಗನ ಲೀಲೆಯು ತಾಳಲಾರೆವೆ ನಾವು
ತರಳನ ದುಡುಕು ಹೇಳಬಾರದೆ ಗೋಪಾಲಕೃಷ್ಣಗೆ ಬುದ್ಧಿ ಅಮ್ಮ ಪ.

ಇದು ಚೆನ್ನಾಯಿತು ತಿಳಿದವನಲ್ಲವೆ
ನೀ ಕೇಳೆ ಯಶೋದೆ ಅ.ಪ.

ಬಾಲಕನೆಂದು ಲಾಲಿಸಿ ಕರೆದರೆ
ಮೂಲೆ ಮನೆಯೊಳಗೆ ಪೊಕ್ಕು
ಪಾಲು ಬೆಣ್ಣೆ ಮೊಸರೆಲ್ಲವ ಮೆದ್ದು
ಕೋಲಲ್ಲಿ ನೀರೆ ಕೊಡಗ ವಡ(ಒಡೆ ?)ದನೇ
ಆಸಲ (?) ವರ್ಣನವ ದಿಟ್ಟ ನಿತ್ಯ ಇವನ ಹೋರಾಟ
ಹೆಬ್ಬಾಲೆಯರಲ್ಲಿ ನೋಟ ಬಹಳ ಬಗೆಯಲಿ
ಪಿಡಿದೇವೆಂದರೆ ಮೇಲಿಯಂಜಲುಗಳವ್ಹೊಡಿದಾ (?)
ಅಮ್ಮ ಇದು ಚೆನ್ನಾಯಿತು ೧

ಮತ್ತೆ ಭಾಮಿನಿಯರೆಲ್ಲರು ಕೂಡಿ
ಮಡುವಿನಲ್ಲಿ ಜಲಕ್ರೀಡೆಯಾಡಲು
ಚಿತ್ತಚೋರ ಸೀರೆಗಳನೆಲ್ಲವ-
ನೆತ್ತಿಕೊಂಡು ಮರಸನೇರಿದವ್ವಾ
ಬೆತ್ತಲೆ ಭಾಮೆಯರೆಲ್ಲ ಬೇಡಿದರೆ ಕೊಡನಲ್ಲ
ಈ ಯುಕ್ತಿಗಳೆ ಬಹುಬಲ್ಲ
ಹತ್ತಿಲಿ ಬಂದು ಕರವೆತ್ತಿ ಮುಗಿದರೆ
ವಸ್ತ್ರಗಳೆಲ್ಲವ ಕೊಡುವೆನೆಂದನೇ ಅಮ್ಮ ೨

ಸದ್ದು ಮಾಡದೆ ಸರುಹೊತ್ತಿನಲ್ಲಿ ನಾವು( ?)
ನಿದ್ದೆಗಣ್ಣಿನಲಿ ನಾವಿರಲು
ಮುದ್ದುಕೃಷ್ಣ ನಮ್ಮನೆಯವರಂತೆ
ಮುದದಿಂದೆನ್ನ ಕೂಡಿದವ್ವಾ
ಎದ್ದು ನೋಡಿದೆವಲ್ಲ ಆಹ ಏನೇ ನಮ್ಮವರಲ್ಲ
ಬುದ್ಧಿ ಮೋಸ ಬಂತಲ್ಲ
ಪೊದ್ದು ಸಲ್ಲಿಸಿದೀ ಜಾರ ನೀನೆಂದರೆ
ಪರಿಹಾಸ್ಯವ ಮಾಡಿದ ರಂಗವಿರಲನ ಅಮ್ಮ ೩

(ಸಂ. ೭೫, ಪು, ೯೪)

## ೧೬

### ಉಗಾಭೋಗ

ಭವವೆಂಬ ಅಡವಿಯಲ್ಲಿ ತಾಪತ್ರಯದಿ ಸಿಲುಕಿ
ಭಯಗೊಳ್ಳದಂತೆ ಗೆಲ್ಲುವುದಕೆ ಶ್ರೀಹರಿನಾಮ
ಹೊರತಾಗಿ ಮತ್ತುಂಟೆ ಎನ್ನ ಮನವ ನಿನ್ನ
ಚರಣದಲ್ಲಿಟ್ಟು ಸಲಹೊ ನಮೋ ರಂಗವಿಠಲ

(ಮ. ೨೨ ಪು. ೮೦)

## ೧೭

### ಉಗಾಭೋಗ

ಮುಂದೆ ಕೆಟ್ಟು ಬಂದವರ
ಹಿಂದಕೆ ಹಾಕಿಕೊಂಡ ಬಳಿಕ
ಒಂದು (ಬಂದ ?) ಗುಣದೋಷಗಳಳು (?) ಎಣಿಸುವರೆ ಎಲೆ ದೇವಾ !
ಅಂದವಲ್ಲ ನಿನ್ನ ಘನತೆಗೆ
ತಂದೆತಾಯಿಗಳು ತಮ್ಮ
ಕಂದನವಗುಣಗಳೆಣಿಸುವರೆ ?
ಎಂದೆಂದಿಗೆನ್ನ ಉದ್ಧರಿಸಬೇಕೆಲೆ ದೇವ
ಸಂದೇಹವ್ಯಾತಕೆ ನಮೋ ರಂಗವಿಠಲಯ್ಯ

(ವ. ೨, ಪು. ೨೧)

## ೧೮

### ಉಗಾಭೋಗ

ಮಾರಿ ಕೋಣನಂತೆ ಘೋರ ಭಾಗ್ಯವ ಕೊಟ್ಟು
ನರಕಕ್ಕೆ ಇಡುವನೋ ದುರ್ಜನರುಗಳನು
ಸಾರ ಭಕುತರಿಗೆ ದಾರಿದ್ರ್ಯಾದಿಗಳನ್ನು ಕೊಟ್ಟು
ಪಾರುಗಾಣಿಸುವನು ರಂಗವಿಠಲರೇಯ

(ಹೆ ೭೧, ಪು. ೨)

## ೧೯

ರಾಗ : ಶ್ರೀರಾಗ ತಾಳ: ಆದಿತಾಳ

ರಂಗ ಕೊಳಲನೂದುತ ಬಂದ
ಯಶೋದೆಯ ಕಂದ ಪ.

ಕೊಳಲ ಧ್ವನಿಗೆ ವಿರಹವು ನಾರಿಯರಿಗೆ
ಕಳವಳವಾಗಲು ಕಳಕಳಿಸುತ ಬಂದ ಅ.ಪ.

ಶೃಂಗಾರ ಕೊಳಲಗಾಯನ ಮಾಡೆ
ಸ್ತ್ರೀಯರು ನೋಡೆ
ರಂಗನ ಪಾದದಲಿ ಮನ ಹೂಡೆ
ಭೃಂಗಾಮೃತ ತೈಲ
ಅಂಗನೆಯರು ಝಳಕವ ಮಾಡೆ
ವಿಧವಿಧಾಭರಣಂಗ-
ಳಂಗಕ್ಕೆ ಶೃಂಗಾರ ಮಾಡೆ
ದೇವರ್ಕಳು ನೋಡೆ
ಹಂಗವಿಹಂಗ ಭುಜಂಗ ನವಿಲು ಸಾ-
ರಂಗ ಗಿಣಿಯು ಮಾತಂಗ ಮರಿಯು ಕು-
ರಂಗ ಮಧ್ಯೆ ಚರಣಂಗಳೆಡೆಗೆ ವೇ-
ದಂಗಳರಗೆ ಕಾಮಂಗಳಲುಗೆ ನೇ-
ತ್ರಂಗಳಿಗತಿ ಚಿತ್ರಂಗಳಾಗೆ ಆ
ರಂಗನೂರ್ಧ್ವ ಸಾರಂಗ ಕೇಳಿ ರುಷಿ
ಪುಂಗಸಹಿತ ತಾವುಗಳು ಬರೆ ನರ-
ಸಿಂಗನೂದಿದ ಜಗಂಗಳ ಮೋಹಿಸಿ ೧

ಬಂಗಾರ ಬಟ್ಟಲೊಳಗೆ ಅಂದು
ಕ್ಷೀರವ ತಂದು
ರಂಗಗರ್ಪಿಸುವೆವು ನಾವೆಂದು
ಹರುಷದೊಳಂದು
ಅಂಗನೆಯರು ಮೈಮರೆತು ನಿಂದು
ಒಲಿಯಬೇಕೆಂದು

ಮಂಗಳಮಹಿಮನು ನೀನೆಂದು
ಅತಿಭಕ್ತುತಿಯೊಳಂದು
ತುಂಗವಿಕ್ರಮನ ಪದಂಗಳಿಗೆರಗಲು
ರಂಗ ನಗಹಿ ಕಿಂಗಳ್ಬಿಡಿಯೆ ಮೋ-
ಹಂಗಳಿಂದ್ಮ ವಿಹಂಗಳ್ಬೆಚ್ಚಿ ರವಿ
ಕೆಂಗಳಂದೆ ಕುಚಂಗಳು ಬಿಟ್ಟಾ-
ಲಿಂಗಸುತಿರೆ ಶ್ರೀ ಮಂಗಳಾಂಗಗೆ ಪು-
ಷ್ಪಂಗಳಿಂದ ವರುಷಂಗಳು ಮೇಲ್ಸುರ-
ರಂಗಳು ಸುರಿಯೆ ಉತ್ತುಂಗ ಮಹಿಮ ಹರು
ಷಂಗಳ ಬೀರುತ ಅಂಗನೆಯರಿಗೆ ೨

ಮಂದಿರ ಮಾನಿನಿಯರು ಬಿಟ್ಟು
ಮನದಲಿ ಕಂಗೆಟ್ಟು
ಮಂದರೋದ್ಧರನಲ್ಲೆ ಮನವಿಟ್ಟು
ಕರೆಕರೆಯು ಬಿಟ್ಟು
ಚೆಂದದಿ ಕರ್ಪೂರ ವೀಳ್ಯವನಿಟ್ಟು
ಸಡಗರವ ತೊಟ್ಟು
ಒಂದಾಗಿ ಚೆದರುತ ತೋಷವ ಪಟ್ಟು
ತ್ವರೆ ಬರುವರು ಅಷ್ಟು
ಅಂದದಿಂದಲಾನಂದವೇರಿ ಮು-
ಕುಂದನಂಘ್ರಿ ಮುದದಿಂದ ಸ್ಮರಿಸಿ ಬರು
ವಂದ ನೋಡಿ ಗೋವಿಂದ ಕೊಳಲ ಬಹು
ಅಂದದೊಳಿಡೆ ಈ ಇಂದುವದನೆಯರು
ಚಂದ್ರನುದಯವಾದಂತೆ ಆಯಿತ್ತು ಮನ
ಗಂಧ ಕಸ್ತೂರಿ ತಂದು ಆಗ ಹರಿ
ಕಂಧರದೊಳಗಿಡೆ ರಂಗವಿಠಲ ದಯ-
ದಿಂದ ನೋಡ್ದ ಪುರಂಧ್ರಿಯರನ್ನು ೩

(ಮು. ೩. ಪು. ೧೫)

೨೦

ರಾಗ : ಸಾವೇರಿ ತಾಳ : ತ್ರಿಪುಟತಾಳ

ರಕ್ಷ ಮಾಂ ರಂಗೇಶ ಪ.

ರಕ್ಷ ಮಾಂ ರಂಗೇಶ ರವಿಕೋಟಿಸಂಕಾಶ
ಪಕ್ಷಿವಾಹನ ಶ್ರೀಶ ಭವ್ಯಗುಣಕೋಶ
ಅಕ್ಷರಾದಿ ಪಿಪೀಲಿಕಾಂತ ಸಂ
ರಕ್ಷಕಾಮಯಹರಣ ಸರ್ವ
ಲಕ್ಷಣ ಪರಿಪೂರ್ಣ ಪರಮೇಶ-ದಕ್ಷಿಣಾಧೀಶ ಅ ಪ.

ಕಮಲದಳ ನೇತ್ರ ಕಮಲಾರಿ ಸಮವಕ್ತ್ರ
ಕಮಲಾವಿರಚಿತ ಸ್ತೋತ್ರ ಕರಧೃತ ಗೋತ್ರ
ಕಮಲಜ ನುತಿಪಾತ್ರ ಕರಿರಾಜಯಾತ್ರ
ಕಮಲಧರ ಕರಕಮಲ ಸಮಪದ
ಕಮಲ ಸಂನಿಭವಿನುತ ಕಂಧರ
ಕಮಲ ಸಂನಿಭ ಸುಗಾತ್ರ-ಕಮಲಾಕಳತ್ರ ೧

ಅನಿಮಿಷ ಸುಪ್ರೀತಾಖಿಳ ದೋಷ ನಿರ್ಧೂತ
ಸನಕಾದಿ ಶ್ರುತಿಗೀತ ಅರ್ಜುನಸೂತ
ದಿನಮಣಿಕುಲಜಾತ ದೇವಕೀ ಪೋತ
ಕನಕವಸನ ಕಿರೀಟಧರ ಕೋ
ಕನದ ಹಿತ ಕಮಲಾಪ್ತ ನಯನ
ವನದವಾಹನವೈರಿಕುಲಘಾತ(?)-ವನಜಭವ ತಾತ ೨

ಅಂಗನಾಂಬರಹರಣಾನುಪಮ ಸಪ್ತಾವರಣ
ಮಂಗಳ ಕರಚರಣ ಭಕ್ತ ಸಂರಕ್ಷಣ
ಗಾಂಗೇಯಕೃತಸ್ಮರಣ ಕರುಣಾಭರಣ
ರಂಗವಿರಲ ಭುಜಂಗಶಯನ ತು
ರಂಗಧರ ಕಾವೇರಿ ತೀರ ಶ್ರೀ
ರಂಗನಿಲಯ ತುರಂಗ ಸಂಚರಣ-ಗಂಗಾಚರಣ ೩

(ಗೋ ಲಿ. ಪ್ರ)

## ೨೧

**ರಾಗ : ತೋಡಿ ತಾಳ : ಆದಿತಾಳ**

ರಾಮಾವರಂತೆ (ರಾಮಾ ! ಅವರಂತೆ ?) ರಕ್ಷಿಸೋ ಎಂದರೆ
ರಕ್ಷಿಸಲೊಲ್ಲ್ಯಾ ಪರಾಕು ಪ.

ಕಾಮಿಂತಫಲವೀವ ಕರುಣಾಂಬುಧಿ ಎಂದು
ನಾ ಮೊರೆಹೊಕ್ಕೆನಲ್ಲೋ ರಾಮರಾಮಾ ಪ್ರಫುಲ್ಲ ಅ.ಪ.

ಎಡವಿದ್ದ ಮಾತ್ರದಿ ಪೆಣ್ಣಾದ ಗೌತಮ
ಮಡದಿಯು ನಿನ್ನವಳೇನೋ
ಕಡುಪ್ರೀತಿಯಿಂದ ಕಾಯಿದಿ ಕರಿರಾಜನು ನಿನ್ನ
ಒಡಲಲ್ಲಿ ಜನಿಸಿದನೇನೋ
ನಡುಗುಂತ ಮಗನ ನಾರಗನೆನ್ನಲು
ನುಡಿಕೇಳಿ ಪೊರೆದೆಲ್ಲೊ ರಾಮರಾಮಾ ೧

ಹಿಂದ್ವೈರಿ ದೆಸೆಯಿಂದ ಬಂದ ವಿಭೀಷಣನು
ತಂದೆಯು ಕಡೆಯುವನೇನೋ
ಕಂದು ಕುಂದೆಣಿಸದೆ ಕಾಯಿದಿ ಘಂಟಾಕರ್ಣಾ (?)
ಎಂದಾ ಮಾತಿನ ಬಗೆಯೇನೋ
ಬಂದು ಕಂಬದಿ ಶಿಶುವ ಬಾಧೆಯ ಬಿಡಿಸಿದಿ
ಆಪದ್ಬಾಂಧವ ನೀನಲೋ ರಾಮರಾಮಾ ೨

ಉಲ್ಲಾಸದಿಂದ ಶಬರಿ ಉಂಡೆಂಜಲಿಗೊಡ್ಡಿದ
ವಲ್ಲಭ ನೀನಲ್ಲವೇನೋ
ಎಲ್ಲಿಯು ಬಲ್ಲಿದ ಪಿಡಿಯುವಲಕ್ಕಿಗೆ ನೀ ಪೋದಿ
ವಲ್ಲ್ಯೊಡ್ಡಿದ್ದು ಮರತ್ಯೇನೋ
ಎಲ್ಲಿಯು ಮಾತಿದು ಪೇಳಲಂಜುವೆ ರಂಗ ವಿ-
ಠಲ ನೀನಲ್ಲೋ ರಾಮರಾಮಾ ೩

(ಹರಪನಹಳ್ಳಿಯವರ ಬಿಡಿಹಾಳೆಯಿಂದ)

೨೨

ರಾಗ : [ಹಿಂದೋಳ] ತಾಳ : [ರೂಪಕತಾಳ]

ವಂದನೆ ಮಾಡಿರೈ ಯತಿಕುಲಚಂದ್ರನ ಪಾಡಿರೈ ಪ.

ಬಂದ ದುರಿತಗಳ ಹಿಂದೆ ಕಳೆದು ಆ
ನಂದಪಡುವ ವಿಬುಧೇಂದ್ರಕರೋದ್ಭವ[ನ] (?) ಅ.ಪ.

ರಘುಕುಲವರಪುತ್ರ ರಾಮನ ಚರಣ ಕರುಣಾಪಾತ್ರ
ನಿಗಮೋಕ್ತಿಯ ಸೂತ್ರ ಪಾರ ಪಠಿಸು[ವ]
ಸುಗುಣ ಜಿತಾಮಿತ್ರ ನಗಧರ ಶ್ರೀಪನ್ನಗಶಯನನ ಗುಣ
ಪೊಗಳುವ ಅಪಾರ ಅಗಣಿತ ಮಹಿಮರ ೧

ವರಮಹಾತ್ಮೆ ತಿಳಿಸಿ ಮೊದಲಿಂ[ದೀ] ವರಿಯಂದದಿ
ಚರಿಸಿ ನಿರುತ ಮನವ ನಿಲಿಸಿ ಶ್ರೀಹರಿ ಕರಿ
ವರದನ ಒಲಿಸಿದರೆ ಜನರಿಗೆ ಅರಿಯದೆ ಮರೆಯಾಗುತ
ಹರುಷದಿ ಗೋನದ (?) ತರುವಲ್ಲಿರುವವರ ೨

ಮುಂದದಿ ಕೃಷ್ಣಾ ತಟಿಯ ಮಧ್ಯದಿ ಸದನದ ಪರಿಯ
ಸತ[ತಾ]ಮಲ ಯತಿವರ್ಯ ತಪಮೌನದಲಿ
ಇದ್ದು ದ್ರುತ ಕರಿಯ (ಕಾರ್ಯ ?) ಒದಗಿ ನದಿಯ ಸೂ
ಸುತ ಬರಲೇಳು ದಿನಕುದಯಾದವರ(ಯವಾದವರ?)ಸುಪದ ಕಮಲಂಗಳ ೩

ಮಾಸ ಮಾರ್ಗಶೀರ್ಷಾರಾಧನೆಗಶೇಷದಿನ ಅವಾ
ವಾಸ್ಯ ದಾಸರು ಪ್ರತಿವರುಷ ಮಾಳ್ಪರು
ಲೇಸೆ[ನ]ಲು ಶ್ರುತಿಗೊಷ (?) ಕಾಶಿಯ ಕ್ಷೇತ್ರ ಈ ಸ್ಥಳ ಮಿಗಿಲೈ
ದಾಸರಿಗೆ ಭೂಸುರ ಪದಗಳ ೪

ಮಧ್ವ ಶಾಸ್ತ್ರ ಗ್ರಂಥಸಾರದ ಪದ್ಧತಿ ತಿಳಿದಂಥ
ಅದ್ವೈತ ಪಂಥ ಮುರಿದು ಮತ ಉದ್ಧರಿಸಿದಂಥ
ರುದ್ರವಂದ್ಯ ಮೂರುತಿ ರಂಗವಿಠಲ ಪದ
ಪದ್ಮಾರಾಧಕ ಪ್ರಸಿದ್ಧ ಮುನೀಂದ್ರರ ೫

(ಲೀ. ೧, ಪು. ೩೬೩)

## ೨೩

# ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕಂ

ಶ್ರೀರಮಾ ಮಾನಿನೀ ಮಾನಸೇಂದೀವರೋ
ತ್ಫುಲ್ಲ ಸಂಫುಲ್ಲ ಚಂದ್ರಾ ಚಿದಾನಂದ ಸಾಂ
ದ್ರಾ ಸದಾ ಸನ್ನುತೇಂದ್ರಾ ನಮೋಪೇಂದ್ರ ನಿ
ಸ್ತಂದ್ರ ನೀ ಕೇಳು, ಆ ರೀತಿ ಪ್ರಹ್ಲಾದನಲ್
ಸಜ್ಜನಾಹ್ಲಾದನಲ್ ದೈತ್ಯ ಸತ್ಪುತ್ರರಾ
ವೇಳೆ ಶ್ರೀಕಾಂತನ ಜ್ಞಾನ ಭಕ್ತಿ ಕ್ರಿಯಾ
ಗಾಥೆಗಳ್ ಬೋಧೆಗಳ್ ಕೇಳಿ ತಾವೆಲ್ಲರಾ
ಮಾರ್ಗದಲ್ಲೇ ಸುನಿರ್ದಿಷ್ಟ ಸನ್ಮಾರ್ಗದ
ಲ್ಲೇ ಪರಾಭೂತ ಷಡ್ವರ್ಗದಲ್ಲೇ ಮನ
ಸ್ಸಿತ್ತು ಧರ್ಮಾರ್ಥ ಕಾಮಸ್ಪೃಹ ಗ್ರಂಥಗಳ್
ಸಿದ್ಧ ಸಂಸಾರ ಸಂಬಂಧಗಳ್ ಹತ್ತುವೂ
ದಾಗದೇ ದಾನವಾಚಾರ್ಯರಾಶ್ಚರ್ಯದಿಂ
ದಾಗ ತಾವೇಸುರೀತಿಂದಲಾಯಾಸುರೀ
ವಿದ್ಯೆಗಳ್ ಗದ್ಯಗಳ್ ಪದ್ಯಗಳ್ ಪಾರ ಪೇ
ಳ್ತಿದ್ದರಾ ಪಾರಗಳ್ ಒಪ್ಪದೇ ತಪ್ಪದೇ
ನಿಂತು ಮಾರಾಟಗಳ್ ಮಾಡುತಾ ವಿಷ್ಣುಭ
ಕ್ತಿ ಕ್ರಿಯಾಪಾರಗಳ್ ಪಾಡುತಾ ಎಲ್ಲರೊ
ದಾಗೆ ತಾವ್ ನೋಡಿ ಅಂಜ್ಯಾಡಿ ಇನ್ನೇನು ಈ
ಸೂನುಗಳ್ ದೈತ್ಯರಾಟ್ ಸೂನನಲ್ ಬುದ್ಧಿ ಭೇ
ದೈಸಿ ದುರ್ಬೋಧಗಳ್ ಕೇಳಿ ದುಸ್ಸಾಧ್ಯರಂ
ತಿಪ್ಪರೆಂದಾಗಲೇ ಬೇಗಲೇ ದಾನವಾ
ರಾಗ್ರನಲ್ ಕೋಪ ಸಂಶೀಘ್ರನಲ್ ಸೇರಿ ಪ್ರ
ಹ್ಲಾದನಾ ಚೇಷ್ಟೆಗಳ್ ನಿಷ್ಠೆಗಳ್ ನುಡಿದರು,
ಆ ವಾಣಿಗಳ್ ಕೇಳಿದಂ ಕರ್ವ ಕಾರೋರ್ಯ ಬಾ
ಣಾಳಿಗಳ್ ರೀತಿ ಅಪ್ರೀತಿಯಾಸೂತಿ ದು
ರ್ನೀತಿ ತಾ ಸೈಸದೇ ಕೋಪಸಂದೀಪನಾ
ವೇಶದಿಂದಲ್ ಚಲದ್ಗಾತ್ರನಾಗೆದ್ದು ಪ್ರೋ
ದ್ಯದ್ದಯಾಪಾತ್ರನಂತಿಪ್ಪ ತತ್ಪುತ್ರ ಸಂ
ಹಾರದಲ್ ಚಿತ್ತವಂ ಪೆತ್ತವಂ ಪಾಪಸಂ

ವೃತ್ತ ನೇತ್ರ ಪ್ರಮಾಕ್ಷೇಕ್ಷನಾಗಲ್ ಸಮ
ಕ್ಷೈಸಿ ದುಷ್ಪ್ರೋಕ್ತಿಗಳ್ ಬಾಗುತಾ ಕೂಗುತಾ
ಸಾಧು ಸದ್ಭಕ್ತಿಯಿಂದಲ್ ಮಹದ್ಭಕ್ತಿಯಿಂ
ದಲ್ಲಿ ತನ್ನಲ್ಲಿ ಚೆನ್ನಲ್ಲಿ ಬದ್ಧಾಂಜಲೀ
ಯಾಗಿ ಸಿದ್ಧಾಂತ ಸದ್ಯುಕ್ತಿಯಿಂದಲ್ಲಿ ನಿಂ
ದಿದ್ದ ಪ್ರಹ್ಲಾದ ಧೀಮಂತಗೇ ನಿರ್ಮಲ
ಸ್ವಾಂತಗಾವೇಳೆ ಪಾದಾಹತವ್ಯಾಳಿಯಂ
ತೇ ಭುಜಶ್ವಾಸಗಳ್ ಬೇಸಿಗಳ್ ಬೀಸುತಾ
ಕಂದಗಾ ತಂದೆ ಸಂಭಾಷಿಪಂ.

ಹೋಯೆಲೋ
ದುರ್ವಿನೀತಾಯೆಲೋ ಮಂದಬುದ್ಧೀಯೆಲೊ
ಇಂತು ನೀ ಸ್ತಬ್ಧನಾದೇತಕೋ ವಂಶಘಾ
ತೀಯೆಲೋ ಪಾಪಜಾತೀಯೆ ನೀ ಹೀಗೆ ಮ
ಚ್ಛಾಸನಾತೀತನಾಗಿಪ್ಪೊಡೇ ನಿನ್ನನಿ
ನ್ನಾ ಯಮದ್ವಾರಕೇ ಕಳುಹುವೆಂ ನೋಡೆಲಾ
ನಾನು ಕೋಪಿಷ್ಠನಾಗಿಪ್ಪೊಡೇ ಅಂಜಿ ಮೂ
ಲೋರ್ಕಗಳ್ ಲೋಕಪಾನೀಕಗಳ್ ಕಂಪಕಾ
ಣುತ್ತಮಿಂಥಾ ಬಲಿಷ್ಠನ್ನ ನೀನೆನ್ನ ಸಂ
ಪದ್ಬಲ ಶ್ರೀಯನಾಶ್ರೈಸದೇ ಬಿಟ್ಟರಿ
ನ್ನಾವನಲ್ ನೀಂ ಬಲಶ್ರೀಯನಾಶ್ರೈಸುವೇ
ಯೋ ಎಲಾ ಏಕೆ ಮಚ್ಛಾಸನಾತೀತನಾ
ಗೂಪಿಯೋ ಕಂದ ಪೇಳೆಂದರೇ, ತಂದೆಗಾ
ಕಂದ ಸಂಭಾಷಿಪಂ

ತಂದೆ ಕೇಳಯ್ಯ ಬ್ರ
ಹ್ಮಾದಿ ಆಸ್ತಂಭಪರ್ಯಂತವ್ರಂ ಜಂಗಮ
ಸ್ಥಾವರಾತ್ಮ ಪ್ರಪಂಚೋಚ್ಚ ನೀಚ ಪ್ರಜಾ
ನೀಕ ಯಾವತ್ತದಾವಾತನಾಧೀನದ
ಲ್ಲಿಪ್ಪುದೋ ಆತನೇ ಎನ್ನಗೇ ನಿನ್ನಗೇ
ಇನ್ನು ಮಿಕ್ಕಾದ ಚೈತನ್ಯಕೆಲ್ಲಾ ಬಲ
ಶ್ರೀಯು ತಾನಾದನೇ ಕಾದನೇ ಕಾಲರೂ
ಪೀಶ್ವರೋರುಕ್ರಮಾಕಾರನೆಂಬಾತನೇ
ಆತನೇ ಆತನೇ ತೇಜ ಓಜಸ್ಸಹಾ

ಸತ್ವ ಸಂಪದ್ಬಲ ಶ್ರೀಂದ್ರಿಯಾತ್ಮಕ್ ಸ್ವಯಂ
ಶಕ್ತಿಯಿಂದಲ್ ಜಗತ್ಸರ್ವವಂ ಪುಟ್ಟಿಸೂ
ವಂ ಸದಾ ಪುಷ್ಟಿ ಮಾಡೂವನೇ ನಷ್ಟಗೈ
ಸೂವನಾ ದೇವನಂ ಪೊರ್ತು ನಮ್ಮಲ್ ಬಲಾ
ದೀಗಳುಂಟೆಂಬ ನಿನ್ನಾಸುರೀ ಭಾವವಿ
ನ್ನಾದರೂ ನೀ ಬಿಡೋ ನೋಡೊ ಶ್ರೀಕಾಂತನಲ್
ಕಾಂತನಲ್ ಸ್ವಾಂತ ನೀನಿತ್ತು ಸರ್ವತ್ರ ಸ[ಮಂ]
ಚಿತ್ತನಾಗಯ್ಯ ಎನ್ನಯ್ಯನೇ ನಿನ್ನಗಾ
ಮೇಲೆ ವಿದ್ವೇಷ ಮಾಡೂವರಾರಿಲ್ಲವಂ
ತಸ್ಸಿನಲ್ಲಿಪ್ಪ ಕಾಮಾದಿ ಷಡ್ವರ್ಗವೆಂ
ಬಾ ಮಹಾ ವೈರಿಗಳ್ ಕಳ್ಳರಂತೆಲ್ಲರುಂ
ದೇಹವೆಂಬೋ ಮಹಾರಾಜಧಾನೀ ವೃಧಾ
ಹಾನಿ ಮಾಡೂವರಂಥಾವರಂ ಗೆಲ್ಲದೇ
ಕೆಲ್ವರೀ ದಿಕ್ಕುಗಳ್ ಸರ್ವವಂ ಗೆದ್ದವೆಂ
ತೆಂದು ಹಿಗ್ಗೂವರಂತಸ್ಸಿನಲ್ಲಿಪ್ಪ ಕಾ
ಮಾದಿ ಷಡ್ವರ್ಗ ಗೆದ್ದಾತಗೇ ಜ್ಞಾನಸಂ
ಪೂತಗೇ ಸಾಧು ಸಂಭೂತ ಸರ್ವಂಸಮಂ
ಚೇತಗಾಮೇಲೆ ತನ್ಮೋಹ ಸಂಜಾತವೆಂ
ತಪ್ಪುದೋ ಶಾತ್ರವವ್ರಾತವೆಲ್ಲಿಪ್ಪುದ
ಯ್ಯಾ ಸದಯ್ಯಾತ್ಮನೇ ತಿಳಿದು ನೋಡೆಂದು ತಾ
ನಿಂದು ಮಾತಾಡಲು,
ಶತ್ರುವೆಂತಿಪ್ಪ ಪು
ತ್ರಾಕೃತಿಂ ಕಾಣುತಾ ಕೆಂಡಗಳ್ ಕಾರುತಾ
ವಹ್ನಿಯೊಳಾಜ್ಯಧಾರಾಹುತಿಂ ಇಟ್ಟಂತೆ
ತಾಗೆ ಭಗ್ಗಂತ ದಿಗ್ಗಂತ ಸಿಂಹಾಸನಸ್ಥಾನದಿಂ
ದೆದ್ದು ನಿಂದಿದ್ದು ಸಂಭಾಷಿಪಂ ತಂದೆ, ಹೋ
ಹೋಯೆಲಾ ಪುತ್ರನೇ ಇಂದು ನಾವೊಂದು ಪೇ
ಳುತ್ತಿರುತ್ತಿದ್ದರೊಂದಕ್ಕೆ ಹತ್ತಾಗಿ ನೀ
ನೇವನೋ ವಿಷ್ಣುವೆಂಬಾತ ಬೇರೊಬ್ಬ ತಾ
ನಿಪ್ಪನೆಂದೂಹಿಸೂವೇಯು ಹೋ ಹೋಯೆಲಾ
ಸಾವಿಗೀ ಬುದ್ಧಿ ನೀ ಸಿದ್ಧಮಾಡೀದಿ ಎಂ
ಬೋದಿದಂ ವ್ಯಕ್ತವಂತೆಲ್ಲ ನಾಂ ಬಲ್ಲೆ ಇಂ

ತಲ್ಲದೇ ನಿನ್ನಗೀರೀತಿ ದುರ್ಬುದ್ಧಿ ಪು
ಟ್ಟೋವುದೇ ಮೃತ್ಯುಸಿದ್ಧಗೆ ವಿಷ್ಣುತ್ವ ಸಂ
ಭಾಷೆಯಲ್ಲಿಚ್ಚೆ ಬೇಕಾಗಿ ಹೋದಲ್ಲದೇ
ಬಲ್ಲೆನೆಲ್ಲಾ ಎಲೋ ಮಂದನೇ ಮಂದಭಾ
ಗ್ಯೋಕ್ತಿಗಳ್ ಏಕೆ ನೀನಾಡುವೇ ಅಕ್ಕಟಾ
ಎನ್ನಗಿನ್ನಾ ಜಗನ್ನಾಥನಿನ್ನಾವನೋ
ಆತನೆಲ್ಲಿಪ್ಪ, ಸರ್ವತ್ರದಲ್ಲಿಪ್ಪ ನೀ
ನೆಂದಡೇ ಡಿಂಭಕಾಡಂಭಕಾಡೋಣಗಳ್
ಸಾಕು ಮಾಡಿನ್ನು ಮೇಲೀ ಸಭಾಸ್ತಂಭದಲ್
ಶೀಘ್ರ ಸಂರಂಭದಲ್ ತೋರು ನೀ ತೋರದೇ
ಪೋದೆಯಾ ಇನ್ನು ನೀ ಮಾರುಮಾತಾಡದ್ದಾ
ಗೇ ಶಿರಚ್ಛೇದ ಮಾಡೂವೆನೋ ನಿನ್ನಗೀ
ವೇಳೆಯಲ್ ವಿಷ್ಣುವೆಂತೆಂದದಾವಾತ ತಾ
ನಡ್ಡ ಬಂದಾನೊ ನಾ ನೋಡುವೆಂ ವಿಷ್ಣುವೇ
ಬೇಡ ಬೇಕಾದ ದಿಕ್ಕಾಗಿ ನಿ[ನ]ಗಿಪ್ಪಡೇ
ಬೇಡಿಕೋ ಮೂರ್ಖನೇ ಎಂದು ಕ್ರೋಧಾಗ್ನಿಯಿಂ
ದುರ್ಷಿ ದುರ್ಭಾಷೆಯುಲ್ ತನ್ನ ಪುತ್ರನ್ನ ತಾ
ದೂರುತಾ ಹಾರುತಾ ಕೈಲಿ ಖಟ್ ಪೆಟ್ಕವಂ
ಖಡ್ಗವಂ ಕೊಂಡು ದುಷ್ಟಂ ಮಹಾದೋರ್ಬಲಿ
ಷ್ಠಂ ಸ್ವಯಂ ಮುಷ್ಟಿಯಿಂದಲ್ಲಿ ಪೆಟ್ಟಿತ್ತನು.
ಆ ಭೀಕರಧ್ವಾನ ಸಂಭಿನ್ನ ದುಷ್ಟಾಸುರೀ
ಗರ್ಭಸಂರಂಭವುಂ ಶುಂಭದಂಭೋದ ವೀ
ಥೀ ಸಮಾರಂಭಿತೋ ಜ್ರುಂಭವುಂ ವೈಷ್ಣವೋ
ತ್ಕೃಷ್ಟ ವಿಶ್ರುಂಭವುಂ ಶಾತಕುಂಭೋಲ್ಲಸ
ದ್ರತ್ನಚಿತ್ರಪ್ರಭಾಗುಂಭವುಂ ತತ್ಸಭಾ
ಸ್ತಂಭವುಂ ಆಗಲೇ ಬೇಗಲೇ ಘಳ್‌ಘಳಾ
ರಾವ ಉದ್ಭೂತವಾಗೆದ್ದು ಬ್ರಹ್ಮಾಂಡವೆ
ಲ್ಲಾ ಪರಿಸ್ಫೋಟವಂ ಮಾಡುವಂತೊಪ್ಪೆ ಬ್ರ
ಹ್ಮಾದಿಗಳ್ ತಮ್ಮ ಧಾಮಕ್ಕೆ ವ್ಯಾಘಾತವೇ
ನಾದರುಂ ಬಾಹೊದೇನೋ ಇದೇನೆಂದು ವಿ
ಭ್ರಾಂತ ಚೇತಸ್ಕರಾಗಿಪ್ಪರಂತೇ

ದುರಂ

ತೀಕ್ಷಣಂಗಳ್ ಕುವರಾಗ್ರನಲ್ ತುಂಬುತಾ
ಕತ್ತಿ ಕೈಹತ್ತಿ ಪುತ್ರನ್ನ ತಾ ಚಿತ್ರಹಿಂ
ಸಿತ್ತು ಕೊಲ್ಲುವೆನೆಂದಾಗ್ರಹೋಗ್ರಗ್ರಹ
ಗ್ರಸ್ತನಾಗೇನು ಮೈತಿಳಿಯದೇ ಕೂಡಿ ಓ
ಡ್ಯಾಡಿ ಬಾಹೋ ಹಿರಣ್ಯಾಖ್ಯಗಾ ವೇಳೆ ಕಾ
ಲಾಡದ್ದಾಗೇ ಸಭಾಸ್ತಂಭದಲ್ ತನ್ಮಹಾ
ರಾವ ತಾನಡ್ಡಕಟ್ಟಿಪ್ಪದಂತಾ ಮಹಾ
ಧ್ವಾನ ಕೇಳುತ್ತಲೇ ನಿಂತನಾ ಹೇತುವಂ
ಕಾಣದೇ ಆಗ ಆಯಾಸುರೀ ಹಿಂಡುಗಳ್
ಭೂತ ಭೇತಾಳಿಕಾ ತಂಡಗಳ್ ಶಾಕಿನೀ
ಡಾಕಿನೀ ದಂಡುಗಳ್ ಅಂಜಿ ಬೆಂಡಾದವಾ
ಸ್ತಂಭವಾ ವೇಳೆ ಘಟ್ ಘಟ್ ಘಟಾರಾವದಿಂ
ಸೀಳಿಯಾ ಲೇಲಿಹಾನೋಜ್ವಲ ಜ್ವಾಲೆಗಳ್
ಮಾಲೆಗಳ್ ತುಂಬಿ ಕಾಳ್ಗಿಚ್ಚುಗಳ್ ಚೆಂದದಿಂ
ಜಂತು ಸಂಘಕ್ಕೆ ಸಂತಾಪಗೈಸೇ ಛಿಟಾ
ಛಿಟ್ ಛಿಟಾಂಗಾರಗಳ್ ಬೀಸೆ ಇದೇವ್ವದೋ
ಭೂತ ಉದ್ಭೂತವಾಗೊಪ್ಪಿತೆಂದಾಗ ಮೂ
ಲೋಕವೆಲ್ಲಾ ಸಮುಲ್ಲೋಕವಾಗಿಪ್ಪುದಾ
ವೇಳೆ ತದ್ಭೃತ್ಯವಾಕ್ ಸತ್ಯವಂ ಮಾಡಬೇ
ಕಾಗಿ ಸರ್ವತ್ರ ತಾ ತನ್ನ ವ್ಯಾಪ್ತತ್ವವಂ
ಮಧ್ಯವಾಗಿಪ್ಪವೋಲ್ ಅದ್ಭುತಾಕಾರ ಪೊ
ತ್ತಂ ಜಗದ್ಭರ್ತ ತಾನೊಂದ ಸಿಂಹಾಕೃತೀ
ಯಾಗದೇ ಮರ್ತ್ಯಮೂರ್ತ್ಯಲ್ಲದೇ ತತ್ಸಭಾ
ಸ್ತಂಭದಲ್ ಡಿಂಭ ಸಂಭಾವನಕ್ಕಾಗಿ ಸಂ
ಭೂತನಾದಂ.

ದಿತೀಪುತ್ರನಾ ರೂಪವಂ
ಕಂಡಿದೇನೋ ಮಹಾ ಚಿತ್ರವಾಗಿಪ್ಪುದೇ
ಸಿಂಹದಂತಲ್ಲದೇ ಮರ್ತ್ಯನಂತಲ್ಲದೇ
ಯಾವುದೀ ಭೂತವೆಂತೆಂದು ಮೀಮಾಂಸಮಾ
ನಾತ್ಮನಾದಂ.

ಜಗತ್ಸ್ವಾಮಿ ತಾನಾಗಲೇ
ತ[ಪ್ತ]ಭಾಂಗಾರ ಶೃಂಗಾರವಲ್ಯಂತೆ ಕಂ

ಗಳ್ ಸಮುದ್ಧೃತ್ನಟಾ ಕೇಸರಂಗಳ್ ವಿಜೃಂ
ಭತ್ಕರಾಳಾಸ್ಪದಂ ಉಗ್ರನಾಸಾಸಮು
ಚ್ಛ್ವಾಸ ನಿಶ್ವಾಸಗಳ್ ಸಂಚಲದ್ವ್ಯಸ್ತವ್ಯಾ
ಳ ಕ್ಷುರಾಂತೋಗ್ರ ಜಿಹ್ವಾಗ್ರ ಲೇಲೀಹನಂ
ಗಳ್ ಭ್ರಮದ್ಭ್ರೂಲ್ಲಲಂಗಳ್ ಹನೂರೋಷಭೀ
ಷ್ಣಂಗಳುಂ ಊರ್ಧ್ವಕರ್ಣಂಗಳುಂ ಭೂಮಿ ಭೃ
ತ್ಕಂದರಾಶ್ಚರ್ಯಪಾವ್ಯಾತ ಘೋರಾಸ್ಯನಾ
ಸಾಪುಟಂಗಳ್ ಅದೀರ್ಘೋನ್ನತಗ್ರೀವವುಂ
ದೀರ್ಘದಂತೊಪ್ಪುವೋ ದೇಹವಂ ವಿಸ್ತೃತೋ
ರಸ್ಥಲವ್ಯಕ್ತ ಶ್ರೀವತ್ಸ ಸತ್ಕೌಸ್ತುಭಾ
ಲಂಕೃತ ಶ್ರೀರಮಾ ಲಾಲಿತ ಶ್ರೀ ತುಳ
ಸ್ಯಾಪ್ತ ಮುಕ್ತಾವಳೀ ಚಿತ್ರ ರತ್ನಾವಳೀ
ಪ್ರಾಂಚದಂ(?)ಕ್ಕಾಂಚನೀ ಮಾಲಿಕಾ ಗಂಧ ಕ
ಸ್ತೂರಿಕಾ ಲೇಪವುಂ ಹೀರ ಗಂಭೀರ ವಿ
ದ್ಯುತ್ಪ್ರಭಾ ಕುಂಡಲೋದಾರ ಕೇಯೂರ ಸ
ತ್ಕಂಕಣಾಂಗುಳ್ಯ ಹಾರಾಧಿಕಾ ಭೂಷಣೋ
ದ್ದೀಪವುಂ ಉದ್ಯದುತ್ಫುಲ್ಲ ಚಂದ್ರಾಂಶುವ
ರ್ಣಪ್ರಭಾ ಪ್ರಸ್ಫುರದ್ದೇಹ ರೋಮಚ್ಛಟಾ
ಪುಲ್ಕವುಂ ಮತ್ತ ಶುಂಡಾಲ ಶುಂಡಪ್ರಕಾಂ
ಡ ಪ್ರಚಂಡೋಲ್ಲಸದ್ದೋಹ ಸಾಹಸ್ರ ದೀ
ಪ್ತಾಯುಧಾಭೋ ನಖಾನೀಕವುಂ ಚಕ್ರ ಶಂ
ಖಾದಿ ನಾನಾಯುಧ ಶ್ರೇಷ್ಠ ವಿದ್ರಾವಿತಾ
ಭದ್ರ ರಕ್ಷಃ ಪಿಶಾಚಾಸುರೋದ್ರೇಕವುಂ
ಪ್ರೋನ್ನಿತಂಬೋರು ಸತ್ಸಾನು ಜಂಘಪ್ರದೇ
ಶಾವೃತ ಪ್ರೋಲ್ಲಸತ್ಪೀತ ಕೌಶೇಯವುಂ
ಬದ್ಧಕಾಂಚೀಕಟಿಸ್ಥಾನವುಂ ಮಂಜುಮಂ
ಜೀರ ಸಂಚಿನ್ನನಾದಾಂಘ್ರಿಕಂಜಾತ ವಿ
ನ್ಯಾಸವುಂ ಕೋಟಿ ಮಾರ್ತಾಂಡ ಸಂಕಾಶವುಂ
ಪ್ರೋಲ್ಲುದಂಥಾ ದುರಾಲೋಕವಂತಿಪ್ಪ ಜ್ವಾ
ಲಾ ನೃಸಿಂಹಾಕೃತಿ ಸ್ವಾಮಿನಂ ನೋಡುತಾ
ದೃಷ್ಟಿಗಳ್ ಬಾಗೆ ತಾ ನಿಂತು ನನ್ನವರಜಾ
ರಾಶಿಯಿಲಾದ ಸ್ವಯಂ ಜ್ಯೋತಿ ಈ ರೀತಿ ತಾ

ನಿಂದಿಗೇ ನಾರಸಿಂಹಾಕೃತೀಯಾಗಿ ನಾಂ
ಪುತ್ರ ಸಂಹಾರಕುದ್ಯುಕ್ತನಾಗಿಪ್ಪೊಡೇ
ಎನ್ನ ಸಂಹಾರಕಾಗಿಲ್ಲಿಗೇ ಬಂದನೋ
ಇನ್ನು ಮೇಲೀತನಿಂದೆನ್ನಗೇ ಮೃತ್ಯು ತಾ
ಸಿದ್ಧವಾಂತಿಪ್ಪುದೇನೋ ಪುರಾಣಪ್ರಸಿ
ದ್ಧೋಕ್ತ್ಯಭಿವ್ಯಕ್ತಿಗೈತೇನಹೋ ಎಂದು ಮಾ
ತಾಡುತಾ ನಿಂತು ಉದ್ಯದ್ಗದಾಧಾರಿ ತ
ತ್ತೇಜ ಲಕ್ಷ್ಯೈಸದೇ ಶಲ್ಭವಾ ಕಕ್ಷಭುಕ್
ಜ್ವಾಲೆಯೋಳ್ ಬಿದ್ದುದೆನ್ನೇ ಸಮುದ್ಯುದ್ಧಸ
ನ್ನದ್ಧನಂತಾಗಿ ನೃಸಿಂಹನಲ್ ಹಾರಿದಂ.

ಪೂರ್ವದಲ್

ಅಸ್ಯತೇಜೋಂಶದಿಂದಲ್ ಜಗಧ್ವಾಂತ ಯಾ
ವತ್ತುಮಿಂ ತರ್ಕ ಸ್ವಯಃ ಪಾನಮಾಡಿಪ್ಪ ಸ
ತ್ಯಾತ್ಮಗೀ ನಾರಸಿಂಹಾತ್ಮಗೇ ಈ ಹಿರ
ಣ್ಯಾಸುರ ಶ್ರೇಷ್ಠ ಸಂಹಾರ ಹೆಚ್ಚಲ್ಲವಂ
ತಾದರುಂ ಲೋಕದೃಷ್ಟ್ಯಾನುಸಾರ ಕ್ರಿಯಾ
ಕಾರಿಯಾಗಿಪ್ಪ ನೃಸಿಂಹನುದ್ಯದ್ಗದಾ
ಧಾರಿ ತಾನಾಗಿ ಸದ್ವಿದ್ಯುದಾಭೋದ್ಯಮು
ದ್ವೇಗವೇಗೋರು ಸಂಪದ್ಗದಾ ದಂಡವಂ
ಕೊಂಡು ಯುದ್ಧಕ್ಕೆ ಬಾಹೋ ಮಹಾದೈತ್ಯವ
ರ್ಯನ್ನ ತಾ ನೋಡಿ ರೋಷೋಜ್ವಲ ಜ್ವಾಲೆಗಳ್
ಲೇಲಿಹಾನೋಲ್ಲಸಜ್ಜಿಹ್ವೆಯಿಂದಲ್ ಪ್ರಕಾ
ಶೈಸುತಾ ಚೀರುತಾಗಾಟ್ಟಹಾಸಕ್ರಮು
ನ್ಯಾಸದಿಂ ಹಾರುತಾ ಕೋಟಿ ಸೂರ್ಯಪ್ರಭಾ
ಬೀರುತಾ ಆ ಗರುತ್ಮಂತ ಕಾಳಾಹಿನಂ
ಪಿಡಿವನಂತೊಪ್ಪಿ ತಾನಾ ದಿತೀಪುತ್ರನಲ್
ದೂಕಿದಂ ಶೀಘ್ರದಲ್ ಪಿಡಿದನಾ ದೈತ್ಯರಾ
ಜೇಂದ್ರನಾವೇಳೆ ತದ್ಧಸ್ತದೋಳ್ ಸಿಕ್ಕದೇ
ಸುಕ್ಕದೇ ಘಕ್ಕನೇ ಬಿಡಿಸಿಕೊಂಡಾ ಗದಾ
ದಂಡವಂ ಕೊಂಡು ಸನ್ನದ್ಧ ಸದ್ಯುದ್ಧವಂ
ಮಾಡುವೋನಂತೆ ಯಾವಾಗ ನೃಸಿಂಹನಲ್
ಸಿಕ್ಕಿ ಮತ್ತೇ ಬಿಡೂವಾದನಾ ವೇಳೆಯುಲ್

ಶರ್ವ ಶಕ್ರಾದಿ ದಿಕ್ಪಾಲಕಾನೀಕವುಂ
ಸೂರ್ಯಚಂದ್ರಾದಿ ಸರ್ವಗ್ರಹರ್ಕ್ಷಾವಳೀ
ಲೋಕವುಂ ಮೇಘಸಂತಾನದೊಳ್ ಲೀನವಾ
ಗಿದ್ದು ಇನ್ನೇನು ಈ ದೇವತಾರಾತಿ ಈ
ನಾರಸಿಂಹಾತ್ಮನಲ್ ಸಿಕ್ಕದೇ ದಕ್ಕದಂ
ತಿಪ್ಪನೇ ಈತನೀ ದುಷ್ಟದೈತ್ಯನ್ನ ಗೆ
ಲ್ಲಾರನೋ ಗೆಲ್ವನೋ ಎಂದು ತದ್ವೀರ್ಯವಂ
ತಿಳಿಯದೇ ಭ್ರಾಂತ ಚಿಂತಾಂತರಂಗೋದ್ಯಮು
ದ್ವೇಗದಿಂ ಕಾಂಬದಂತಿಪ್ಪುದಂ.
ಆಮೇಲೆ ಘಾಲ್ ಕತ್ತಿ ಕೈ
ಗೊಂಡು ಆಯಾಸದಿಂದಲ್ಲಿ ಆ ದೈತ್ಯನಾ
ನಾರಸಿಂಹಾತ್ಮನಲ್ ಸಂಗರ ಶ್ರಾಂತಿ ಮು
ತ್ತೇನು ತಾ ಕಾಣದೇ ದೂಕಿದಂ ತಾಕಿದಂ
ಸೋಕಿದಂ ಅಂಘ್ರಿವಿನ್ಯಾಸಗಳ್ ಕೂಡಿ ತಾ
ಮೇಲೆಯುಂ ಕೆಳಗೆಯುಂ ಶ್ಯೇನಪಕ್ಷಂತ ಸು
ತ್ತಾಡುತಾ ಛಿದ್ರವಂ ಕಾಣದೇ ತನ್ನನೇ
ಪಿಡಿವುದಕ್ಕಾತನಂತೋಡುತಾ ಬಾಹೊ ಬ
ಲ್ಲಿಷ್ಠನಾ ಅಟ್ಟಹಾಸ್ಯೈಸಿಯುಕ್ಕೇಸರಂ
ಗಳ್ ಪ್ರಸಾದ್ಯೈಸಿ ಕ್ರೂರಾಹಿತಾನಂದಘ
ಗ್ರಾಹಿಯಂತೇ ಸ್ವಭಾ ಸಾಸಿರಂ ಸೂಸಿ ಜಂ
ಘಾಲ ಲೀಲಾ ಸಮುಲ್ಲಂಘನಾ ಗೋಪದಿಂ
ಹಾರಿಯಾ ನಾರಹರ್ಯಕ್ಷನಾ ದೈತ್ಯದ
ಕ್ಷನ್ಪಿಡಿರ್ದಂ ಫಟಾಫಟ್ ತಲಾಘಾತವಂ
ಗೈಲ್ಬಡಿರ್ದಂ ಧಟಾಧಟ್ ಪದಾಘಾತದಿಂ
ದಲ್ ಹೊಡೆರ್ದಂ ಗದಾಘಾತದಿಂದಲ್ ಮಹೋ
ರಸ್ಕಿಡಿರ್ದಂ ಸಭಾದ್ವಾರದಲ್ ಹಾಕಿ ಭಾ
ಸ್ವನ್ನಖ ಶ್ರೇಣಿಯಿಂದಲ್ ಫಟಾಫಟ್ ಗರು
ತ್ಮಂತ ಕಾಲಾಹಿನಂ ಸೀಳುವೋ ರೀತಿ ಜಂ
ಭಾರಿದಂಭೋಳಿಯಂತಾಗಲುಂ ಸೀಳುತಿ
ರ್ದಾ ಮಹಾದೇಹವನ್ನಾ ಹಗಲ್ ರಾತ್ರಿಯೊಂ
ದಲ್ಲದ್ದಾಗೇ ದಿವಾಸಂಧಿಯಲ್ ಸೀಳಿದಂ.
ಘೋರ ಸಂರಂಭ ದಂಷ್ಟ್ರೇಕ್ಷವ್ಯಾವೃತ್ಕರಾ

ಳಾಕ್ಷನಾಗಿ ಸ್ವಜಿಹ್ವಾಗ್ರಹದಿಂದಲ್ ಲಸ
ದ್ವ್ಯಾತ್ತ ವಕ್ತ್ರಾಂತ ಶೋಣಿಯು ಮಾನಾಧರಾ
ದ್ಯಂತವಂ ಲೇಲಿಹಾನೋಗ್ರವಂ ತೋರುತಾ
ರಾಕ್ಷಸ ಶ್ರೇಷ್ಠನಂ ಪಿಡಿದು ವಕ್ಷೋನ್ನತ
ಸ್ಥಾನವಂ ತೋಡಿ ಕಾಸಾರವಂ ಮಾಡುತಾ
ರಕ್ತದಂತೊಪ್ಪುವೋ ತತ್ತ್ರಪಸ್ಸಾರ ಯಾ
ವತ್ತ್ರಿ ತಾ ಪೀರುತಾ ಬಾರಿಬಾರೆದ್ದು ತ
ದ್ದುಷ್ಟ ರಕ್ತಂಗಳಂ ಬೊಗಸೆಯುಲ್ ತುಂಬಿ ಭೇ
ತಾಳ ಭೂತಾಳಿಗೇ ಚಿಮ್ಮುತಾ ಖಂಡಗಳ್
ಗೊಂಡು ಹಾರೈಸುತಾ ಮತ್ತ ಶುಂಡಾಲ ಸಂ
ಹಾರದಲ್ ಮುಂಚುವೋ ಘೋರ ಪಂಚಾನನೋ
ದಾರ ಲೀಲೆಂಗಳಂ ಬೀರುತಾ ರಾಕ್ಷಸಾ
ಧ್ಯಕ್ಷ ವಕ್ಷಸ್ಸಿನೋಳ್ ಕಿತ್ತುತಾ ಹಾರಗಳ್
ಮಾಡಿಕೊಂಡೊಪ್ಪಿ ತದ್ರಕ್ತ ಸಿಕ್ತಾನನೋ
ದ್ಯಚ್ಚಟಾ ಕೇಸರಂಗಳ್ ಪ್ರಕಾಶೈಸುತಾ
ದೈತ್ಯರಾಜೇಂದ್ರನಾ ಪ್ರಾಣಗಳ್‌ಗೊಂಡನಾ
ಮೇಲೆ ಸುತ್ತಿದ್ದ ತದ್ಬಂಧು ಸಂದೋಹದ
ಲ್ಲಿದ್ದನೇಕಾಸುರೀನೀಕವಂ ಸಾಯುಧೋ
ದ್ರೇಕವಂ ಆಲ್ಲಕಲ್ಲೋಲವಂ ಮಾಡಿ ಚಂ
ಚನ್ನಖಶ್ರೇಣಿಯುಂ ಸಂಹರಂ ಮಾಡಿದಂ.
ಆಗ ತದ್ಭೀಕರಾಕಾರವಂ ಕಾಂಬ ಶ
ಕ್ತ್ಯಾವುದಂ ಕಾಣದೇ ತತ್ಸಟಾ ಕೇಸರೋ
ದ್ಧೂತ ಸಂಘಾತಗಳ್ ಘೋರ ಜೀಮೂತಗಳ್
ಸರ್ವವಂ ನೋಡುತಾ ಮರ್ತ್ಯಸಿಂಹೋಗ್ರದೃ
ಷ್ಟಿಜ್ವಲಜ್ವಾಲೆಗಳ್ ಸೈಸದೇ ಸೂರ್ಯಚಂ
ದ್ರಾದಿ ಸರ್ವಗ್ರಹಕ್ಷ್ಮಾವಳೀ ಕಾಂತಿಗಳ್
ತಪ್ಪಿರೇ ತನ್ಮಹೋಚ್ಛ್ವಾಸದಿಂದಬ್ಧಿ ಸಂ
ದೋಹ ಸಂಕ್ಷೋಭಗೊಂಡೆಲ್ಲ ಒಂದಾಯ್ತು. ಆ
ದಿಗ್ಗಜಾನೀಕಗಳ್ ಹಿಗ್ಗುತಾ ಕುಗ್ಗುತಾ
ದೇವನಾನೀ ವಿಮಾನಾಳಿಯಾಕಾಶದಲ್
ತತ್ಸಟೋ ಕ್ಷಿಪ್ತ ಯಾನಾಳಿಯಾಗೆಲ್ಲಿ ನಿ
ಲ್ಲಾಡದೇ ಸರ್ವವಂ ಸುತ್ತಿತಾ ಪಾದ ಸಂ

ಘಟ್ಟದಿಂದಲ್ ಧರಾಚಕ್ರವಲ್ಲಾಡಿತಾ
ಘೋರ ತೇಜಸ್ಸಿ[ಗ]ವಕಾಶಂಗಳಾಕಾಶವುಂ
ಬಾಡಿತಾ ಶಾಕಿನೀ ಡಾಕಿನೀ ಮುಖ್ಯ ದು
ಷ್ಟಗ್ರಹಾನೀಕವುಂ ಭೀತಿಗೊಂಡೋಡಿತಾ
ಮೇಲೆ ಉದ್ಯತ್ಸಭಾ ಮಧ್ಯೆ ದೈತ್ಯೇಂದ್ರ ಸಿಂ
ಹಾಸನಸ್ಥಾನದಲ್ ನಾರಸಿಂಹಂ ಸಮಾ
ಸೀನನಾಗಿಪ್ಪನಾ ತೇಜ ಓಜ ಪ್ರಭಾ
ಪುಂಜರಂಜನ್ನ ಭಾಸ್ವತ್ಕರಾಳೋಗ್ರ ಜಿ
ಹ್ವ ಸ್ಫುರದ್ದಂಷ್ಟ್ರ ವಕ್ತ್ರನ್ನ ಭಿಭ್ರುಲ್ಲಸ
ದ್ಭ್ರೂತನಂ ಆ ಮಹಾಕೋಪ ಸಂರಂಭ ಗಂ
ಭೀರ ನೇತ್ರನ್ನ ಕಣ್ಣೆತ್ತಿ ಕಾಂಬೋದರಲ್
ಬ್ರಹ್ಮ ರುದ್ರಾದಿಗಳ್ ಶಕ್ತಿಯುಂ ಸಾಲದೇ
ದೂರದಲ್ ಪಾರ್ಶ್ವ ಭಾಗಸ್ಥರಾಗಿಪ್ಪರಂತೇ.
ಆಗ ಮೂಲೋಕ ಸಂತಾಪಿಯಾಗಿಪ್ಪ ದೈ
ತ್ಯನ್ನ ನಾರಾಯಣಂ ನಾರಸಿಂಹಾಕೃತೀ
ಯಾಗಿ ಸಂಹಾರವಂ ಮಾಡಿದಂ ಎಂಬುದಾ
ವಾರ್ತೆ ಕೇಳುತ್ತಲೇ ದೇವನಾರೀಜನಂ
ಗಳ್ ಪ್ರಹರ್ಷಾನನೋತ್ಫುಲ್ಲರುಲ್ಲಾಸದಿಂ
ವಾಸಿತಾಮೋದ ಮಂದಾರ ಕುಂದಾರವಿಂ
ದಾದಿ ಸತ್ಪುಷ್ಪ ಸಂತಾನ ವರ್ಷಂಗಳಂ
ವರ್ಷಿಸುತ್ತಿಪ್ಪರಾಕಾಲಮಾಕಾಶದಲ್
ನಿಂತು ಕಾಣೂವರಾ ದೇವದೇವೀ ಸಮೂ
ಹಂಗಳಾಯಾವಿಮಾನಂಗಳೆಲ್ಲಾ ಮಹಾ
ಸಂಕುಲೀಭೂತವಾಗಿಪ್ಪವಾ ದೇವತಾ
ದುಂದುಭಿಧ್ವಾನ ಇಂಬಾಗಿ ತಾ ದೇವಗಂ
ಧರ್ವ ಸಂಗೀತ ನಾಟ್ಯಂಗಳಿಂದಪ್ಸರಾ
ಕಾಮಿನೀ ತಾನ ಗಾನಂಗಳಿಂದಾಗ ಆ
ಕಾಶವುಂ ತುಂಬಿತಾ ಬ್ರಹ್ಮರುದ್ರೇಂದ್ರಮು
ಖ್ಯಾಮರ ಶ್ರೇಣಿಗಳ್ ಪಿತೃಗಳ್ ಮನ್ವಗಳ್
ಸಿದ್ಧವಿದ್ಯಾಧರಾನೀಕಗಳ್ ಅಪ್ಸರಾ
ಕಾಮಿನೇರಾ ಪ್ರಜಾಪಾಲ ಗಂಧರ್ವರಾ
ಯಕ್ಷ ಕಿಂಪುರುಷರಾ ಚಾರಣಾನೀಕವಾ

ಕಿನ್ನರಸ್ತ್ರೋಮ ನಂದಾ ಸುನಂದಾದಿ ತ
ತ್ಪಾರ್ಷದಾನೀಕವೆಲ್ಲಾ ಶಿರೋಭಾಗದಲ್
ಪಾಣಿಗಳ್ ಜೋಡಿಸೀತೆಲ್ಲ ಮುನ್ನಾತಿ ದೂ
ರಸ್ಥರಾಗಿದ್ದು ನಿಂತಾಮೃಗೇಂದ್ರಾಸನಾ
ಸೀನನಾಗಿಪ್ಪ ಅತ್ಯುಗ್ರ ತೇಜಸ್ವಿನಂ
ಮೆಲ್ಲನೇ ಬೇರೆ ಬೇರಾಗಿ ಕೊಂಡಾಡುತಾ
ನಿಂತರಾವೇಳೆಯುಲ್ ಬ್ರಹ್ಮ ತಾಂ ಭಾಷಿಪಂ
ನಿನಗೆ ವಂದಿಸುವೆಂ ತಂದೆ ನೀನೇ ಅನಂ
ತಂ ದುರಂತ್ಯೋರು ಶಕ್ತ್ಯುಳ್ಳವಂ ಲೋಕಪಾ
ವಿತ್ರ್ಯ ಕರ್ಮ್ಯಂ ಮಹಾಶ್ಚರ್ಯ ವೀರ್ಯಂ ಜಗ
ತ್ಸೃಷ್ಟಿ ಸಂರಕ್ಷ ಸಂಹಾರಗಳ್ ಲೀಲೆಯಿಂ
ದಲ್ ಸದಾ ಮಾಳ್ಪೆಯೋ ಅವ್ಯಯಾತ್ಮನ್ನೆ ನೀ
ನೆಂದನಂ.

ಈಶ ತಾ ಬಂದೆಲೋ ತಾತನೇ
ನಿನ್ನಗೀ ಕೋಪ ಬಾಹೋದಕಿಂದಾ ಯುಗಾಂ
ತಾಖ್ಯ ವೇಳ್ಯಲ್ಲವೋ ಕ್ಷುಲ್ಲನೀ ದೈತ್ಯನೀ
ವೇಳೆ ನಿನ್ನಿಂದ ತಾರ್ ಮೃತ್ಯುಪಾಲಾದನಂ
ತಿನ್ನುಮೇಲ್ ಕೋಪ ಸಂಕ್ಷೇಪ ಮಾಡಯ್ಯ ಈ
ದೈತ್ಯ ಪುತ್ರನ್ನ ಪ್ರಹ್ಲಾದನಂ ಸರ್ವದಾ
ನಿನ್ನ ಭಕ್ತನ್ನ ಸಂರಕ್ಷಿಸೋ ಭಕ್ತವಾ
ತ್ಸಲ್ಯದಿಂದೆಂದನು.

ಇಂದ್ರ ತಾ ನಿಂತೆಲೋ ಸ್ವಾಮಿಯೇ ಅಣ್ಣತ
ಮ್ಮಿಂದ್ರ ದೀಟಾಗಿ ನೀನೇ ಸದಾ ನಮ್ಮ ಸಂ
ರಕ್ಷಿಸೂವೇಯೊ ನಿನ್ನಿಂದಲಾ ಯಜ್ಞ ಭಾ
ಗಂಗಳುಂ ನಮ್ಮಗೇ ಮತ್ತೆ ಉಂಟಾದವ
ಯ್ಯಾ ಹಿರಣ್ಯಾಸುರಂಗಾದಂದೀಗೆಮ್ಮ ಸು
ಸ್ವಾಂತಗಳ್ ನಿನ್ನಗಾವಾಸಯೋ[ಗ್ಯ]ತ್ವ ಪೊಂ
ದಿಪ್ಪುವಂತೆ ವಿಕಾಸ್ಯೈಸಿತೋ ನಿನ್ನ ಶು
ಶ್ರೂಷೆ ಬೇಕೆಂಬ ಲೋಕಾಳಿಗೇ ಕಾಲ ಸಂ
ಗ್ರಸ್ತವಂತಿಪ್ಪ ಲೋಕಾಳಿಯುಲ್ ಯಾವದೂ
ಲಕ್ಷ್ಯವಿಲ್ಲಂತೆ ಮುಕ್ತ್ಯಾದರುಂ ಹೆಚ್ಚು ನಿ
ಶ್ಚೈಸುವಂತೇ ನೃಹರ್ಯಾತ್ಮನೇ ಮಿಕ್ಕ ಸಂ

ಭೂತಿಯಿಂದಾಗಬೇಕಾದುದೇನಿಪ್ಪುದೆಂ
ದಂ.
ಋಷಿಸ್ತೋಮವುಂ ನಿಂತಲೋ ಬೊಮ್ಮ ನೀ
ನೆಮ್ಮ ಶ್ರೇಯಸ್ಸಿಗೇ ಮುನ್ನ ನಿನ್ನ ಸ್ವತೇ
ಜಾಂಶವನ್ನೇ ತಪೋಯೋಗವಂ ನಮ್ಮಗೇ
ಕೊಟ್ಟೆಯೊ ಆ ತಪಸ್ಸಿಂದ ನಿನ್ನಲ್ಲಿ ಹೋ
ವಿಶ್ವವೆಲ್ಲಾ ಬಹೀರಂಗ ಮಾಡೀದೆಯೋ
ನಮ್ಮದಂಥಾ ತಪಸ್ಸಂ ಹಿರಣ್ಯಾಸುರ
ಶ್ರೇಷ್ಠತಾ ಕದ್ದನಂತಿದ್ದನೇ ಈಗ ನೀ
ನೀ ಜಗದ್ರಕ್ಷಣಕ್ಕಾಗಿಯೇ ಭಕ್ತ ಸಂ
ರಕ್ಷನೇ ನಾರಹರ್ಯಕ್ಷನಾಗಿನ್ನು ರ
ಕ್ಷೋಗಣಾಧ್ಯಕ್ಷ ವಕ್ಷಸ್ಕವಂ ಸೀಳಿ ನೀ
ನಮ್ಮಗೆಲ್ಲಾ ತಪೋಯೋಗವಂ ಮತ್ತೆ ತಂ
ದಿತ್ತೆಯೆಂತೆಂದರು.
ಪಿತೃಗಳ್ ನಿಂತಲೋ
ಧರ್ಮರೂಪೀಯೆ ಇಂಥಾ ಕ್ರಿಯಾಲಾಪಗಳ್
ಪುತ್ರರಿಂದಲ್ ತಿಲೋದಾಗಳಿಂದಲ್ ಮಹಾ
ಪುಣ್ಯ ತೀರ್ಥಂಗಳಲ್ ಕ್ಷೇತ್ರ ಪಾತ್ರಂಗಳಲ್
ನಮ್ಮ ನಮ್ಮಲ್ಲಿ ಇಂತಿತ್ತ ಶ್ರಾದ್ಧಂಗಳಂ
ತನ್ನ ಪ್ರೀತ್ಯರ್ಥವೆಂತಿರ್ದನೈ ನಾಥ ಸಂ
ಪೂರ್ಣ ಸೌಭಾಗ್ಯ ಸಂಸ್ಥಾನಿಯೋ ನೀನು ಭಾ
ಸ್ವನ್ನಖ ಶ್ರೇಣಿಯಿಂದಲ್ ಮಹಾ ದೈತ್ಯವ
ಕ್ಷಸ್ಕವಂ ಸೀಳಿ ಇತ್ತಾವ ಪಾಂತ್ರಾತ್ಮಿಕಾ
ಶ್ರಾದ್ಧ ನಮ್ಮಲ್ಲಿ ತಾ ಸೇರಿತೈ ನಾರಹ
ಯರ್ಯಾತ್ಮನೇ ನಿನ್ನಗೇ ನಾವು ಸಾಷ್ಟಾಂಗಪ್ರ
ಣಾಮಗಳ್ ಮಾಡುವೇವೆಂದರು.
ಸಿದ್ಧರೆಲ್ಲಾಂಜಲೀಬದ್ಧರಾಗೆದ್ದಲೋ
ಅಷ್ಟಸಿದ್ಧಾತ್ಮನೇ ನಮ್ಮಲಿದ್ದಾ ಮಹಾ
ಯೋಗ ಸಿದ್ಧಿಂಗಳೆಲ್ಲಾ ತಪೋಯೋಗಸಾ
ಮರ್ಥ್ಯದಿಂ ಕದ್ದನೇ ಗೆದ್ದೆನೆಂತಿದ್ದ ದೈ
ತ್ಯ ಪ್ರಬುದ್ಧನ್ನ ವಕ್ಷಸ್ಕ ಸಂಭಿನ್ನವಂ
ಮಾಡಿಯಾ ನಮ್ಮಗಾಧಾರವಾಗಿದ್ದ ಸ

ದ್ಯೋಗ ಸಿದ್ಧಿಂಗಳಂ ಮತ್ತೆ ನೀನಿತ್ತೆಯೋ ೩೭೦
ನಾರಸಿಂಹಾತ್ಮ ನಾವೆಲ್ಲರುಂ ನಿನ್ನಗೇ
ವಂದನಂಗಳ್ ಸಮರ್ಪಿಸುವೇವೆಂದರು
ಆಮೇಲೆ ವಿದ್ಯಾಧರಾನೀಕಗಳ್ ನಿಂತೆಲೋ
ಸರ್ವ ವಿದ್ಯಾತ್ಮನೇ ನಮ್ಮಲಿದ್ದಾ ಪೃಥಕ್
ಧಾರಣಾಯೋಗ ಸಂಪಾದ್ಯಗಳ್ ವಿದ್ಯೆಗಳ್
ನಷ್ಟಗೈಸಿದ್ದನತ್ಯಂತ ದರ್ಪಿಷ್ಠನೀ
ಅಜ್ಞ ದೈತ್ಯೇಂದ್ರನಾ ಯಜ್ಞದೋಳ್‌ಬದ್ಧ ಪ
ಶ್ವಂತೆ ತಾನಿಂದು ನಿನ್ನಿಂದಲಾ ಮೃತ್ಯುಪಾ
ಲಾದನೇ ನಮ್ಮ ಸದ್ವಿದ್ಯೆಗಳ್ ಮತ್ತೆ ನ
ಮ್ಮಲ್ಲೆ ಬಂದಿಪ್ಪುದಯ್ಯಾ ನೃಹರ್ಯಾತ್ಮ ತು ೩೮೦
ಭ್ಯಂ ನಮೋ ಎಂದರು.
ನಾಗರಾವೇಳೆಲೋऽ
ನಂತನೇ ನಮ್ಮಲಿದ್ದಾ ಮಹಾರತ್ನಗಳ್
ಮಾನಿನೀ ರತ್ನಗಳ್ ತಾ ಬಲಾತ್ಕಾರದಿಂ
ಗೊಂಡನೀ ಪಾಪೀ ದೈತ್ಯನ್ನ ವಕ್ಷಸ್ಕವಂ
ಸೇದಿ ಈ ರತ್ನಗಳ್ ಮತ್ತೆ ನೀ ನಮ್ಮಗೇ
ಸೇರುವಂತೇ ದಯಾಮಾಡಿದೀಯ್ಯೆ ನಮ
ಸ್ತೇ ನಮೋ ಎಂದರು.
ಮನ್ವುಗಳ್ ನಿಂತೆಲೋ
ಧರ್ಮಸಂರಕ್ಷನೇ ನಾವು ನಿನ್ನಾಜ್ಞೆಯಿಂ
ದೀ ಪ್ರಜಾನೀಕಕೇರ್ಪಾಟು ಮಾಡಿದ್ದ ಮ
ರ್ಯಾದೆಗಳ್ ಸರ್ವವೀ ದೈತ್ಯ ತಾ ಕೆಡಿಸಿ ಕ ೩೯೦
ಲ್ಲೋಲವಂ ಮಾಡಿ ನಿನ್ನಿಂದಲೀ ಈಗ ಸಂ
ಹಾರಿಸಲ್ಪಟ್ಟನೇ ಇನ್ನು ಮೇಲ್ ನಾವು ನಿ
ಮ್ಮಿಟ್ಟ(ಕ್ತಿ ?)ಗಳ್ ನಡೆಸುವೇವೆಮ್ಮಗಾಜ್ಞಾಪಿಸೋ
ನಾವು ತ್ವದ್ದಾಸ್ಯವಂ ಬಯಸಿದೇವೆಂದರು.
ಆ ಪ್ರಜೇಶ್ಯಾಳಿಗಳ್ ನಿಂತು ಕೇಳೋ "ಪ್ರಜೇ
ಶಾ ವಯಂ ತೇ ಪರೇಶಾಭಿಸೃಷ್ಟಾ ನ ಯೇ
ನ ಪ್ರಜಾ ವೈ ಸೃಜಾಮೋ ನಿಷಿದ್ಧಾಃ ಸ ಯೇ
ಷ ತ್ವಯಾ ಭಿನ್ನವಕ್ಷಾನು ಶೇತೇ ಜಗ
ನ್ಮಂಗಲಂ ಸತ್ವಮೂರ್ತೇऽವತಾರಃ" ಪ್ರಭೋ

ಎಂದರು.

ಆಗ ಗಂಧರ್ವರೆಲ್ಲಾ ಎಲೋ ೪೦೦
ಸ್ವಾಮಿಯೋ ನಾವು ನಿಮ್ಮ ಪ್ರಸನ್ನಾವತಾ
ರೈಕ ಲೀಲಾ ಕಥಾಸೂಕ್ತಿಗಳ್ ನಾಟ್ಯ ಶೃಂ
ಗಾರ ಚೇಷ್ಟಾ ಕಳಾದರ್ಶನಾದ್ಯಭಿನಯಶಾ
ವ್ಯಕ್ತಿಗಳ್ ತಾನ ಗಾನಾನುಸಂಧಾನ ಸ
ನ್ಮೋಹಿನೀ ಶಕ್ತಿಗಳ್ ಕೂಡಿ ಆಶ್ರಾಂತವುಂ
ನಿನ್ನ ಕೊಂಡಾಡುತಾ ಗಾಯಕಶ್ರೇಷ್ಠರಂ
ತಿಪ್ಪೆವೇ ತನ್ನ ಸದ್ವೀರ್ಯತೇಜೋಬಲೋ
ಜಸ್ಕದಿಂದಲ್ ಪ್ರಭೋ ನಮ್ಮ ಸಾಮರ್ಥ್ಯಗಳ್
ತನ್ನಗಾಧೀನ ಮಾಡಿಟ್ಟುಕೊಂಡಿದ್ದನೀ
ದೈತ್ಯನೀ ವೇಳೆ ನಿನ್ನಿಂದ ಪಂಚತ್ವವಂ ೪೧೦
ಕೂಡನೇ ಪೊಂಗಲಿಕ್ಕಿಚ್ಚೆ ತಾ ಕುಂಗಲಿ
ಕ್ಕಲ್ಲದೇ ಉತ್ಪಥಸ್ಥಾಯಿ ಯಾವಾತನುಂ
ಕ್ಷೇಮ ತಾನೇನು ಕಾಣೂವನೋ ಎಂದರು.

ಚಾರಣಾನೀಕವುಂ ನಿಂತೆಲೋನಾಥನೇ
ಸಾಧು ಸಂತಾಪಿಯಾಗಿದ್ದನೀ ಪಾಪಿ ದೈ
ತೇಯು ನಿನ್ನಿಂದ ತಾಂ ಬಿದ್ದನೇ ನಾವು ಕದ್
ಕಳ್ಳರಂತಿದ್ದೆವೇ ಇನ್ನು ಮೇಲ್ ನಾವು ನಿ
ನ್ನಂಘ್ರಿಕಂಜಾತವಂ ಘೋರ ಸಂಸಾರವಾ
ರಾಶಿ ಸಂಪೋತವಂ ಸರ್ವವಾಶ್ರೈಸುವೇ
ವೆಂದು ಕೊಂಡಾಡಿತು.

ಆ ಯಕ್ಷರೆಲ್ಲಾ ಎಲೋಽ ೪೨೦
ಧ್ಯಕ್ಷನೇ ತ್ವನ್ಮನೋಭಿಜ್ಞ ಕರ್ಮಂಗಳಿಂ
ದಲ್ ಸದಾ ನಿನ್ನಗೇ ಭೃತ್ಯರಾಗಿಪ್ಪ ನಾ
ವೆಲ್ಲರುಂ ದೈತ್ಯಗೇ ಪಾಲಕೀ ಹೊರ್ವರಂ
ತಾದೆವೇ ನಮ್ಮ ಸಂತಾಪಗಳ್ ಬಲ್ಲ ನಿ
ನ್ನಿಂದಲೀ ದೈತ್ಯನೀ ವೇಳೆ ಪಂಚತ್ವವಂ
ಹೊಂದಿದಂ ನಾವು ಸಂತೋಷವಂ ಕಂಡೆವ
ಯ್ಯಾ ನೃಪಂಚಾಸ್ಯನೇ ಪಂಚವಿಂಶಾಖ್ಯ ನೀ
ನೆಂದರು.

ಆಮೇಲೆ ಕಿಂಪೂರುಷಾನೀಕವುಂ

ಬಂದೆಲೋ ಪುರುಷನೇ ನಾವು ಕಿಂಪೂರುಷರ್
ನೀಂ ಮಹಾಪೂರುಷಂ ಈಶ್ವರಂ ನಿನ್ನ ಕೈ ೪೩೦
ಯಲ್ಲಿ ಕುಪೂರುಷಂ ಅಸುರ ಶ್ರೇಷ್ಠ ತಾ
ನಷ್ಟವಾದಂ ಸದಾ ಸಾಧು ಸಂತಾಪವಹಾ
ಡೂವನಾವಾತ ಮುಂದಕ್ಕೆ ಬಂದಾನು ತಾ
ನೆಂದು ಮಾತಾಡಿತು.

ಆಮೇಲೆ ಭೇತಾಳ ಭೂ
ತಾಳಿಗಳ್ ನಿಂತೆಲೋ ದೇವನೇ ನಾವು ಮು
ನ್ನಾ ಸಭಾಸತ್ರ ಸಂಸಂಗದಲ್ ನಿನ್ನ ದಿ
ವ್ಯಾಮಲ ಶ್ಲೋಕಗಳ್ ನಿತ್ಯ ಕೊಂಡಾಡುತಾ
ಭೂರಿಯೂಟಂಗಳಂ ಉಣ್ಣುತಾಲಿದ್ದೆವೇ
ತಾನಿವೆಲ್ಲಾ ಪರಿಗ್ರಾಹಿಸೀ ದೈತ್ಯ ನಿ
ನ್ನಿಂದೆ ಪೆಟ್ಟಾಂತು ತಾ ಪೋದನೇ ದೈವದಿಂ ೪೪೦
ದೊಡಲಿನಲ್ ವೇಗ ತಾ ಪೋದ ದೀಟೆಂದರು.

ಕಿನ್ನರ ಶ್ರೇಣಿಗಳ್ ಬಂದೆಲೋ ಈಶನೇ
ಕೇಳು ನಾವೆಲ್ಲರಾ ಕಿನ್ನರ ಪ್ರಾಣಿಗಳ್
ಪೂರ್ವದಲ್ ನಿನ್ನ ದಾಸಾನುದಾಸರ್ಗಳಾ
ಗಿಪ್ಪೆವೀ ದೈತ್ಯ ನಮ್ಮಿಂದ ತಾ ಬಿಟ್ಟಿ ಕಾ
ರ್ಯಂಗಳೆಲ್ಲಾ ಸದಾ ಮಾಡಿಸೂವಂ ಮಹಾ
ದುಃಖಗೋಣೀಸುವಂ ಇಂಥ ಪಾಪಿಷ್ಠ ದೈ
ತ್ಯನ್ನ ಸಂಹಾರವಂ ಮಾಡಿದೀ ಇನ್ನು ನೀ
ನಮ್ಮಗೆಲ್ಲಾ ಸಮುಲ್ಲಾಸಗಳ್ ಶ್ರೇಯಗಳ್
ಕೊಟ್ಟು ಸಂರಕ್ಷಿಸೋ ನಾರಹರ್ಯಕ್ಷನೇ ೪೫೦
ಎಂದರು.

ಅಚ್ಯುತದ್ವಾರಪಾಲಾಳುಗಳ್
ನಿಂತೆಲೋ ಭೂಮನೇ ಕಂಡೆವೋ ಇಂದಿಗೇ
ನಾರಹರ್ಯದ್ಭುತಾಕಾರವಂ ಲೋಕಕೆ
ಲ್ಲಾ ಸುಖಾನಂದವಂ ನಮ್ಮಗಾಧಾರ ನೀ
ನಲ್ಲದಿನ್ನಿಲ್ಲವೋ ಈತ ವೈಕುಂಠದಲ್
ನಿನ್ನ ದ್ವಾರಸ್ಥನಾಗಿಪ್ಪನಾ ವಿಪ್ರರಿಂದಲ್ ಮಹಾ
ದೈತ್ಯ ಜನ್ಮಕ್ಕೆ ತಾ ಬಂದನೇ ಬಂದನಂ
ತಿಂದಿಗೇ ವೈರಮಾರ್ಗಕ್ಕೆ ನೀನಿಂದು ಗೈ

ದಂಥ ಈ ದೈತ್ಯಸಂಹಾರ ವ್ಯಾಪಾರವೆ
ಮ್ಮಲ್ ಮಹಾನುಗ್ರಹಕ್ಕಾಗಿ ನೀ ಬಂದೆ ನಾವ್
ಬಲ್ಲೆವಯ್ಯಾ ನಮಸ್ತೇ ನಮೋ ಎಂದರು.
ಈ ರೀತಿಯಿಂ ಸಪ್ತಮಸ್ಕಂಧದೊಳಷ್ಟಮಾ
ಧ್ಯಾಯ ಸುಶ್ಲೋಕಿಗಳ್ ನಾಕಿಗಳ್ ಬ್ರಹ್ಮ ರು
ದ್ರಾದಿಕಾನೇಕಗಳ್ ನಾರಸಿಂಹನ್ನ ಸು
ಸ್ತೋತ್ರವಂ ಮಾಡಿ ತತ್ಕೋಪ ಸಂಕ್ಷೇಪಗೈ
ಸೂವ ಸಾಮರ್ಥ್ಯಗಳ್ ಕಾಣದೇ ಬಂದು ಶ್ರೀ
ದೇವಿ ಸಾನ್ನಿಧ್ಯದಲ್ ಸೇರಿ ಅಮ್ಮಾ ಜಗ
ನ್ನಾಥನಂ ಸ್ವಾಂತ ಸಂತೋಷ ಮಾಡೆಂದು ಬಿ
ನ್ನಹಗಳ್ ಮಾಳ್ಪರು.
ಆಮೇಲೆ ಆ ಬಾಲೆ ಸಾ
ಕ್ಷಾಜ್ಜಗನ್ಮೋಹಿನೀ ಲೀಲೆಗಳ್ ಮಿಂಚುತಾ
ಪೊಂಚುತಾ ಬಂದು ಸಿಂಹಾಸನಸ್ಥಾನದಲ್
ಉಗ್ರನಂತಿಪ್ಪ ನೃಸಿಂಹ ಮೂರ್ತ್ಯಗ್ರವಂ
ಕಂಡತಿವ್ಯಗ್ರಳಂತಾಗಿ ಆ ತಾಯಿ ಹಿಂ
ದಕ್ಕೆ ತಾ ಬಂದಳಮ್ಮಮ್ಮ ಏಂ ಗುಮ್ಮನಂ
ತಿಪ್ಪನೇ ಸ್ವಾಮಿ ಮುನ್ನಿಂತು ಆಶ್ಚರ್ಯವಂ
ಈಸು ವಿಕ್ರಮ್ಯವಂ ಎಂದಿಗಾನೆಲ್ಲಿ ಕಂ
ಡಿಲ್ಲವಲ್ಲಾ ಕಿವಿಲ್ಯಾದರುಂ ಕೇಳಲೇ
ಇಲ್ಲವಲ್ಲಾ ಇದೇನೋ ವಿಚಿತ್ರಾಕೃತೀ
ಯಂತೆ ತೋರುವನೆಂದಂಜಿಕೇಗೊಂಡ ರೀ
ತಿಂದ ತಾ ಹೆಜ್ಜೆ ಕಾಲ್ಗೆಜ್ಜೆಗಳ್ ಸಪ್ಪುಳಂ
ಮಾಡದೇ ಮೆಲ್ಲನೇ ಪಾರ್ಶ್ವದಲ್ ನಿಂತಳು.
ಆಮೇಲೆ ಪ್ರಹ್ಲಾದನಂ ಕಂಡು ಸಂಭಾಷಿಪಂ
ಬ್ರಹ್ಮ. ಬಾರೈ ಎಲೋ ವತ್ಸ ನೀನೀ ನೃಸಿಂ
ಹಾತ್ಮನಲ್ ಮೆಲ್ಲನೇ ಸೇರಿ ನಿಮ್ಮಪ್ಪಗಾ
ಗಿಂದು ನಮ್ಮಪ್ಪನಲ್ಲಿಪ್ಪ ತತ್ಕೋಪ ಸಂ
ಕ್ಷೇಪಗೈಸೆನ್ನೆ ತದ್ವಾಣಿಗಳ್ ಕೇಳುತಾ
ಮೆಲ್ಲನೇ ಪಿಲ್ಲೆ ಪ್ರಹ್ಲಾದನಾಹ್ಲಾದದಲ್
ವೈಷ್ಣವಶ್ರೇಷ್ಠ ತಾನಾಗ ಬಂದಂ ಮಹಾ
ಭಕ್ತಿಯಿಂದಲ್ ಮಹೀಮಂಡಲೀ ಮೇಲೆ ಸಾ

ಷ್ಟಾಂಗ ಬಿದ್ದಂ ನಮೋ ಎಂದು ದಂಡ ಪ್ರಣಾ
ಮಂಗಳಂ ಮಾಡುವೋ ವೇಳೆ ತನ್ನಂಘ್ರಿಕಂ
ಜಾತದಲ್ ಬಿದ್ದ ಬಾಲನ್ನ ಬಾಳಾ ಸುಶೀ
ಲನ್ನ ಕಂದನ್ನ ದೃಷ್ಟಿಂದ ತಾ ಕಾಣುತಾ
ಚಕ್ರ ಶಂಖಾಂಕಿತಾ ಶ್ರೀಲಸದ್ಬಾಹುಂಗಳ್
ಚಾಚಿ ಭಕ್ತನ್ನ ತಾನೆತ್ತಿ ತನ್ಮಸ್ತಕ
ಸ್ಥಾನದಲ್ ಪೋಕಲಾಗಿನ್ನಿ ಸಂಸ್ಪ್ರಸ್ತ ಚೇ
ತೋಭಯಧ್ವಸ್ಥವಂ ಸ್ವಸ್ತಿದಾನ ಕ್ರಿಯಾ
ಭ್ಯಸ್ತವಂ ಶ್ರೀ ಸತೀ ಸ್ತಂಬಕವಿನ್ಯಸ್ತವಂ
ಹಸ್ತವನ್ನಿತ್ತನವ್ಯಾಹತ ಸ್ಪರ್ಶದಿಂ
ದಲ್ ವಿಧೂತಾ ಶುಭವ್ರಾತನಾಗೀಯಭಿ
ವ್ಯಕ್ತ ಲಕ್ಷ್ಮೀವಿಲಾಸಾತ್ಮ ಸಂದರ್ಶನೈ
ಶ್ವರ್ಯವಂ ಕೂಡಿ ತತ್ಪಾದ ಪದ್ಮಂಗಳಂ
ಚಿತ್ತದಿಂದಿತ್ತನಾನಂದದಿಂದಲ್ ಪ್ರಹೃ
ಷ್ಯತ್ತನು ಕ್ಲಿನ್ನ ಚಿತ್ತಾಶ್ರುನೇತ್ರಾಬ್ಜನಾ
ಗಿದ್ದು ಪ್ರಹ್ಲಾದನುಂ ನಾರಸಿಂಹಾತ್ಮನಲ್
ನಿಂತು ಸಂಸ್ತೋತ್ರಗಾರಂಭಿಪಂ.
ಶ್ರೀರಮಾ
ದೇವಿ ತಾನಾಗ ಸಮ್ಮೋಹಿನೀ ಸಂಪುಗಳ್
ಕೂಡಿ ಬಂದಾ ನೃಸಿಂಹಾಂಕದಲ್ ನಿಂತಳಾ
ಬ್ರಹ್ಮನಾವೇಳೆಯಲ್ ನಾರಸಿಂಹಾತ್ಮನಲ್
ಸೇರಿ ಸುಕ್ಷೀರ ನೀರಾಭಿಷೇಕಂಗಳಂ
ಚೀನಿ ಚೀನಾಂಬರಂಗಳ್ ಮಹಾನರ್ಘ್ಯ ರ
ತ್ನಾವಳೀ ಭೂಷಣಂಗಳ್ ಲಸನ್ಮೌಕ್ತಿಕಾ
ಹೀರ ಹಾರಂಗಳಂ ಗಂಧಕಸ್ತೂರಿಕಾ
ಲೇಪಗಳ್ ಶ್ರೀತುಳಸ್ಯಾಪ್ತ ಶಾಮಂತಿಕಾ
ತುಂಗ ಮಂದಾರ ಕುಂದಾರವಿಂದಾದಿ ಮಾ
ಲಾದಿಗಳ್ ಸ್ವರ್ಣವರ್ಣೋಪವೀತಂಗಳಂ
ದಿವ್ಯಸಾಹಸ್ರ ನಾಮಾರ್ಚನಂಗಳ್ ಅಗರ್
ಗಂಧ ಸಾಂಬ್ರಾಣಿ ಧೂಪಂಗಳಂ ಚಿತ್ರರ
ತ್ನ ಪ್ರಭಾ ದೀಪಿಕಾ ಪಂಙ್ತಿಗಳ್ ದಿವ್ಯ ನಾ
ನೋಪಹಾರಂಗಳಂ ಕೊಟ್ಟು ತಾ ತಂತ್ರಸಾ

ರೋಕ್ತದಿಂ ದೇವನಂ ಪೂಜೆಗಳ್ ಮಾಡುತಾ
ನಿಂತನಾ ಶರ್ವಶಕ್ರಾದಿ ದಿಕ್ಪಾಲರಾ
ವೇಳೆ ತತ್ಸೇವೆಯಲ್ಲಿಪ್ಪರಾ ವಾಣಿ ಶ
ರ್ವಾಣಿ ಇಂದ್ರಾಣಿ ಮುಖ್ಯಾಂಗನಾ ಶ್ರೇಣಿಗಳ್
ಕೂಡಿ ಶ್ರೀದೇವಿಗೇ ಪೂಜೆಗಳ್ ಮಾಡುತಾ
ನಿಂತರಾ ನಾರಹರ್ಯಕ್ಷನುಂ ಲಕ್ಷ್ಮೀಸ
ಮ್ಮೇತನಾಗಿದ್ದು ಪ್ರಹ್ಲಾದ ಕೈ ಸ್ತೋತ್ರಗಳ್
ಕೇಳುತಾ ಸುಪ್ರಸನ್ನಾತ್ಮ ಇಷ್ಟಾರ್ಥಗಳ್
ಬೀರುತಾ ಬ್ರಹ್ಮರುದ್ರಾದ್ಯರಲ್ ಪೂಜೆಗೊ
ಳ್ತಿದ್ದನೆಂತೆಂದು ಕೌಂತೇಯಗೇ ನಾರದ ೫೩೦
ರ್ಷಿ ಪ್ರಜಾಹರ್ಷಿ ತಾ ನುಡಿದನಾ ರೀತಿ ಶ್ರೀ
ಮತ್ಪರೀಕ್ಷಿನ್ಮಹಾರಾಜಗೇ ವ್ಯಾಸಜಂ
ನುಡಿದನಾರೀತಿಯಾ ಸೂತಪೌರಾಣಿಕಂ
ಶೌನಕಾದ್ಯರ್ಷಿ ಸಂದೋಹಕೇ ನುಡಿದನೆಂ
ತೆಂದು ಶ್ರೀನಾರಸಿಂಹಾವತಾರ ಸ್ಫುರ
ಲ್ಲೀಲೆಯುಂ ನ್ಯಾಪತೀ ಲಕ್ಷ್ಮೀನೃಸಿಂಹನಾ
ನಿಂತು ಕೊಂಡಾಡಿದೆಂ.

ಈ ಕಥಾದಂಡಕೋ
ದ್ದಂಡವಂ ನಿತ್ಯ ಕೊಂಡಾಡುತಾ ಪೇಳುತಾ
ಕೇಳುತಾ ಭಕ್ತಿ ಕೂಡಿದ್ದ ತತ್ಸಾಧು ಸಂ
ತಾನಕೇ ಪಾಪಗಳ್ ಲೋಪಗಳ್ ಮಾಡುತಾ ೫೪೦
ತಪ್ಪುಗಳ್ ನೈಸುತಾ ಐಹಿಕಾಮುಷ್ಮಿಕಾ
ನಂದ ಇಷ್ಟಾರ್ಥಗಳ್ ಶ್ರೀನೃಸಿಂಹಾತ್ಮನಾ
ಗಿದ್ದು ನೀನೀವೆಯೋ ಸ್ವಾಮಿಯೋ ತಲ್ಪಶೈ
ಲೇಂದ್ರ ಸದ್ಧಾಮಿಯೋ ರಂಗವಿಟ್ಠಲ್ಲ ಸ
ನ್ನಾಮಿಯೋ ಶ್ರೀರಮಾಕಾಮಿಯೋ ಪ್ರೇಮಿಯೋ
ತ್ವಾನ್ನಮಸ್ತೇ ನಮಸ್ತೇ ನಮಸ್ತೇ ನಮಃ.

ಇತಿಶ್ರೀ ಶ್ರೀಪಾದರಾಜಯತೀಂದ್ರ ಪೂಜ್ಯಚರಣ
ವಿರಚಿತಂ ಶ್ರೀ ಲಕ್ಷ್ಮಿನೃಸಿಂಹ ಪ್ರಾದುರ್ಭಾವ ದಂಡಕಂ
ಸಂಪೂರ್ಣಂ

(ಮೂ. ಪ್ರ. ೫೦-೬೩)

## ೨೪

ರಾಗ : ಪೂರ್ವಿ ತಾಳ : ಖಂಡಛಾಪು

ಶ್ರೀರಾಮ ನಿನ್ನ ಪಾದವ ತೋರೋ
ಮೋಹನ್ನ ಗುಣಧಾಮ ನಿನ್ನ ಮೋಹದ ಪಾದವ ಪ.

ವರಗುಣಜಾಲ ಸುರಗುಣಲೋಲಾ
ಕರುಣಾಲವಾಲ ತರುಣೀ ಪರಿಪಾಲಾ ೧

ಅಜಭವಪೂಜಿತ ಗಜವರಭಾವಿತ
ಸುಜನರ ಸೇವಿತ ತ್ರಿಜಗವಂದಿತಾ ೨

ಅಂಗಜ ಜನಕ ವಿಹಂಗತುರಂಗ
ತುಂಗವಿಕ್ರಮ ಶ್ರೀರಂಗವಿಠಲ ೩

(ಲ. ೧೬, ಪು. ೪೧)

## ೨೫

ರಾಗ ಕಾಂಬೋಧಿ ತಾಳ ಆದಿತಾಳ

ಸರಸಿಜನಾಭನೆ ನೆರಗೊಡ್ಡಿ ಬೇಡುವೆ।
ದುರಿತಗಳೆಲ್ಲ ತರಿದು ವರವಿತ್ತು ಕರುಣಿಸೊ ಪ.

ಕರುಣಾಸಾಗರ ನಿನ್ನ ಚರಣವ ನಂಬಿದೆ
ಪರಮ ಪಾವನ ನಿನ್ನ ಶರಣನ ಪೊರೆಯೆಂದು ೧

ಈಶವಿನುತ ನಿನ್ನ ವಾಸಿಯು ಪೊಗಳುವೆ
ದಾಸ ಎಂದೆನ್ನನು ಗಾಸಿಮಾಡದೆ ಕಾಯೊ ೨

ಬಾರಿಬಾರಿಗೆ ಬರುವ ದಾರಿದ್ರ್ಯ ದುಃಖವ
ದೂರಗೈಸುವಂಥ ದಾರಿ ತೋರಿಸೆಂದು ೪

ಕಂತುಪಿತನೆ ಎನ್ನ ಅಂತರಂಗದಿ ನಿನ್ನ
ಸಂತತ ನೆನೆವಂತೆ ಚಿಂತನೆ ನಿಲಿಸೆಂದು ೫

ಮಂಗಳಾತ್ಮಕನೆ ಶ್ರೀರಂಗವಿಟ್ಠಲ ಭು
ಜಂಗಶಯನ ನಿನ್ನ ಹಿಂಗದೆ ಭಜಿಪೆನು ೬

(ಮು. ೨೫, ಪು. ೬)

## ೨೬

ರಾಗ : ಆನಂದಭೈರವಿ   ತಾಳ : ರೂಪಕತಾಳ

ಸಾಗಿ ಬಾರಯ್ಯ ನೀ । ಬಾಗಿ ನಮಿಸುವೆ
ಯೋಗಿಗಳರಸನೇ ಶ್ರೀನಿವಾಸ ಪ.

ಭೋಗಿಶಯನನೇ ನಿನ್ನ ಭಾಗವತರು ಬಂದು
ಜಾಗು ಮಾಡದೆ ನಿನ್ನ ಬಾಗಿಲೊಳು ನಿಂತಿಹರೋ ಅ.ಪ.

ಇಂದಿರೇ ರಮಣ ಗೋವಿಂದ ನೀನೆ ಗತಿಯೆಂದು ಭಜಿಸುತಿರಲು ಆನಂದದಿಂದ
ತಂದೆಯು ಬಾಧೆಗೆ ತಂದು ತೋರಲು ಸ್ತಂಭ ತಂದೆ ತಾಡನೆಯು ಮಾಡಲು
ಬಂದೆಯಾ ಪರಿಪರಿ ವಿಧ ಭಯದಿಂದವೋಡಲು ಬಂದು ಅಸುರನ್ನ ಆರ್ಭಟಿಸಿ ಕೆಡಹುತ
ಛಂದದಿಂದಲಿ ಬಗೆಯುತಸುರನ್ನ ಕೊರಳೊಳು ಮಾಲೆ ಅಂದು ಧರಿಸಿದಿ ಅಧಿಕ ಸಂಪನ್ನ ।
ಪ್ರಳಯಾಗ್ನಿಯಂತಿರೆ ನಿನ್ನ ಸ್ತುತಿಸಲು ಆರಿಗೊನೆದಿನ್ನು ಅನುತಿರಲು ನಿನ್ನಯ
ಮುಂದೆ ಭಜಿಸುತ ಕಂಡು ಒರಲಾನಂದದಿಂದಲಿ ಚಂದದಿ ಸಲಹಿ [ದೊಲು]
ನಂದದಲಿ ಮಂದರೋದ್ಧರ ಎನ್ನ ಸಲಹೋ ೧

ತ್ರೇತಾಯುಗದಿ ನಿನ್ನ ಮಾತೆಯಾಜ್ಞೆಯು ಕೊಂಡು ಪ್ರೀತಿಯಿಂದಲಿ ವನಕೆ ನೀ ಪೋದಲು
ಆತುರದಿ ಮೃಗ ಸೀತೆ ಬೇಡಲು ಬಾಣ ಎಸೆಯಲು ಅದು ಲಕ್ಷ್ಮಣಾಯೆಂದು ಕೂಗಲು
ಮತ್ತಾತ ಪೋಗಲು ಇತ್ತ ರಾವಣನು ಕರೆದೊಯ್ಯೆ ಸತಿಯಳ ವಾತಸುತ ತಾನೆನಿಸೇ
ನೀ ಮುನ್ನಾ ಅವ ಪೋಗೆ ಉಂಗುರ ಖ್ಯಾತಿಯಿಂದಲಿ ನೀಡಲದಕಿನ್ನ ತನುಮನದ
ಲತಿ ಭೋಗದಿ ಶಿಖೆಯು ಶಿರೋಮಣಿಯನ್ನೆ ಕೊಡಲನುಗ್ರ[ಹ]ದಲಿ
ಖ್ಯಾತಿಯಿಂದಲಿ ಅವಗೆ ವಿಧಾತಪದವಿಯು ಪಾಲಿಸಿದೆ ಜಗನ್ನಾಥ
ಇಂದ್ರಾದ್ಯಮರ ವಂದಿತ ವೀತಭಯ ಜಗನ್ನಾಥ ಸಲಹೋ ೨

ಮಂಗಳಾಂಗನೆ ನಿನ್ನ ಸುಖವ ಕೊಟ್ಟು ಅಂಗನೆಯರ ಬಾಧೆ ಬಿಡಿಸೊ ಇಂದು
ಅಂಗನೇಯರು ಬಂದು ಭಂಗಪಡಿಸಲದಕೆ ಪೋಗುತಾ ಮಾರನ್ನ
ಬಾಧೆಯ ಕಳೆಯುತಾ
ಪರಿಪರಿಯ ಸುಖಗಳ ಸಂಗಡಿಲ್ಲದೇ ನೀಡಿಯೊ (ದೊ ?) ಮಲ್ಲ
ಮರ್ದನನೇ ಎನುತಿರೆ
ಬೇಗದಿಂದಲಿ ಓಡಿಪೋದೆಲ್ಲೊ ಭಕ್ತರನು ಸಲಹುವನೆಂಬೋ
ಬಿರುದು ನಿನಗೆ ಉಂಟಲ್ಲಾ
ಅನುತಿರಲು ನಿನ್ನಯ ಎನ್ನ ಮನ ಉತ್ತುಂಗಸುತಸತ್ಸಂಗವೀವುದು ವಿಹಿತದೇವನೇ
ತುರಂಗನಾಥನೇ ರಂಗವಿಠಲನೆ ದೇವ ದೇವರ ದೇವ ಸಲಹೋ ೩

[ತಾ.ಹ.ಲಿ.ಪ್ರ.]

## ೨೭

### ಉಗಾಭೋಗ

ಸಾಲಿಗ್ರಾಮ ವೃಂದಾವನದಲಿ ಇಪ್ಪಂತೆ
ಎನ್ನ ಮನವನು ಬಿಡದಿಹ ಹರಿ
ಜನ್ಮರ ಜನ್ಮ ನರಹರಿ ಗೋವಿಂದ
ಎನ್ನ ಮನವನು ಬಿಡದಿಹ ಪುಂಡರೀಕ
ಮನ ಪಿರಿಯಶಾನೆಯಯ್ಯ
ಪಂಡರಂದಿಪುರೀಪತಿ ಸಿರಿರಂಗವಿಠಲ

(ಓ. ೧, ಗ. ೧೬೩)

## ೨೮

### ಉಗಾಭೋಗ

ಹರಿಭಕುತನಾದವ ಅರಿದು ಪಾಪವ ಮಾಡುವುದಿಲ್ಲ
ಅರಿಯದೆ ಮಾಡಿದರೆ ಹರಿಯು ಎಣಿಸುವುದಿಲ್ಲ
ಶರಣು ಬಂದವನ ರವಿಯುತನಯನ ನೋಡು
ಮರೆಯದೆ ಭಜಿಸೊ ರಂಗವಿಠಲರೇಯನ

(ಹೆ. ೭೧, ಪು. ೩)

೧

ಉಗಾಭೋಗ

ಅನಂತಕಾಲದಲ್ಲಿ ಯಾವ ಪುಣ್ಯದಲ್ಲಿ
ಎನ್ನ ಮನ ನಿನ್ನಲ್ಲಿ ಎರಗಿಸೊ
ಎನ್ನ ಮನವನು ನಿನ್ನ ಚರಣದೊಳೊಮ್ಮೆ
ಇಟ್ಟು ಸಲಹೊ ರಂಗವಿಠಲ

೨

ಉಗಾಭೋಗ

ಎನ್ನ ಮನ ವಿಷಯಂಗಳಲಿ ಮುಣುಗಿತೊ
ಎನ್ನ ತನುವು ವೃದ್ಧಾಪ್ಯ ಐದಿತೊ
ಅಂತಕರ ಕರೆ ಬಾಹೊ ಹೊತ್ತಾಯಿತೊ
ಕಾಲ ವಿಳಂಬನವಿನಿತಿಲ್ಲವಯ್ಯ
ವ್ಯಾಳೆ ಅರಿತು ಬಿನ್ನಹ ಮಾಡಿದೆ
ಹೀಗೆ ತರಳರ ಬಿಡುವ ತಾಯಿಗಳುಂಟೆ- ನೀ
ಕರುಣಾನಿಧಿಯೆಂಬ ಬಿರುದು ಸಲ್ಲಿಸು ದೇವ
ಕರುಣಾಕರ ಸಿರಿರಂಗವಿಠಲರೇಯ- ನೀ
ಕರುಣಾನಿಧಿಯೆಂಬ ಬಿರುದು ಸಲ್ಲಿಸು ದೇವ

೩

ಉಗಾಭೋಗ

ಪಾಲಿಸಯ್ಯ ಸ್ವಾಮಿ ಕೃಷ್ಣ ಪಾಲಿಸಯ್ಯ ಎನ್ನ ನೀನು
ಪಾಲಿಸಯ್ಯ ಭಾಗ್ಯವಿತ್ತು ಭಕ್ತವತ್ಸಲ
ನಿತ್ಯಪೂರ್ಣ ಮಂಗಳವಿತ್ತು ನಿತ್ಯದಿ ಕಲ್ಯಾಣವಿತ್ತು
ನಿತ್ಯ ಸಲಹೊ ವ್ಯಾಸಮುನಿವಂದ್ಯ ಗೋಪಿನಾಥನೆ
ತುರುಬಿನ ವಸ್ತ್ರಾಲೆ ತುರುಬಿದ ಮೊಲ್ಲೆ ಮಲ್ಲಿಗೆ ಕುಸುಮಂಗಳ ರಂಗಾ
ಕೊರಳಲ್ಲಿ ಕಂಠೀಸರ ವನಮಾಲೆ ವರಕಲ್ಪತರುವನೆನ್ನೀ ರಂಗಾ (?)
ಕರದಲ್ಲಿ ವೇಣು ಬೆರಳಲ್ಲಿ ಮಿಂಟುತ ಮರಿದುಂಬಿರ್ಝೇಂಕಾರ ರಂಗಾ

ಸರಿಗಮಪದನಿಸ ಸನಿದಪಮಗರಿಸ ಅಧರದಲೂದುತಿರೆ ರಂಗಾ
ಸಿರಿಯರಸನು ಸಿರಿಪತಿ ರಂಗವಿಠಲ ಸರಸದಿ ವೇಣುನಾದ ಮಾಡಿದೆ

೪

ರಾಗ: ನಾಟಿ ತಾಳ: ಖಂಡಛಾಪು

ಶ್ರೀರಂಗವಿಠಲನ ಶ್ರೀ ಮುಕುಟಕೆ ಶರಣು [ಪ.]

ಶಿರದಲ್ಲೊಪ್ಪುವ ನೀಲಕುಂತಳಕೆ ಶರಣು
ಸಿರಿ ಸಹೋದರನರ್ಧದವಳಿಗೆ ಶರಣು [ಅ.ಪ.]

ಸೊಂಪು ನೋಟದ ಚೆಲುವ ಸೋಗೆಗಣ್ಣಿಗೆ ಶರಣು
ಸಂಪಿಗೆಯ ಕುಸುಮುಸಮ ನಾಸಿಕಕೆ ಶರಣು
ಗುಂಪುರತ್ನದ ಕರ್ಣಕುಂಡಲಗಳಿಗೆ ಶರಣು
ಇಂಪುದರ್ಪಣನಿಭ ಕಪೋಲಗಳಿಗೆ ಶರಣು ೧

ಕುಂದಕುಟ್ಮಲ ಪೋಲ್ವ ದಂತಪಂಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ಚಂದ್ರಿಕಾನಿಭ ಮುದ್ದುಮಂದಹಾಸಕೆ ಶರಣು
ನಂದಗೋಪನ ಮುದ್ದುಕಂದನಿಗೆ ಶರಣು ೨

ಅಬ್ಜನಾಭನ ದಿವ್ಯ ಕಂಬು ಕಂಠಕೆ ಶರಣು
ಅಬ್ಜಮುಖಿಯಿರುವ ವಕ್ಷಸ್ಥಳಕೆ ಶರಣು
ಕುಬ್ಜೆಯುನು ಡೊಂಕ ತಿದ್ದಿದ ಭುಜಗಳಿಗೆ ಶರಣು
ಅಬ್ಜಜಾಸನ[ನ] ಪೆತ್ತ ನಾಭಿಗೆ ಶರಣು ೩

ರನ್ನಗಂಟೆಗಳಿರುವ ನಿನ್ನ ಕಟಿಗೆ ಶರಣು
ಪೊನ್ನಕದಳೀ ಪೋಲ್ವ ತೊಡೆಗಳಿಗೆ ಶರಣು
ಪುನ್ನಾಗ[ಕ]ರ[ಗೆ]ತ್ತ ದ್ವಯ ನಿತಂಬಕೆ ಶರಣು
ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು ೪

ಮಂಗಳ ವೈಭೋಗಂಗಳ ಅಂಘ್ರಿದ್ವಯಕೆ ಶರಣು
ತುಂಗ ಕುಚಗಳ ಪಿಡಿದ ಕರಗಳಿಗೆ ಶರಣು
ಪೊಂಗೊಳಲನೂದುವಾ ಅಂಗುಲಿಗಳಿಗೆ ಶರಣು
ರಂಗವಿಠಲನ ಸರ್ವಾಂಗಕೆ ಶರಣು ೫

## ರಂಗವಿಠಲಾಂಕಿತವಾಗಿ ಮಾರ್ಪಟ್ಟಿರುವ ಕೃತಿಗಳು

| ಕ್ರಮ ಸಂಖ್ಯೆ | ಕೃತಿಯ ಪಲ್ಲವಿ | ಮೂಲ ಅಂಕಿತ | ರಂಗವಿಠಲಾಂಕಿತ |
|---|---|---|---|
| ೧. | ಅಲ್ಲದ ಕರ್ಮವ ಆಚರಿಸಿದವ ಕೆಟ್ಟ | ಪುರಂದರವಿಠಲ | ೨ |
| ೨. | ಋಣವೆಂಬ ಸೂತಕವು ಬಹು ಬಾಧೆ ಪಡಿಸುತಿದೆ | ಪುರಂದರವಿಠಲ | ೧ |
| ೩. | ಎನ್ನಮ್ಮ ಕಲ್ಲಬಿಡೆ ಈ ಧೋತ್ರವ ಚೆನ್ನಾಗಿ ಒಗೆಯಬೇಕು | ಚೆನ್ನಕೇಶವ | ೧ |
| ೪. | ಏನಾಯಿತು ಈ ರಂಗಗೆ ನೋಡಿರಮ್ಮ | ಪುರಂದರವಿಠಲ | ೧ |
| ೫. | ಕಳ್ಳನೆಂದು ದೂರುತಾರೆ ಗೋಪ್ಯಮ್ಮ ಕೇಳೆ | ಪುರಂದರವಿಠಲ | ೨ |
| ೬. | ಕುರುಡುನಾಯಿ ಸಂತೆಗೆ ಬಂತಂತೆ | ಪುರಂದರವಿಠಲ | ೧ |
| ೭. | ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಾದೇವಿ | ಪುರಂದರವಿಠಲ | ೨ |
| ೮. | ಬಿನಕನನೊಲ್ಲೆ ನವ್ವ ಕುಲುಕಿ ನಡೆಯುವವನ | ಪುರಂದರವಿಠಲ | ೨ |
| ೯. | ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ | ಪುರಂದರವಿಠಲ | ೨ |
| ೧೦. | ಮಾಯವಾದಿ ಗಂಡನೊಲ್ಲೆನೆ | ಪುರಂದರವಿಠಲ | ೨ |

# ಲಘು ಟಿಪ್ಪಣಿಗಳು

## ೧

ಈ ಸಂಸಾರವನ್ನು ನೆಚ್ಚಿ ಕೆಡಬಾರದೆಂಬುದೇ ಈ ಕೀರ್ತನೆಯ ಮುಖ್ಯ ವಸ್ತು. ಅದಕ್ಕಾಗಿ, ದಾಸರು ಹಾಗೆ ಐಹಿಕ ಭೋಗಭಾಗ್ಯಗಳನ್ನೇ ನಂಬಿ ಕೆಟ್ಟ ನರಕಾಸುರ, ಕಾರ್ತವೀರ್ಯಾರ್ಜುನ, ದುರ್ಯೋಧನ, ನಹುಷ ಮೊದಲಾದವರ ಉದಾಹರಣೆಗಳನ್ನಿತ್ತು ಆ ಒಬ್ಬೊಬ್ಬರ ವರ್ತನೆಯನ್ನೂ ವಿವರಿಸಿರುವರು. ಈ ರೀತಿ ಮಾಡದೆ, ಶ್ರೇಷ್ಠ ಗುಣಶಾಲಿಗಳಾದ ಧ್ರುವ, ವಿಭೀಷಣ, ಹನುಮಂತರು ಹೇಗೆ ಹರಿಯನ್ನು ಧ್ಯಾನಿಸಿ ಸಮಸ್ತ ಇಷ್ಟಾರ್ಥಗಳನ್ನೂ ಗಳಿಸಿದರೋ ಹಾಗೆಯೇ ರಂಗವಿಠಲನನ್ನು ನಂಬಿ ಕೃತಾರ್ಥರಾಗಬೇಕೆಂದು ಕಡೆಯ ನುಡಿಯಲ್ಲಿ ಬುದ್ಧಿ ಹೇಳುವರು.

ಕಠಿನ ಶಬ್ದಗಳ ಅರ್ಥ: ವಿಕಟ—ಡೊಂಕು, ವಕ್ರ. ಷೋಡಶ ಸಹಸ್ರ—ಹದಿನಾರು ಸಾವಿರ. ನರಕಾಸುರ: ವಿಷ್ಣು ವರಾಹಾವತಾರವನ್ನು ತಾಳಿದಾಗ ಆತನ ದೇಹದಿಂದ ತೊಟ್ಟಿಕ್ಕಿದ ಬೆವರಿನ ಹನಿಯಿಂದ ಭೂದೇವಿಯಲ್ಲಿ ಹುಟ್ಟಿದವನು. ಭೂದೇವಿ ತನ್ನ ಮಗನ ಸಲುವಾಗಿ ವಿಷ್ಣುವನ್ನು ಬೇಡಿ ವೈಷ್ಣವಾಸ್ತ್ರವನ್ನು ದೊರಕಿಸಿಕೊಟ್ಟಳು. ಈ ಅಸ್ತ್ರದಿಂದ ನರಕಾಸುರನು ಅಜೇಯನೆನ್ನಿಸಿ ಲೋಕಕಂಟಕನಾದ. ಈತನಿಂದ ಇಂದ್ರನಿಗೂ ಉಪಟಳ ಮೊದಲಾಯಿತು ಆಗ ಇಂದ್ರನು ಶ್ರೀಕೃಷ್ಣನನ್ನು ಕಂಡು ದೂರು ಹೇಳಿದನು ಆಗ ಶ್ರೀಕೃಷ್ಣನು ನರಕಾಸುರನ ರಾಜಧಾನಿಯಾದ ಪ್ರಾಗ್ಜ್ಯೋತಿಷಪುರಕ್ಕೆ ಬಂದು, ಮುರಾಸುರನನ್ನೂ, ನರಕಾಸುರನನ್ನೂ ಸಂಹರಿಸಿದನು (ಪುನಾಚೂ. ಪು. ೩೫೦) ಕಾರ್ತವೀರ್ಯಾರ್ಜುನ: ಚಂದ್ರವಂಶದ ಕೃತವೀರ್ಯರಾಜನ ಮಗನಾದ ಇವನಿಗೆ ಅರ್ಜುನನೆಂಬ ಹೆಸರಿತ್ತು. ಆದ್ದರಿಂದ ಇವನನ್ನು ಕಾರ್ತವೀರ್ಯಾರ್ಜುನ ಎಂದು ಕರೆಯುವ ರೂಢಿಯಲ್ಲಿ ಬಂದಿತು. ಇವನು ದತ್ತಾತ್ರೇಯನ ಅನುಗ್ರಹಕ್ಕೆ ಪಾತ್ರನಾಗಿ ಅಜೇಯತ್ವವನ್ನೂ, ಯುದ್ಧಕಾಲದಲ್ಲಿ ಸಾವಿರ ತೋಳುಗಳು ಲಭಿಸುವ ವರವನ್ನೂ ಪಡೆದನು. ಇವನಿಂದ ಸಾಧು ಸತ್ಪುರುಷರಿಗೆ ತುಂಬಾ ತೊಂದರೆಗಳಾದುವು. ಒಮ್ಮೆ ರಾವಣನು ಬಂದು ಇವನೊಂದಿಗೆ ಯುದ್ಧ ಮಾಡಿ ಸೋತು ಕೈಸೆರೆಯಾದನು. ಅನಂತರ ರಾವಣನ ತಂದೆಯಾದ ಪುಲಸ್ತ್ಯನು ಬಂದು ಬಿನ್ನಹ ಮಾಡಿಕೊಂಡು ತನ್ನ ಮಗನನ್ನು ಸೆರೆಯಿಂದ ಬಿಡಿಸಿಕೊಂಡು ಹೋದನು ಜಮದಗ್ನಿಯ ಗೋವನ್ನು ಅಪಹರಿಸುವ ಸಲುವಾಗಿ ಇವನು ಮುನಿಯ ಅತಿಥಿ ಸತ್ಕಾರ[illegible]ನ್ನು ನಿರ್ಲಕ್ಷಿಸಿ ನಡೆದ ದುರ್ವರ್ತನೆಗಾಗಿ, ಪರಶುರಾಮನು ಕುಪಿತನಾಗಿ, ಇವನನ್ನು ಸಂಹರಿಸಿದನು (ಪುನಾಚೂ. ಪು. ೯೩/೯೪). ಶ್ಯಾರೆ—ಸೀರೆ, ಒಂದು ಬೊಗಸೆ. (ವ್ಯಾವಹಾರಿಕ ರೂಪದ ಪ್ರಯೋಗ). ನಹುಷ—ಊರ್ವಶೀ, ಪುರೂರವರ ಮೊಮ್ಮಗ (ಆಯುವಿನ ಮಗ). ಇಂದ್ರನು ವೃತ್ರನನ್ನು ಕೊಂದ ಬ್ರಹ್ಮಹತ್ಯಾದೋಷ ನಿವಾರಣೆಗೆ ದೇವಲೋಕದಿಂದ ಹೊರಟಿರಲು, ಆ ಅವಧಿಯಲ್ಲಿ ದೇವತೆಗಳು ಇಂದ್ರಪದವಿಗೆ ಅರ್ಹನಾಗಿದ್ದ ನಹುಷನನ್ನು ಪಟ್ಟದಲ್ಲಿ ಕೂಡಿಸಿದರು. ಆಗ ನಹುಷನು ಶಚೀದೇವಿಯನ್ನು ಕಾಣಲು, ಸಪ್ತ ಋಷಿಗಳು ಹೊತ್ತು ನಡೆಯುತ್ತಿದ್ದ ಪಲ್ಲಕ್ಕಿಯಲ್ಲಿ ಹೊರಟನು. ನಡುದಾರಿಯಲ್ಲಿ ಅಗಸ್ತ್ಯರನ್ನು ಧಿಕ್ಕರಿಸಿ ಮಾತನಾಡಲು ಅವರಿಂದ ಶಾಪಗ್ರಸ್ತನಾಗಿ ಆ ಕ್ಷಣದಲ್ಲಿಯೇ ಸರ್ಪರೂಪ ತಾಳಿದನು. ಕಡೆಗೆ, ಧರ್ಮರಾಜನ ಕೃಪೆಯಿಂದ ಈ ಸರ್ಪಜನ್ಮದಿಂದ ವಿಮುಕ್ತನಾದನು (ಪುನಾಚೂ. ಪು. ೫೫೩/೫೫೪). ದಂಡಿಗೆ—ಪಲ್ಲಕ್ಕಿ.

ಧ್ರುವ: ಉತ್ತಾನಪಾದರಾಜನ ಹಿರಿಯ ಹೆಂಡತಿ ಸುನೀತಿಯ ಮಗ. ಒಮ್ಮೆ ಇವನು ತನ್ನ

ತಂದೆಯ ತೊಡೆಯ ಮೇಲೆ ಕುಳಿತಿರಲು, ಅವನ ಚಿಕ್ಕಮ್ಮನಾದ ಸುರುಚಿ ಅಲ್ಲಿಗೆ ಬಂದು, ಅವನನ್ನು ಅಸೂಯೆಯಿಂದ ನೆಲಕ್ಕೆಳೆದು, 'ನೀನು ರಾಜನ ತೊಡೆ ಏರಬೇಕಾದರೆ, ಕಾಡಿಗೆ ಹೋಗಿ ತಪಸ್ಸು ಮಾಡಿ ದೇವರಿಂದ ವರವನ್ನು ಪಡೆದುಕೊಂಡು ಬಾ' ಎಂದು ಧಿಕ್ಕರಿಸಿದಳು. ಬಾಲಕನಾದ ಧ್ರುವನು ಆ ಮಾತನ್ನೇ ನೆಚ್ಚಿ ಕಾಡಿಗೆ ಹೋಗಿ ತಪಸ್ಸನ್ನು ಮಾಡಿ ದೇವರನ್ನು ಒಲಿಸಿಕೊಂಡನು. ದೇವರ ಅನುಗ್ರಹದಿಂದ ಅವನು ಭೂಲೋಕದಲ್ಲಿ ಮಹಾರಾಜನಾಗಿ ಮೆರೆದುದಲ್ಲದೆ, ಆ ತರುವಾಯ ನಕ್ಷತ್ರಗಳ ಸಮೂಹದಲ್ಲಿ ಧ್ರುವತಾರೆ ಎಂಬ ಶಾಶ್ವತ ಸ್ಥಾನವನ್ನೂ ಸಂಪಾದಿಸಿದನು. (ಭಾಗವತ, IV, ಅ. ೮-೧೪).

ವಿಭೀಷಣ ರಾವಣ, ಕುಂಭಕರ್ಣರ ತಮ್ಮ. ತನ್ನ ಅಣ್ಣಂದಿರಂತಲ್ಲದೆ ಈತನು ಶ್ರೀರಾಮನ ಭಕ್ತನಾಗಿ, ರಾವಣನ ಸಂಹಾರವಾದ ಬಳಿಕ ಲಂಕೆಗೆ ಅಧಿಪತಿಯಾದನು.

ಹನುಮಂತ. ಅಂಜನೆಯಲ್ಲಿ ಜನಿಸಿದ ವಾಯುವಿನ ಅಂಶ. ವಾನರಶ್ರೇಷ್ಠನೆನ್ನಿಸಿ ಶ್ರೀರಾಮನ ಅವಿಚ್ಛಿನ್ನ ಭಕ್ತನೆನ್ನಿಸಿದನು ದಾಸ್ಯಭಾವಕ್ಕೆ ಹನುಮಂತನೇ ಪ್ರತೀಕ.

೨

ಈ ಸುಳಾದಿಯಲ್ಲಿ ದಾಸರು ತಮ್ಮ ಆರ್ತಭಾವವನ್ನು ಎದೆಕರಗುವಂತೆ ಚಿತ್ರಿಸಿರುತ್ತಾರೆ. ನಾನಾ ಜನ್ಮಗಳಲ್ಲಿ ನೊಂದು, ಬೆಂದು, ತೊಳಲಿ, ಬಳಲಿ ಈಗ ಯಾವುದೋ ಪುಣ್ಯಬಲದಿಂದ ಮಾನವನಾಗಿ ಹುಟ್ಟಿ ಬಂದಿರುವುದರಿಂದ ತಮಗೆ ಪರಮಾತ್ಮನ ಪಾದಸಾನ್ನಿಧ್ಯವನ್ನು ನೀಡಿ ಸಲಹಬೇಕೆಂದು ಬೇಡಿಕೊಳ್ಳುವರು. ಒಂದೊಂದು ನುಡಿಯಲ್ಲಿಯೂ ಈ ಅಭಿಪ್ರಾಯವನ್ನೇ ವಿವರಿಸಲಾಗಿದೆ.

ಅನ್ನಕ ಭಯದ್ರವಿಣ ಆವನ್ನಕ ನಿನ್ನ ಚರಣರತಿ ದೊರಕೊಳ್ಳದೊ : ಎಲ್ಲಿಯತನಕ ಭಗವಂತನ ಪಾದದ ಸವಿ ಪ್ರಾಪ್ತವಾಗದೋ ಅಲ್ಲಿಯತನಕ ಈ ಶರೀರದ ಸಲುವಾಗಿ ಭಯ, ಶೋಕ, ಲೋಭ, ಲಾಭ, ನಾನು, ನನ್ನದು ಎಂಬ ನಾನಾ ತೆರನಾದ ಬಾಧೆ ಮತ್ತು ಅಭಿಮಾನಗಳಿಗೆ ಕಟ್ಟುಬಿದ್ದಿರಬೇಕಾಗುವುದೆಂದು ನೊಂದುಕೊಳ್ಳುವರು

ಬೆಲೆಗೆ ಹೋಗದು ಸರಕು ನಡಿಲದಯ್ಯಾ ಹರಿಯೆ ರಂಗವಿಠಲ ಪರಮಾತ್ಮನನ್ನು ಒಲಿಸಿಕೊಳ್ಳಲು ವ್ರತ, ಜಪ, ತಪ, ಯಾಗ ಮೊದಲಾದ ಕೇವಲ ಕರ್ಮಮಾರ್ಗವನ್ನು ಅನುಸರಿಸಿದರೆ ಅದು ಲಭಿಸದೆಂದು ಇಲ್ಲಿ ಧ್ವನಿತವಾಗುತ್ತದೆ. ವ್ಯಾಪಾರಿಯಾದವನಿಗೆ ತನ್ನ ಪದಾರ್ಥವು ಖರ್ಚಾಗದೆ ಹೋದರೆ ಮುಂದೆ ಏನು ಮಾಡಬೇಕು? ಅದಕ್ಕೆ ಬೆಲೆ ಬರುವಂತೆ ಏನಾದರೂ ಪ್ರಯತ್ನ ಮಾಡಬೇಕಲ್ಲವೆ? ಹಾಗೆಯೇ ಜಪತಪಾದಿಗಳು ಸಾರ್ಥಕವಾಗಬೇಕಾದರೆ ಪರಮಾತ್ಮನ ಅನುಗ್ರಹವೊಂದೇ ಕಾರಣ ಎಂಬ ಭಾವನಿರೂಪಣೆ ಚೆನ್ನಾಗಿದೆ.

ಕಠಿನ ಶಬ್ದಗಳ ಅರ್ಥ: ಭವ—ಜನ್ಮ. ಚರಣರತಿ—ಪಾದದಲ್ಲಿ ಆಸಕ್ತಿ. 'ಅನ್ನಂತ' ಎಂಬ ಪ್ರಯೋಗ ಹಾಡಿನ ಧಾಟಿಗಾಗಿ ಮಾಡಿಕೊಂಡ ಮಾರ್ಪಾಡು. ಪೊರೆ—ರಕ್ಷಿಸು ಅನ್ನಕ—ಅಲ್ಲಿಯವರೆಗೆ. ಭಯದ್ರವಿಣ—ಭಯಕಾರಕ ವಿತ್ತ(?). ಹಮ್ಮಿಕೆ—ಅಹಂಭಾವ. ಆವನ್ನಕ—ಎಲ್ಲಿಯವರೆಗೆ. ನೆಮ್ಮುಗೆ—ಆಶ್ರಯ ನೀಕರಿಸು—ತಿರಸ್ಕರಿಸು. ಕಂದರ್ಪ—ಮನ್ಮಥ ವೃಂದಾರಕಾಧೀಶ—ದೇವತೆಗಳ ಒಡೆಯ ತುತಿಸು—ಸ್ತುತಿಸು. ಹಾರಿಹಾರಿ—(√ ಪಾರ್) ನೋಡಿ ನೋಡಿ, ನಿರೀಕ್ಷಿಸಿ. ದುರಿತ—ಕೆಟ್ಟ. ಅಟವಿ—ಅಡವಿ ತಾಪತ್ರಯ—ಆಧಿದೈವಿಕ, ಆಧ್ಯಾತ್ಮಿಕ ಮತ್ತು ಆಧಿಭೌತಿಕಗಳೆಂಬ ಮೂರು ವಿಧವಾದ ತಾಪಗಳು. ದಾವಾನಲ—ದಾವಾಗ್ನಿ, ಕಾಡುಕಿಚ್ಚು.

೩

ಹರಿದಾಸರಿಗೆ ಪರಮಾತ್ಮನ ಪಾದವನ್ನು ಕಂಡರೆ ಪರಮಾನಂದ. ಪ್ರಕೃತ ಕೀರ್ತನೆಯಲ್ಲಿ

ಗೋಪಿಯೊಬ್ಬಳು ತನ್ನ ಗೆಳತಿಯನ್ನು ಕುರಿತು, ಬಾಲಗೋಪಾಲನ ಪುಟ್ಟ ಪಾದವು ತನಗೆ ಲಭಿಸಿತೆಂದು ಹಿಗ್ಗಿ, ಆ ಪಾದದ ಮಹಿಮೆಗಳನ್ನು ಒಂದೊಂದನ್ನಾಗಿ ವರ್ಣಿಸುವಳು. ಶ್ರೀವಿಷ್ಣುವಿನ ಪಾದಲಕ್ಷಣ ಮತ್ತು ಆ ಪಾದಸ್ಪರ್ಶದಿಂದ ಸಂಭವಿಸಿದ ಹಲವಾರು ಪ್ರಸಂಗಗಳನ್ನು ಇಲ್ಲಿ ವಿವರಿಸಲಾಗಿದೆ

ಶಂಖ ಚಕ್ರ ಪಾದವ: ಪರಮಾತ್ಮನ ಪಾದದಲ್ಲಿ ಯಾವ ಯಾವ ಚಿಹ್ನೆಗಳಿವೆಯೆಂಬುದನ್ನು ಹೇಳಿದ್ದಾರೆ.

ಬಲಿಯ ಮೆಟ್ಟಿ ಬಾಗೀರಥಿಯ ಪಡೆದ ಪಾದವ: ಶ್ರೀ ವಿಷ್ಣುವು ವಾಮನನಾಗಿ ಅವತರಿಸಿ, ಬಲಿಯಿಂದ ಮೂರು ಹೆಜ್ಜೆ ಭೂಮಿಯನ್ನು ಬೇಡಿ, ಒಂದು ಹೆಜ್ಜೆಯಿಂದ ಭೂಮಿಯನ್ನೂ ಒಂದು ಹೆಜ್ಜೆಯಿಂದ ಆಕಾಶವನ್ನೂ ಪಡೆದ ಬಳಿಕ ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಸುತಲಲೋಕಕ್ಕೆ ಕಳುಹಿಸಿದನು. ವಿಷ್ಣುವಿನ ಪಾದ ಆಕಾಶವನ್ನು ಸ್ಪರ್ಶಿಸಿ, ಸತ್ಯಲೋಕದಲ್ಲಿ ಅದರ ಉಗುರಿನ ಕಾಂತಿ ತೋರಿಬರಲು, ಬ್ರಹ್ಮನು ನೀರಿನಿಂದ ಅಭಿಷೇಕ ಮಾಡಿದನು. ಆಗ ಆ ನೀರು ಗಂಗೆಯಾಗಿ ಹರಿಯಿತು (ಭಾಗವತ, viii, ಅ. ೧೮-೨೩.)

ಬಂಡೆಯ ಬಾಲೆಯ ಮಾಡಿದ ಉದ್ದಂಡ ಪಾದವ: ಶಿಲೆಯಾಗಿ ಬಿದ್ದಿದ್ದ ಅಹಲ್ಯೆಯನ್ನು ಶ್ರೀರಾಮನು ತನ್ನ ಪಾದಸ್ಪರ್ಶದಿಂದ ಉದ್ಧಾರಮಾಡಿದ ಘಟನೆಯನ್ನು ಸೂಚಿಸುತ್ತದೆ.

ಶಕಟಾಸುರ: ಕಂಸನ ಪರಿವಾರದಲ್ಲಿ ಒಬ್ಬನಾದ ಈತನು ಕೃಷ್ಣನ ಸಂಹಾರಕ್ಕಾಗಿ ಬಂಡಿಯ ರೂಪದಲ್ಲಿ ಸುಳಿದನು ಕೃಷ್ಣನು ತನ್ನ ಕಾಲಿನಿಂದ ಒದೆಯಲು, ಬಂಡಿಯು ಪುಡಿಪುಡಿಯಾಗಿ, ಶಕಟಾಸುರನು ಸತ್ತನು (ಭಾಗವತ, x, ೭)

ಕಠಿನ ಶಬ್ದಗಳ ಅರ್ಥ: ಪಂಕಜಾಸನ—ತಾವರೆಯ ಹೂವನ್ನೇ ಪೀಠವಾಗಿ ಉಳ್ಳ ಬ್ರಹ್ಮ. ಅಂಕ—ತೊಡೆ ಅಂಡಜ—ಹಕ್ಕಿಯಾದ ಗರುಡ.

೪

ಶ್ರೀಪಾದರಾಜರು ರಚಿಸಿದ ಸುಪ್ರಸಿದ್ಧವಾದ ಕೀರ್ತನೆಗಳಲ್ಲಿ ಇದು ಒಂದು ಮನುಷ್ಯನ ಆಗುಹೋಗುಗಳೆಲ್ಲ ಭಗವಂತನ ಸಂಕಲ್ಪಾನುಸಾರವಾಗಿ ನಡೆಯುವುದೆಂಬ ತತ್ತ್ವವನ್ನು ಇಲ್ಲಿ ಪ್ರತಿಪಾದಿಸಲಾಗಿದೆ. 'ಇಟ್ಟಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ' ಎಂಬ ಇಲ್ಲಿನ ಪಲ್ಲವಿ ಗಾದೆ ಮಾತಾಗಿ ಪರಿಣಮಿಸಿದೆ ಪ್ರತಿಯೊಂದು ನುಡಿಯ ಪೂರ್ವಾರ್ಧದಲ್ಲಿಯೂ ಭಗವಂತನ ಕೃಪೆಯಿದ್ದಲ್ಲಿ ಬದುಕು ಹೇಗೆ ಸುಖಕರವಾಗಿರುವುದೆಂದೂ, ಉತ್ತರಾರ್ಧದಲ್ಲಿ ಆತನ ಮಮತೆ ತಪ್ಪಿದ ಬಳಿಕ ಬಾಳು ಹೇಗೆ ದುಃಖಕರವಾಗುವುದೆಂದೂ ಚಿತ್ರಿಸಲಾಗಿದೆ ಇಲ್ಲಿನ ಒಂದೊಂದು ನುಡಿಯೂ ಮನುಷ್ಯನ ಭೋಗಭಾಗ್ಯಗಳಲ್ಲಿ ಪ್ರಮುಖವಾದ ರಾಜಭೋಜನ, ಶ್ರೇಷ್ಠವಾದ ವಸ್ತ್ರಾಲಂಕಾರ, ಸುಖನಿದ್ರೆ ಮತ್ತು ಪಲ್ಲಕ್ಕಿಯಲ್ಲಿನ ಮೆರವಣಿಗೆಗಳನ್ನು ಕುರಿತುದಾಗಿದೆ.

ಕಠಿನ ಶಬ್ದಗಳ ಅರ್ಥ: ಶಾಲ್ಯೋದನ—ಅನ್ನ (ಶಾಲಿ—ಬತ್ತ, ಓದನ—ಅನ್ನ), ಹರಿವಾಣ—ತಟ್ಟೆ. ಕಪಿಲಹರೇ—ಹರಿಯು ಎತ್ತಿದ ಅವತಾರಗಳಲ್ಲಿ ಕಪಿಲಾವತಾರವೂ ಒಂದು ಕರ್ದಮ ಪ್ರಜಾಪತಿ ಮತ್ತು ದೇವಹೂತಿ ದೇವಿಯವರಿಗೆ ಭಗವಂತನು ಕಪಿಲನಾಮಕನಾಗಿ ಜನಿಸಿ, ತನ್ನ ತಾಯಿಗೆ ಸಾಂಖ್ಯಶಾಸ್ತ್ರವನ್ನು ಉಪದೇಶಿಸಿದನು (ಭಾಗವತ, iii, ಅ ೨೪). ಕಪರ್ದಕ—ಸಣ್ಣ ಕವಡೆ ಚಂದ್ರಶಾಲೆ—ಚಂದ್ರಕಾಂತ ಶಿಲೆಯಿಂದ ನಿರ್ಮಿತವಾದ ಮಹಲು. ಮಂದರೋದ್ಧರ—ಮಂದರಪರ್ವತವನ್ನು ಹೊತ್ತಿರುವವನು. ನರಯಾನ—ಆಳುಗಳು ಹೊತ್ತು ನಡೆವ ಪಲ್ಲಕ್ಕಿ. ಚರಣರಕ್ಷೆ—ಪಾದರಕ್ಷೆ. ಗಂಗಾಜನಕ—ವಿಷ್ಣು. ಅನಂಗಬಾಣ—ಮನ್ಮಥನ ಬಾಣ.

೫೫

ಭಕ್ತನಾದವನು ಭಗವಂತನನ್ನು ಐಹಿಕ ಸುಖಸಂಪತ್ತುಗಳನ್ನು ನೀಡೆಂಬುದಾಗಿ ಎಂದೂ ಬೇಡುವುದಿಲ್ಲ ಆತನ ಮನೆಯ ಬಾಗಿಲನ್ನು ಕಾಯುವ ಭಾಗ್ಯ ದೊರೆತರೆ ಅಷ್ಟೇ ಅವನಿಗೆ ಸಾಕು. ಈ ಅಭಿಪ್ರಾಯವೇ ಇಲ್ಲಿನ ಕೀರ್ತನೆಯ ಮುಖ್ಯ ವಸ್ತು. ಅಷ್ಟೂ ದೊರೆಯದಿದ್ದರೆ ಭಕ್ತನ ಗತಿ ಯೇನು, ಎಂಬ ಹತಾಶೆಯ ಧ್ವನಿಯೂ ಇಲ್ಲಿನ ಪಲ್ಲವಿಯಲ್ಲಿ ಅಡಕವಾಗಿದೆ. ಆಯಾ ನುಡಿಯಲ್ಲಿ ಚಿತ್ರಿತವಾಗಿರುವ ಸುಖ ಸಂತೋಷಗಳು ಸಾಮಾನ್ಯ ಮಾನವನ ಆಸೆ ಅಭಿಲಾಷೆಗಳನ್ನು ವಿವರಿಸುತ್ತವೆ.

ಕಠಿನ ಶಬ್ದಗಳ ಅರ್ಥ ಗ್ರಾಸ—ಆಹಾರ, ಊಟ ವಾಸ—ವಸತಿ, ಮನೆ. ವಿಷಯಂಗಳು—ಇಂದ್ರಿಯಾಭಿಲಾಷೆ. ನಾಗಶಯನ—ಆದಿಶೇಷನ ಮೇಲೆ ಮಲಗಿರುವ ಶ್ರೀವಿಷ್ಣು.

೬

ಈ ಕೀರ್ತನೆಯಲ್ಲಿ ಶ್ರೀಪಾದರಾಜರು ತಮ್ಮ ಶಿಷ್ಯರಾದ ಶ್ರೀವ್ಯಾಸರಾಯರನ್ನು ಮುಕ್ತಕಂಠದಿಂದ ಕೊಂಡಾಡಿರುತ್ತಾರೆ. ಗುರು-ಶಿಷ್ಯರ ಈ ತೆರನಾದ ಪರಸ್ಪರ ಸ್ತುತಿಗಳು ಈ ಭಕ್ತಿಸಾಹಿತ್ಯದಲ್ಲಿ ಒಂದು ವಿಶೇಷ.

ವಾದಿತಿಮಿರ ಮಾರ್ತಾಂಡನೆಂದೆನಿಸಿದ .ವ್ಯಾಸರಾಯ: ಶ್ರೀವ್ಯಾಸರಾಯರು ಶ್ರೀಪಾದರಾಜರಲ್ಲಿ ವ್ಯಾಸಂಗಮಾಡಿ, ದ್ವೈತ ವೇದಾಂತ ಪ್ರಪಂಚದಲ್ಲಿ ಅಗ್ರಗಣ್ಯರೆನ್ನಿಸಿ ಉತ್ತರ ಭಾರತದವರೆಗೂ ಸಂಚರಿಸಿ ಅನೇಕ ವಿದ್ವಾಂಸರನ್ನು ವಾದದಲ್ಲಿ ಗೆದ್ದ ಸಂಗತಿ ಸುಪ್ರಸಿದ್ಧವಾಗಿದೆ. ಪಕ್ಷಧರಮಿಶ್ರ, ಗದಾಧರಮಿಶ್ರ, ನರಸಿಂಹಯೋಗಿ, ಲಿಂಗಣ್ಣ ಮೊದಲಾದ ವಿದ್ವಾಂಸರನ್ನು ಗೆದ್ದು ಜಯಪತ್ರಿಕೆಯನ್ನು ತಂದು ತಮ್ಮ ಇಷ್ಟದೇವತೆಯಾದ ಗೋಪಾಲಕೃಷ್ಣನಿಗೆ ಸಮರ್ಪಿಸಿದರೆಂದು ಪುರಂದರದಾಸರ ಹೇಳಿಕೆಯೇ ಇದೆ. ಇವುಗಳನ್ನೆಲ್ಲ ಮನಗಂಡರೆ ಶ್ರೀಪಾದರಾಜರು ಹೇಳಿರುವ ಈ ಮಾತುಗಳು ಎಷ್ಟು ಅರ್ಥಪೂರ್ಣವಾಗಿವೆಯೆಂದು ವಿದಿತವಾಗುತ್ತದೆ. ಅವರು ವಾದಿಶರಭಭೇರುಂಡರೂ ಹೌದು, ಯತಿಶ್ರೇಷ್ಠರೂ ಹೌದು.

ಕಠಿನ ಶಬ್ದಗಳ ಅರ್ಥ ವಾದಿತಿಮಿರ—ವಾದಿಗಳೆಂಬ ಕತ್ತಲೆ ಮಾರ್ತಾಂಡ—ಸೂರ್ಯ. ವಾದಿಶರಭ ಭೇರುಂಡ—ವಾದಿಗಳೆಂಬ ಶರಭವನ್ನು ಭೇದಿಸುವ ಭೇರುಂಡಪಕ್ಷಿ ಹಮ್ಮು—ಅಹಂಕಾರ. ಸುಮ್ಮಾನ—ಸಂತೋಷ.

೭

ಈ ಸುಳಾದಿಯಲ್ಲಿ ಮಧುರೆಗೆ (ಮಥುರಾ ಎಂಬ ಊರಿನ ಹೆಸರು ದಾಸರ ಕೀರ್ತನೆಗಳಲ್ಲಿ ಮಧುರಾ ಎಂದೇ ಪ್ರಯೋಗವಾಗಿರುವುದರಿಂದ ಆ ರೂಪವನ್ನೇ ಇಲ್ಲಿ ಬಳಸಿದೆ) ಹೋದ ಶ್ರೀಕೃಷ್ಣನನ್ನು ನೆನೆದು, ವಿರಹದಿಂದ ನೊಂದು ಬೆಂದು ವಿಹ್ವಲಿಸುವ ಗೋಪಿಯರ ಚಿತ್ರ ಮನ ಕರಗುವಂತೆ ನಿರೂಪಿತವಾಗಿದೆ ಬೃಂದಾವನದ ಚೇತನಾಚೇತನವಸ್ತುಗಳೆಲ್ಲೆಲ್ಲ ಅವನ ಇರವನ್ನು ಕಾಣಬಲ್ಲ ಈ ಗೋಪಿಯರು ತಮಗೆ ಒದಗಿ ಬಂದಿರುವ ಈ ಅಗಲಿಕೆಯನ್ನು ಹೇಗೆ ಸಹಿಸುವುದೆಂದು ಪರಿತಪಿಸುತ್ತಾರೆ. ಅವನು ತಮ್ಮನ್ನು ತೊರೆದು ಹೋಗಿರುವನೆಂದೂ, ಮಧುರೆಯಲ್ಲಿ ರತಿವಿದಗ್ಧರಾದ ಹೆಂಗಸರಿಗೆ ಮಾರುಹೋಗಿರುವನೆಂದೂ ವ್ಯಥೆಪಡುವರು.

ಬಿಡುವರು ಅಧನರ ಗಣಿಕೆಯರು . .ರಂಗವಿಠಲನು ಕರುಣಿಯೆ: ಈ ನುಡಿಯಲ್ಲಿ, ಹೇಗೆ ಒಂದು ವಸ್ತು ನಿಷ್ಪ್ರಯೋಜಕವಾಗಲು ಅದು ತ್ಯಾಜ್ಯವೆನ್ನಿಸುವುದೆಂಬ ಚಿತ್ರ ಚೆನ್ನಾಗಿ

ಮೂಡಿಬಂದಿದೆ ನಿರ್ಧನರಾದವರನ್ನು ಗಣಿಕೆಯರು ತ್ಯಜಿಸುವರು. ಹಣ್ಣಿಲ್ಲದ ಗಿಡಮರಗಳನ್ನು ಪಕ್ಷಿಗಳು ಕಡೆಗಣಿಸುವುವು ಕಾಡುಗಿಚ್ಚು ಹತ್ತಿದ ಅಡವಿಯನ್ನು ಮೃಗಗಳು ತ್ಯಜಿಸುವುವು. ಜಾರನಾದವನು ಪರಸ್ತ್ರೀಯನ್ನು ಕೂಡಿದ ಬಳಿಕ ಕೈಬಿಡುವನು ಇದೇ ರೀತಿ, ಈವರೆಗೆ ತಮ್ಮೊಂದಿಗೆ ನಲಿದು, ಕುಣಿದು, ಸರಸದಿಂದಿದ್ದ ಶ್ರೀಕೃಷ್ಣನು ಇನ್ನು ತಮ್ಮನ್ನು ಅಲಕ್ಷ್ಯ ಮಾಡಿರುವನೆಂದು ಇಲ್ಲಿ ಸೂಚಿತವಾಗಿದೆ ಇದೇ ನಿರೂಪಣೆ ಭಾಗವತದಲ್ಲಿದೆ (X, ಅ. ೪೭).

ಪೊಂದೇರದಲ್ಲಿಯದವ್ವಾ ಬಂದಿದೆ ವಜ್ರದೊಳಗೆ ಅಂದಿನ ಕ್ರೂರನೆಂಬಕ್ರೂರನು ಮರಳಿ ಬಂದನೊ : ಈ ಗೋಪಿಯರು ವಿರಹದಿಂದ ಪರಿತಪಿಸುತ್ತಿರಲು ಹೊನ್ನಿನ ತೇರು ಬಂದಿರುವುದನ್ನು ಕಾಣುವರು ಹಿಂದೊಮ್ಮೆ ಕೃಷ್ಣನನ್ನು ಕರೆದೊಯ್ಯಲು ಬಂದಿದ್ದ ಅಕ್ರೂರನ ನೆನಪಾಗುವುದು. ಹೆಸರು ಅಕ್ರೂರನೆಂದಿದ್ದರೂ ಅವನು ಮಾಡಿದ ಕೆಲಸ ಅವರಿಗೆ ಸಹಿಸಲಸದಳವಾಯಿತು. ಆದ್ದರಿಂದ ಚಮತ್ಕಾರವಾಗಿ ಅವನನ್ನು 'ಕ್ರೂರ'ನೆಂದೇ ಟೀಕಿಸುವರು.

ಇತ್ತಲಟ್ಟಿದನೆ ಉದ್ಧವ ನಿನ್ನ ಗೋವಳಾ ಶ್ರೀಕೃಷ್ಣನು ಮಧುರೆಗೆ ತೆರಳಿ ಕಂಸನನ್ನು ಸಂಹಾರ ಮಾಡಿದ ಬಳಿಕ, ಆ ಸಂಗತಿಯನ್ನು ಗೋಕುಲಕ್ಕೆ ತಿಳುಹಿಸಲು ಬಂದನು ಈತನು ವಸುದೇವನ ತಮ್ಮನಾದ ದೇವಭಾಗನ ಮಗ. ಶ್ರೀಕೃಷ್ಣನು ನಿರ್ಯಾಣವಾಗುವುದಕ್ಕೆ ಮುಂಚೆ ಅವನಿಂದ ಜ್ಞಾನೋಪದೇಶವನ್ನು ಪಡೆಯುವನು (ಪುನಾಚೂ. ಪು. ೫೮)

ಒರೆದಳೆ ಪಿಂಗಳೆ ಜನರಿಗೆ ಹಿತವನು ಪಿಂಗಳೆ ಒಬ್ಬ ವೇಶ್ಯೆ. ಆದರೆ ಆಕೆ ತನ್ನ ವೃತ್ತಿಧರ್ಮಕ್ಕನುಗುಣವಾಗಿ ಆಯಾ ದಿನ ಬಂದ ವಿಟರನ್ನು ಮನಃಪೂರ್ವಕವಾಗಿ ಸತ್ಕರಿಸಿ ಸೇವಿಸುತ್ತಿದ್ದಳು. ಒಮ್ಮೆ ಶ್ರೀಹರಿ ಈಕೆಯ ಪರೀಕ್ಷಾರ್ಥವಾಗಿ ಜರ್ಜರಿತ ವೃದ್ಧನ ವೇಷದಲ್ಲಿ ಬಂದು, ಅರುಣೋದಯದಲ್ಲಿ ಶರೀರ ತ್ಯಾಗಗೈದವನಂತೆ ನಟಿಸಿದನು ಪಿಂಗಳೆ ನೊಂದುಕೊಂಡು ಆತನೊಂದಿಗೇ ಸಹಗಮನ ಮಾಡಲು ಸಿದ್ಧಳಾದಳು. ಆಗ ಪರಮಾತ್ಮನು ಅವಳ ಆ ಸೇವಾಧರ್ಮಕ್ಕೆ ಸುಪ್ರೀತನಾಗಿ ತನ್ನ ನಿಜಸ್ವರೂಪವನ್ನು ಪ್ರಕಟಪಡಿಸಿದನು. ಪಿಂಗಳೆ ಸಂತುಷ್ಟಳಾಗಿ "ಎಲೈ ದೇವನೇ! ನೀನು ನಿನ್ನ ಮಹಿಮಾಸಮೇತ ನನ್ನ ಉದರದಲ್ಲಿ ಜನಿಸಿ ಬರುವಂತೆ ಅನುಗ್ರಹಿಸು" ಎಂದು ಬೇಡಿದಳು. ಆಗ ಶ್ರೀಹರಿ, "ನೀನು ಈ ದೇಹದಿಂದಿರುವಂದು ಈ ಕೋರಿಕೆ ಅಸಾಧ್ಯ. ನೀನು 'ಗಂಡಕೀ' ಎಂಬ ನದಿಯಾಗಿ ಪ್ರವಹಿಸಿದಂದು ನಾನು ಸಾಲಿಗ್ರಾಮರೂಪದಲ್ಲಿ ನಿನ್ನಲ್ಲಿ ಜನಿಸುತ್ತೇನೆ" ಎಂದು ಅಭಯವಿತ್ತನು

ಕಠಿನ ಶಬ್ದಗಳ ಅರ್ಥ: ನದಿ ಪುಳಿನ—ನದಿಯ ತೀರದಲ್ಲಿರುವ ಮರಳು. ಶುಕಪಿಕರವ—ಗಿಳಿ ಕೋಗಿಲೆಗಳ ಧ್ವನಿ ರತಿವಿದಗ್ಧರು—ಕಾಮುಕಲೆಯಲ್ಲಿ ನಿಪುಣರು. ಅಧನರು—ನಿರ್ಧನರು, ಹಣವಿಲ್ಲದವರು. ಗಣಿಕೆ—ಸೂಳೆ ದ್ವಿಜಗಣ—ಹಕ್ಕಿಗಳ ಹಿಂಡು. ದಳ್ಳುರಿ—ಕಾಡುಗಿಚ್ಚು. ಜಾರ—ವಿಷಯಲಂಪಟ, ಹಾದರ ಮಾಡುವವನು. ಕುಂದಕುಸುಮ—ಮಲ್ಲಿಗೆಯ ಹೂ. ಶಶಾಂಕ—ಚಂದ್ರ. ಅರವಿಂದ—ಕಮಲ. ಕಂದರ್ಪ—ಮನ್ಮಥ ಶರದಟ್ಟುಳಿ—ಬಾಣದ ಹಾವಳಿ ಪೊಂದೇರು—ಚಿನ್ನದ ರಥ. ವ್ರಜ—ಗೋಕುಲ ಹರಲಿಗ—ಅಪವಾದಿ. ಅರ್ಥಕೃತ ಸ್ನೇಹ—ಫಲಾಪೇಕ್ಷೆಯ ಸ್ನೇಹ. ಅಳಿ—ದುಂಬಿ. ನೇಹ < ಸ್ನೇಹ. ರಕ್ತಿ—ಪ್ರೀತಿ ಅರಿದರಿದು—ತಿಳಿದೂ ತಿಳಿದು. ಅಸು—ಪ್ರಾಣ ಮಾರುಹೋಗು—ಮರುಳಾಗು.

## ೮

ಹರಿದಾಸರು ತಮಗೆ ಉತ್ತಮರ ಸಹವಾಸವನ್ನು ದೊರಕಿಸಿಕೊಡಬೇಕೆಂದು ದೇವರಲ್ಲಿ ಬೇಡುವರು. ಆವರೆಗೆ ಜನ್ಮಾಂತರಗಳ ಕೋಟಲೆ, ಹೀನಜನರೊಂದಿಗೆ ಆಟಪಾಟಗಳನ್ನು ನಡೆಸಿ ತಾವು ನೊಂದಿರುವುದಾಗಿ ನಿವೇದಿಸಿಕೊಳ್ಳುವರು. ದೇವರಲ್ಲಿ ಅಚಲವಾದ ನಂಬಿಕೆಯಿರಲು ಬೇರಾವ

ಭಯವೂ ಇಲ್ಲವೆಂದೂ ಈ ಮೊದಲು ತನ್ನ ಭಕ್ತರನ್ನು ಕಾಪಾಡಿದ ಪರಮಾತ್ಮನು ತಮ್ಮನ್ನೂ ಸಲಹುವನೆಂದೂ ಭರವಸೆಯಿಂದಿರುವರು.

ಕಠಿನ ಶಬ್ದಗಳ ಅರ್ಥ. ಶ್ವಾನ—ನಾಯಿ ಮುರವೈರಿ—ಮುರಾಸುರನನ್ನು ಸಂಹರಿಸಿದವನು. ಪನ್ನಗಾಧಿಪ—ಆದಿಶೇಷನನ್ನು ಹಾಸಿಗೆಯಾಗಿ ಉಳ್ಳವನು.

## ೯

ಎಲ್ಲಿಯೋ ಮನೆಬಿಟ್ಟು ಹೋಗಿ ಆಟವಾಡಿಕೊಂಡು ಬಂದ ಕೃಷ್ಣನನ್ನು ಗೋಪಿಯು ಅತ್ಯಂತ ವಾತ್ಸಲ್ಯದಿಂದ ಮಾತಾಡಿಸುವಳು ತನ್ನ ಮನೆಯಲ್ಲಿಯೇ ಒಳ್ಳೆಯ ಹಾಲು, ಸಕ್ಕರೆ, ಚಿಕ್ಕ ಚಿಕ್ಕ ಬಾಲೆಯರು ಇರಲು, ಅವುಗಳನ್ನು ಬಿಟ್ಟು ದೂರ ಹೋದುದಕ್ಕಾಗಿ ಮರುಗುವಳು ಅವನ ಸೌಂದರ್ಯವನ್ನು ವರ್ಣಿಸುವಳು. ಎಂಟು ದಿಕ್ಕುಗಳಲ್ಲಿಯೂ ಹುಡುಕಿದಾಗ ಕಣ್ಣಿಗೆ ಕಾಣದೆ ಹೋಗಲು ತನಗಾದ ಆತಂಕವನ್ನು ವಿವರಿಸುವಳು. ಗೋಪಿಯ ಈ ಕಳವಳದ ಚಿತ್ರ ಮನ ಸೆಳೆಯುವಂತಿದೆ.

ಕಠಿನ ಶಬ್ದಗಳ ಅರ್ಥ ಆಲಯ—ಮನೆ ಚಿನಿಪಾಲು—ಚೆನ್ನಾಗಿ ಕಾಸಿದ ಹಾಲು ಬಟ್ಟಮುತ್ತು—ದುಂಡಾಗಿರುವ ಮುತ್ತು. ಅಷ್ಟದಿಕ್ಕು—ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ವಾಯವ್ಯ, ಆಗ್ನೇಯ, ನೈಋತ್ಯ ಮತ್ತು ಈಶಾನ್ಯ.

## ೧೦

ಈ ಕೀರ್ತನೆಯೂ ಆಟವಾಡಿ ಬಂದ ಬಾಲಗೋಪಾಲನನ್ನು ಕುರಿತುದೇ ಆಗಿದೆ. ಆದರೆ, ಇಲ್ಲಿ ಗೋಪಿ ಕೃಷ್ಣನನ್ನು ನಾನಾ ತೆರನಾಗಿ ಆಕ್ಷೇಪಿಸುವಳು ಬಳಲಿ ಬಂದ ಕೃಷ್ಣನ ಹಣೆಯಲ್ಲಿ ಬೆವರಿನ ಬೊಟ್ಟು ಸಾಲುಸಾಲಾಗಿ ಇರುವ ಚಿತ್ರವೂ ಅವನನ್ನು ಕುರಿತು ಹೊಸ ಮಾತು ಹಬ್ಬಿರುವ ಸಂಗತಿಯೂ ಆಕರ್ಷಕವಾಗಿವೆ ಈ ಪೋರ ಕೃಷ್ಣನು ಎಲ್ಲಿಯೋ ಸರಸವಾಡಲು ಹೋಗಿ, ತನ್ನ ಉಂಗುರ, ಪದಕಗಳನ್ನು ಕಳೆದುಕೊಂಡು ಬಂದಿರುವ ಸುದ್ದಿ ಅವನ ತುಂಟತನಕ್ಕೆ ಸಾಕ್ಷಿಯಂತಿದೆ ಕೃಷ್ಣನನ್ನು ಕುರಿತ ಗೋಪಿಯ ಆಕ್ಷೇಪಣೆ ಅವಳ ಅಕ್ಕರೆಯ ಆಳವನ್ನು ವ್ಯಕ್ತಪಡಿಸುತ್ತದೆ

ಕಠಿನ ಶಬ್ದಗಳ ಅರ್ಥ. ನೊಸಲು—ಹಣೆ ಪುಸಿ—ಸುಳ್ಳು. ರಕ್ಕು—ಮೋಸ. ನಗೆಗೀಡು—ನಗೆಗೆ ಗುರಿಯಾಗು

## ೧೧

ಶ್ರೀಕೃಷ್ಣನು ಮಧುರೆಗೆ ತೆರಳಿದ ಬಳಿಕ, ಅಗಲಿಕೆಯಿಂದ ಬಳಲಿದ ಗೋಪಿಯೊಬ್ಬಳು ತನ್ನ ಗೆಳತಿಯೊಂದಿಗೆ ತನ್ನ ಯಾತನೆಯನ್ನು ಹೇಳಿಕೊಳ್ಳುತ್ತಿರುವುದೇ ಈ ಕೀರ್ತನೆಯ ವಸ್ತು. ಆಕೆಗೆ ತನ್ನ ಶರೀರವೇ ಹೊರೆಯಾಗಿದೆ ಕೊರಳಿಗೆ ಹಾಕಿದ ಹೂವಿನ ಹಾರವೂ ಭಾರವಾಗಿದೆ. ಮನ್ಮಥನ ಜನಕನಾದ ವಿಷ್ಣು ಆಕೆಯನ್ನು ಮನ್ಮಥನ ಬಾಣಕ್ಕೆ ಗುರಿಮಾಡಿ ತಾನು ಮರೆಯಾಗಿರುವುದು ತಕ್ಕುದಲ್ಲವೆನ್ನಿಸುತ್ತದೆ. ಆ ಪರಮಾತ್ಮನನ್ನೇ ನಂಬಿಕೊಂಡಿದ್ದ ಆಕೆಗೆ ತನಗೆ ಈ ಸ್ಥಿತಿ ಬಂದೀತೆಂದು ಎನ್ನಿಸಿರಲಿಲ್ಲ ಮಂದಾನಿಲವು ಅಸಹನೀಯವಾಗಿದೆ. ಗಿಳಿ ಕೋಗಿಲೆಗಳ ಉಲಿಯಿಂದ ನೊಂದಿದ್ದಾಳೆ. ಚಂದ್ರನ ಕಿರಣಗಳು ತಡೆಯಲಸಾಧ್ಯವೆನ್ನಿಸಿವೆ. ಶ್ರೀಕೃಷ್ಣನಿಲ್ಲದ ಬೃಂದಾವನ ಬೇಸರವಾಗಿ ಪರಿಣಮಿಸಿದೆ. ತನ್ನನ್ನು ಹೀಗೆ ವನದೊಳಗೆ ಬಿಟ್ಟುಹೋಗಿರುವ ಆ ಪರಮಾತ್ಮನಿಗಾಗಿ ಪರಿಪರಿಯಾಗಿ ಪರಿತಪಿಸುವಳು.

ಕಠಿನ ಶಬ್ದಗಳ ಅರ್ಥ: ತನು—ಶರೀರ. ಮಾರನಯ್ಯ—ಮನ್ಮಥ ಜನಕನಾದ ವಿಷ್ಣು, ಇಲ್ಲಿ ಶ್ರೀಕೃಷ್ಣನಿಗೂ ಅನ್ವಯಿಸುತ್ತದೆ. ಅಂಬು—ಬಾಣ. ನಿಲ್ಲದೆ ರಂಗ ಪೋದ ಮಧುರೆಗೆ ಬಿಲ್ಲ

ಹಬ್ಬದ ನೆವನ ಮಾಡಿ ಕೃಷ್ಣ ಬಲರಾಮರು ಕಂಸನು ಏರ್ಪಡಿಸಿದ್ದ ಬಿಲ್ಲ ಹಬ್ಬಕ್ಕೆ ಹೋಗುವರು ಅಲ್ಲಿ ಸಮಯ ಸಂದರ್ಭಗಳು ಒದಗಿ ಬಂದು ಚಾಣೂರ ಮುಷ್ಟಿಕರೆಂಬ ರಾಕ್ಷಸರನ್ನು ಸಂಹರಿಸಿದುದಲ್ಲದೆ, ಕಡೆಗೆ ಶ್ರೀಕೃಷ್ಣನು ಕಂಸನನ್ನೇ ಧ್ವಂಸಮಾಡುವನು. (ಭಾಗವತ, X, ಅ ೪೧-೪೪). ಶುಕ—ಗಿಳಿ, ಪಿಕ—ಕೋಗಿಲೆ ಈಡಾಡಿ—ತೊರೆದು. ಅಂಗಜ—ಮನ್ಮಥ

## ೧೨

ಶ್ರೀಪಾದರಾಜರ ಈ ಕೀರ್ತನೆ, ಒಟ್ಟು ಹರಿದಾಸ ಸಾಹಿತ್ಯದಲ್ಲಿಯೇ ತುಂಬ ಪ್ರಸಿದ್ಧವಾದದ್ದು. ಇದು ಶ್ರೀರಂಗದಲ್ಲಿರುವ ಶ್ರೀರಂಗನಾಥನನ್ನು ಕುರಿತು ಬರೆದ ಕೃತಿ. "ಕಾವೇರಿ ರಂಗನ ನೋಡದಂಥ ಕಣ್ಣುಗಳಿದೇನು ಪ್ರಯೋಜನ?" ಎಂಬ ಉದ್ಗಾರದಲ್ಲಿ ಈ ರಚನೆ ಮೊದಲಾಗಿದೆ. ಒಂದಲ್ಲ ಒಂದು ದಿನ ಶ್ರೀರಂಗಕ್ಕೆ ತೆರಳಿ, ಅಲ್ಲಿ ಚಂದ್ರಪುಷ್ಕರಿಣಿಯಲ್ಲಿ ಸ್ನಾನವನ್ನು ಮಾಡಿ ಆನಂದದಿಂದ ಶ್ರೀರಂಗನಾಥನನ್ನು ನೋಡದಿದ್ದರೆ ಈ ಬದುಕು ವಿಫಲವೆಂಬ ದಾಸರ ಹೇಳಿಕೆ. ಅಲ್ಲಿ ಹರಿಯುವ ಕಾವೇರಿ ಶ್ರೀ ವಿಷ್ಣುವಿನ ಪಾದದಿಂದ ಜನಿಸಿದ ಗಂಗೆಗೆ ಸಮಾನ, ಅಲ್ಲಿಯ ನದಿಯ ಸ್ನಾನ ವೈಕುಂಠವನ್ನು ಬಳಸಿರುವ ವಿರಜಾ ನದಿಯ ಸ್ನಾನದಷ್ಟು ಶ್ರೇಷ್ಠ. ಶ್ರೀರಂಗನಾಥನ ದೇವಾಲಯವೇ ವೈಕುಂಠ. ಆ ಪರಮಾತ್ಮನೇ ಪರವಾಸುದೇವ. ಸರ್ವಾಭರಣಗಳಿಂದ ಅಲಂಕೃತನಾದ ಶ್ರೀರಂಗನಾಥಸ್ವಾಮಿಯ ರಥೋತ್ಸವವೂ ಇಷ್ಟೇ ವೈಭವಪೂರ್ಣವಾದದ್ದು.

ಕಠಿನ ಶಬ್ದಗಳ ಅರ್ಥ: ಹರಿಪಾದೋದಕ—ಗಂಗೆ. ಹೀರ—ವಜ್ರ ವೈಜಯಂತಿ—ವಿಷ್ಣುವಿನ ಮಾಲೆ. ತೋರ—ದೊಡ್ಡ. ವಿರಜಾನದಿ—ಜೀವಿಗಳ ಲಿಂಗದೇಹವನ್ನು ನಿವಾರಿಸುವ ನದಿ.

## ೧೩

ಇದೊಂದು ಸಂವಾದದ ರೂಪದಲ್ಲಿ ರಚಿಸಿರುವ ಕೀರ್ತನೆ ಸತ್ಯಭಾಮೆಗೂ ರುಕ್ಮಿಣಿಗೂ ಶ್ರೀಕೃಷ್ಣನ ವಿಷಯದಲ್ಲಿ ಬಹಳ ಬಿರುಸಾಗಿ ವಾಗ್ವಾದ ನಡೆಯುತ್ತದೆ. ಶ್ರೀಕೃಷ್ಣನಿಗೆ ಯಾರು ಹೆಚ್ಚು ಆಪ್ತರು ಎನ್ನುವುದೇ ಮುಖ್ಯ ವಸ್ತು. ಭೀಷ್ಮಕನ ಮಗಳಾದ ರುಕ್ಮಿಣಿಯನ್ನು ಶ್ರೀಕೃಷ್ಣನು ಅಪಹರಿಸಿಕೊಂಡು ಬಂದು ವಿವಾಹವಾಗಿದ್ದರೆ, ಸತ್ಯಭಾಮೆಯನ್ನು ಆಕೆಯ ತಂದೆಯಾದ ಸತ್ರಾಜಿತನೇ ಮನವೊಪ್ಪಿ ಕೊಟ್ಟಿರುತ್ತಾನೆ. ಇವರಿಬ್ಬರ ಸಂವಾದ ಬಹಳ ತೀಕ್ಷ್ಣವಾಗಿ ಪರಿಣಮಿಸಲು ಆಗ ಶ್ರೀಕೃಷ್ಣನು ಅಲ್ಲಿಗೆ ಬಂದು ಇಬ್ಬರಿಗೂ ಸಮಾಧಾನ ಹೇಳಿ ಒಡಗೂಡುವನು.

ಕಠಿನ ಶಬ್ದಗಳ ಅರ್ಥ ಕಂಜನೇತ್ರೆ—ತಾವರೆಯಂತೆ ಕಣ್ಣುಳ್ಳವಳು ಮಂಜುಳಗಾತ್ರೆ—ಮನೋಹರವಾದ ಶರೀರವುಳ್ಳವಳು. ಕುಂಜರ—ಆನೆ. ಲಜ್ಜೆ—ನಾಚಿಕೆ ಮುರಹರ—ಮುರನೆಂಬ ರಾಕ್ಷಸನನ್ನು ಸಂಹಾರ ಮಾಡಿದ ಶ್ರೀಕೃಷ್ಣ.

ಒಂದು ಮಣಿಯ ಕಾರಣದಿ ಬಂದೆ ಶ್ರೀಕೃಷ್ಣನಿಗೆ ಸ್ಯಮಂತಕಮಣಿಯನ್ನು ಅಪಹರಿಸಿದನೆಂಬ ಅಪಖ್ಯಾತಿಯು ಬಂದುದರಿಂದ ಅವನು ಅದನ್ನು ಕೊಂಡೊಯ್ದವರನ್ನು ಹುಡುಕಿಕೊಂಡು ಕಾಡಿಗೆ ಬಂದನು. ಆಗ ಅವನು ಸತ್ತು ಬಿದ್ದಿದ್ದ ಪ್ರಸೇನನನ್ನೂ, ತರುವಾಯ ಒಂದು ಸಿಂಹವನ್ನೂ ಕಂಡು, ಕಡೆಗೆ ಜಾಂಬವಂತನ ಗುಹೆಗೆ ಬಂದಾಗ ಮಣಿಯನ್ನು ಕಂಡನು ಜಾಂಬವಂತನೊಂದಿಗೆ ಯುದ್ಧ ಮಾಡಿ ತನ್ನ ನಿಜಸ್ವರೂಪವನ್ನು ತಿಳಿಸಿ, ಸ್ಯಮಂತಕಮಣಿಯನ್ನು ಪಡೆದು, ಸತ್ರಾಜಿತನಿಗೆ ತಂದು ಒಪ್ಪಿಸಿದನು. ಆಗ ಸತ್ರಾಜಿತನು ತನ್ನ ಮಗಳಾದ ಸತ್ಯಭಾಮೆಯನ್ನು ಕೃಷ್ಣನಿಗೆ ಕೊಟ್ಟು ವಿವಾಹ ಮಾಡಿದನು (ಭಾಗವತ, X, ಅ ೫೬).

ಶತಧನ್ವನ ಬೆನ್ನಟ್ಟಿ ಕೊಂದನೆ · ಸತ್ಯಭಾಮೆಯನ್ನು ಮೊದಲು ಶತಧನ್ವನಿಗೆ ಕೊಡಬೇಕೆಂದು ನಿಶ್ಚಯವಾಗಿತ್ತು. ಆಕೆಯ ಗಾಢಭಕ್ತಿಯನ್ನು ಅರಿತ ಶ್ರೀಕೃಷ್ಣನು ಆವಳನ್ನು ಮದುವೆಯಾದು

ದಲ್ಲದೆ ಆಕೆಯ ತಂದೆಯಾದ ಸತ್ರಾಜಿತನನ್ನು ಕೊಂದ ಶತಧನ್ವನನ್ನು ಸಂಹಾರ ಮಾಡಿದನು (ಭಾಗವತ, X, ೫೬–೫೭) ವೀಂದ್ರಗ—ಗರುಡನ ಮೇಲೆ ಸಂಚರಿಸುವ ಶ್ರೀವಿಷ್ಣು

ವೀಂದ್ರಗ ಎನಗೆ ಪಾರಿಜಾತ ತಂದ ರುಕ್ಮಿಣಿ. ದೇವಲೋಕದಲ್ಲಿದ್ದ ಅಪೂರ್ವವಾದ ಪಾರಿಜಾತ ವೃಕ್ಷವನ್ನು ಸವತಿ ಮಾತ್ಸರ್ಯದಿಂದ ಕುಪಿತಳಾದ ಸತ್ಯಭಾಮೆಯು ಬಯಸಲು, ಶ್ರೀಕೃಷ್ಣನು ಅದನ್ನು ಅಪಹರಿಸಿಕೊಂಡು ಬರುವನು (ಪುನಾಚೂ. ಪು. ೫೮೧/೫೮೨). ಭೈಷ್ಮಿ—ಭೀಷ್ಮಕನ ಮಗಳಾದ ರುಕ್ಮಿಣಿ.

### ೧೪

ಈ ಉಗಾಭೋಗದಲ್ಲಿ ಸರ್ವಸಮರ್ಪಣದ ಚಿತ್ರಣವಿದೆ ಸರ್ವಸ್ವವನ್ನೂ ಭಗವಂತನಿಗೆ ಒಪ್ಪಿಸಿದ ಮೇಲೂ ಅವನ ಅನುಗ್ರಹವಾಗದಿದ್ದರೆ ಭಕ್ತನಿಗಾಗುವ ಬೇಗುದಿಯನ್ನು ವಿವರಿಸಿದೆ. 'ಸರಕು ಒಪ್ಪಿಸಿದ ಮೇಲೆ ಸುಂಕವುಂಟೆ ದೇವ' ಎಂಬ ಗಾದೆಯ ಮಾತನ್ನು ಬಹಳ ಅರ್ಥವತ್ತಾಗಿ ಬಳಸಿಕೊಳ್ಳಲಾಗಿದೆ.

### ೧೫

ಸಂಸಾರದಲ್ಲಿ ಸುಖದುಃಖಗಳೆರಡೂ ಉಂಟು ಎಂಬ ತತ್ವವನ್ನು ಈ ಕೀರ್ತನೆಯಲ್ಲಿ ಪ್ರತಿಪಾದಿಸಿದೆ. ದುಃಖವು ರಾತ್ರಿಯಂತಾದರೆ, ಸುಖವು ಬೆಳುದಿಂಗಳಿನಂತೆ. ಇವೆರಡು ಕೂಡಿ ಬರುತ್ತವೆ. ಸತ್ಯಸಂಧರಾದ ಧರ್ಮರಾಯ ಮತ್ತು ಹರಿಶ್ಚಂದ್ರರಂಥವರು ಅನಿರೀಕ್ಷಿತವಾದ ಕಷ್ಟಗಳನ್ನು ಅನುಭವಿಸಬೇಕಾಯಿತು ದೇವನಾದ ಕೃಷ್ಣನೂ ಬಂಡಿಯ ಬೋವನಾಗಬೇಕಾಯಿತು. ಎಂದ ಮೇಲೆ ಉಳಿದವರ ಪಾಡೇನು? ದ್ರೌಪದಿಯಂತಹ ರಾಜಕುಮಾರಿ ವಿರಾಟನರಮನೆಯಲ್ಲಿ ವೇಷ ಮರೆಸಿಕೊಂಡು, ಹೆಸರು ಬದಲಿಸಿಕೊಂಡು ಒಂದು ವರ್ಷಕಾಲ ತೊತ್ತಾಗಿ ದುಡಿಯಬೇಕಾಯಿತು.

ಮನುಷ್ಯನಾದವನು ಸ್ಥಿತಿವಂತನಾಗಿದ್ದಲ್ಲಿ ಎಲ್ಲರೂ ಅವನನ್ನು ಅನುಸರಿಸುವರು ಆತನು ತನ್ನ ಆಸ್ತಿಪಾಸ್ತಿಗಳನ್ನು ಕಳೆದುಕೊಂಡು ದರಿದ್ರನಾದ ಒಡನೆಯೇ ಎಲ್ಲರೂ ಅವನನ್ನು ಅಲಕ್ಷಿಸುವರು. ಆದ ರಿಂದ ಐಶ್ವರ್ಯದ ಭೋಗವಿಲಾಸಗಳೆಲ್ಲ 'ಮೂರು ದಿನದ ಭಾಗ್ಯ' ಎಂದು ದಾಸರು ಬುದ್ಧಿ ಹೇಳುವರು ಕಷ್ಟನಷ್ಟಗಳ ಪೆಟ್ಟು ತಗುಲಿ ಸಾಕಷ್ಟು ದಂಡತೆತ್ತಾಗಲೆ 'ರಂಗವಿಠಲನೆ ಸರಿ' ಎಂಬ ಅರಿವುಂಟಾಗುವುದು ಎಂದು ಬೋಧಿಸುತ್ತಾರೆ

ಕಠಿನ ಶಬ್ದಗಳ ಅರ್ಥ ಲೆತ್ತ—ಪಗಡೆ. ಬಂಡಿ ಬೋವ—ಬಂಡಿಯನ್ನು ನಡೆಸುವವನು, ಸಾರಥಿ ಕೊಂಡ—ಅಗ್ನಿಯ ಕುಂಡ, ಬೆಂಕಿಯಿರುವ ಹಳ್ಳ. 'ಒಂಟೆಯಂತೆ ಗೋಣ ಮೇಲೆತ್ತುವರು' ಎಂಬಲ್ಲಿ ಔದಾಸೀನ್ಯದ ಭಾವ ಚೆನ್ನಾಗಿ ಪ್ರಕಟವಾಗುತ್ತದೆ. 'ಉಂಟಾದತನ' 'ಬೆಂಬಲತನ' ಎಂಬ ಪ್ರಯೋಗಗಳು ವಿಶಿಷ್ಟವಾಗಿವೆ ಇಂಬು—ಆಶ್ರಯ. ದಂಡಿಗೆ—ಪಲ್ಲಕ್ಕಿ, ಮೇನೆ.

### ೧೬

ಗೋಕುಲದಲ್ಲಿನ ಗೋಪಿಯರಿಬ್ಬರು ಶ್ರೀಕೃಷ್ಣನು ಮಥುರೆಗೆ ಹೊರಟಿರುವ ಸುದ್ದಿಯನ್ನು ಕುರಿತು ತಮ್ಮತಮ್ಮಲ್ಲಿಯೇ ಸಂಭಾಷಣೆ ನಡೆಸುವರು. ಮೋಸಗಾರನಾದ ಶ್ರೀಕೃಷ್ಣನು ಯಾರೊಡನೆಯೂ ಹೇಳದೆ ಮಾರನೆಯ ದಿನ ಬೆಳಗಾದ ಕೂಡಲೆ ಹೊರಟು ನಿಂತಿರುವುದನ್ನು ಕುರಿತು ಆಶ್ಚರ್ಯವನ್ನು ವ್ಯಕ್ತಪಡಿಸುವರು. ಅವರ ಸಂಭಾಷಣೆಯ ಮೂಲಕ ಶ್ರೀಕೃಷ್ಣನನ್ನು ಕರೆಯಲು ಅಕ್ರೂರನು ಬಂದಿರುವುದೂ, ಆತನು ರಾಮಕೃಷ್ಣರನ್ನು ಉಪಾಯದಿಂದ ಕರೆದೊಯ್ಯಲಿರುವುದೂ ವಿದಿತವಾಗುವುದು. ಶ್ರೀಕೃಷ್ಣನು ಸೋದರಮಾವನ ಮನೆಗೆ ಹೊರಟು ನಿಂತಿರುವುದಲ್ಲದೆ, ಅಲ್ಲಿನ ನಾರಿಯರ ಬಲೆಗೆ ಒಳಗಾಗುವನೆಂದು ಅವರಿಗೆ ಆತಂಕ. ಅಲ್ಲಿರುವ

ಮಲ್ಲರನ್ನು ಗೆದ್ದೇ ಗೆಲ್ಲುವನೆಂಬ ತುಂಬು ನಂಬಿಕೆ. ಕಡೆಯ ನುಡಿಯಲ್ಲಿ, ಶ್ರೀಕೃಷ್ಣನು ಮಥುರೆಯಲ್ಲಿ ಹುಟ್ಟಿ, ಕಂಸನ ಕಾಟವನ್ನು ತಪ್ಪಿಸಿಕೊಳ್ಳಲು ಗೋಕುಲಕ್ಕೆ ಬಂದು ಬೆಳೆದ ಬಗೆಯನ್ನು ಪರ್ಯಾಲೋಚಿಸುವರು. ಶ್ರೀಕೃಷ್ಣನ ಜೀವನದಲ್ಲಿ ಸಂಭವಿಸಿದ ಒಂದು ಪ್ರಮುಖ ಪ್ರಸಂಗವನ್ನು ಈ ಕೀರ್ತನೆಯಲ್ಲಿ ಹೃದಯಂಗಮವಾಗಿ ವರ್ಣಿಸಲಾಗಿದೆ.

ಅಕ್ರೂರ: ಶ್ವಫಲ್ಕ ಮತ್ತು ಗಾಂದಿನಿಯರ ಮಗ. ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬನು. ಶ್ರೀಕೃಷ್ಣ ಬಲರಾಮರನ್ನು ಮಥುರೆಗೆ ಕರೆತರುತ್ತಿರುವಲ್ಲಿ ಯಮುನಾ ನದಿಯಲ್ಲಿ ಸ್ನಾನ ಮಾಡುವಂದು ಶ್ರೀಕೃಷ್ಣನ ದಿವ್ಯರೂಪವನ್ನು ಕಾಣುವನು (ಪುನಾಚೂ. ಪು ೧/೨)

ಕಠಿನ ಶಬ್ದಗಳ ಅರ್ಥ ಚಾಳಿಕಾರ—ಮೋಸಗಾರ (?). ಪಯಣ—ಪ್ರಯಾಣ. ರಕ್ಕಿಸಿಕೊಂಡು—ಮೋಸಮಾಡಿ. ಅಟ್ಟುಳಿ—ಕೋಟಲೆ. ತ್ವರೆ—ಆತುರ ಅರದೆ—ಸಹಿಸದೆ.

೧೭

ಶ್ರೀಕೃಷ್ಣನನ್ನು ಅಗಲಿದ ಗೋಪಿಯರ ವಿರಹವನ್ನು ಈ ಕೀರ್ತನೆಯಲ್ಲಿ ಚಿತ್ರಿಸಲಾಗಿದೆ. ಕೊಂಬು ಕೊಳಲುಗಳನ್ನು ಊದಿ ತುಂಬು ನಂಬಿಕೆಯನ್ನು ನೀಡಿದ ಗೋಪಾಲ ಈಗ ಕಣ್ಮರೆಯಾಗಿದ್ದಾನೆ ಅವನಿಗಾಗಿ ಅವರೆಲ್ಲರ ಮನಸ್ಸೂ ಏಕಪ್ರಕಾರವಾಗಿ ಹಂಬಲಿಸುತ್ತಿದೆ. ಆ ಯಾತನೆಯ ಫಲವಾಗಿ ಗೋಪಿಯರು ನಡೆಯಲಾರರು, ಮಾತನಾಡಲೂ ಶಕ್ತರಿಲ್ಲ. ಮನಸ್ಸು ಆತನಿಗಾಗಿ ಮಿಡಿಯುತ್ತಿದೆ. ಅವರಿಗೆ ಅನ್ನ ನೀರುಗಳು ಬೇಕಿಲ್ಲ. ನಿದ್ರೆಯಂತೂ ಇಲ್ಲವೇ ಇಲ್ಲ. ಅವರಿಗೆ ಹೆಣ್ಣಿನ ಬಾಳೇ ಬೇಸರವಾಗಿದೆ. ತಮಗೇ ಹಾಗಿರಬೇಕಾದರೆ ಇನ್ನು ಆತನನ್ನು ಸಾಕಿ ಸಲಹಿದ ಗೋಪಿಗೆ ದುಃಖವೆಷ್ಟಿರಬೇಕು ಎಂದು ನೊಂದುಕೊಳ್ಳುವರು.

ಕಠಿನ ಶಬ್ದಗಳ ಅರ್ಥ: ಅಂಬುಜನಾಭ—ಪದ್ಮನಾಭ, ಹೊಕ್ಕಳಲ್ಲಿ ತಾವರೆಯ ಹೂ ಉಳ್ಳವನು, ವಿಷ್ಣು ಉದಕ—ನೀರು ಮನ್ನಣೆಗಾರ—ಸನ್ಮಾನಿತನಾದವನು ಎಳಸು—ಬಯಸು. ಮನಸಿಜಪಿತ—ಮನ್ಮಥನ ತಂದೆಯಾದ ವಿಷ್ಣು, ಇಲ್ಲಿ ಶ್ರೀಕೃಷ್ಣನಿಗೂ ಅನ್ವಯಿಸುತ್ತದೆ. ವಾರುತೆ < ವಾರ್ತೆ—ಸುದ್ದಿ.

೧೮

ವಾತ್ಸಲ್ಯಭಾವವನ್ನು ನಿರೂಪಿಸುವ ಈ ಕೀರ್ತನೆಯಲ್ಲಿ ಬಾಲಗೋಪಾಲನ ಮುಗ್ಧ ಸ್ವಭಾವವನ್ನು ಆತನ ಮುದ್ದು ಮುದ್ದಾದ ಮಾತುಗಳ ಮೂಲಕ ಚಿತ್ರಿಸಿದೆ ಬಾಲಗೋಪಾಲನು ಯಶೋದೆಯ ಬಳಿಗೆ ಬಂದು, ಗೋಪಿಯರು ತನ್ನನ್ನು ದೂರುವ ಒಂದೊಂದು ಪರಿಯನ್ನೂ ಹೇಳಿ, ಅವುಗಳೆಲ್ಲವೂ ಎಷ್ಟು ನಿರಾಧಾರವಾದುವು ಎಂಬುದನ್ನು ಸ್ಪಷ್ಟಪಡಿಸುವನು. ಗೋಪಿಯರು ಇಲ್ಲದ ಸುದ್ದಿ ಹುಟ್ಟಿಸಿ, ಅವನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ಯಶೋದೆಯ ಬಳಿಗೆ ಬಂದು ಅವನನ್ನು ಕಳ್ಳನೆಂದು ವೃಥಾ ಅಪಾದಿಸುವರಂತೆ 'ಗಡಿಗೆಯ ಹಾಲನ್ನು ಕುಡಿಯಲು ತನ್ನ ಹೊಟ್ಟೆಯೇನಾದರೂ ಕೆರೆಯೆ?' ಎಂದು ಪ್ರಶ್ನಿಸಿ, ನಿಜ ವೃತ್ತಾಂತವನ್ನು ಬಲರಾಮನನ್ನು ಕೇಳಿ ತಿಳಿಯಬಹುದು ಎನ್ನುವನು ದೇವರಿಗಾಗಿ ಮೀಸಲಿಟ್ಟ ಬೆಣ್ಣೆಯನ್ನು ತಿಂದವನೂ ಅವನಲ್ಲವಂತೆ! ಏಕೆಂದರೆ ದೇವರಿಗಾಗಿ ತೆಗೆದಿಟ್ಟಿದ್ದ ಬೆಣ್ಣೆಯನ್ನು ಕದ್ದು ಮೆದ್ದರೆ, ದೇವರು ಅವನ ಕಣ್ಣನ್ನು ಕುಕ್ಕುವನಂತೆ! ಎತ್ತರವಾದ ಸ್ಥಳದಲ್ಲಿಟ್ಟಿದ್ದನ್ನು ಅವನು ಪಡೆಯಲು ಕಷ್ಟವೇ ಸರಿ! ಅಷ್ಟೇ ಏಕೆ, ಅವನ ತಾಯಿ ಅವನಿಗಾಗಿ ಕೊಟ್ಟಿದ್ದ ಹಾಲನ್ನೇ ಕುಡಿಯದವನು ಮತ್ತೊಬ್ಬರ ಮನೆಯ ಹಾಲಿಗೆ ಬಾಯಿ ಬಿಡುವನೆ? ಇನ್ನು ಆ ಗೋಪಿಯರು ಆರೋಪಿಸುವ ಹಾದರದ ಸುದ್ದಿಯೂ ಶುದ್ಧ ಸುಳ್ಳಂತೆ! ಏಕೆಂದರೆ ಅವನು ಇನ್ನೂ ಪ್ರಬುದ್ಧನಲ್ಲದ ಮೇಲೆ

ಆ ಮಾತಿನಲ್ಲಿ ಫುರುಳುಂಟೆ? ಇಷ್ಟೆಲ್ಲ ಹೇಳಿ ಕಡೆಗೆ ಕೃಷ್ಣನು ಅಮ್ಮ! ನಾ ನಿನ್ನ ಕಂದನಲ್ಲವೆ?' ಎಂದು ದೈನ್ಯವನ್ನು ನಟಿಸುವನು. ಆಗ ತಾಯಿಯ ಹೃದಯ ಕರಗಿ, ಮುದ್ದಾದ ಮಗನನ್ನು ಎತ್ತಿಕೊಂಡು ಮುದ್ದಾಡುವಳು ಕೊನೆಯ ಪಂಕ್ತಿಯಲ್ಲಿ "ರಂಗವಿಠಲನ ಪಾಡಿ ಉಡುಪಿನ ಉತ್ತುಂಗ ಕೃಷ್ಣನ ತೂಗಿದಳು" ಎಂದು ಇರುವುದರಿಂದ, ಇದು ಉಡುಪಿಯ ಕೃಷ್ಣನನ್ನು ಕಂಡಾಗ ರಚಿಸಿರಬಹುದಾದ ಕೃತಿಯಿರುವಂತಿದೆ ಕಡೆಗೋಲು ಪಿಡಿದ ಉಡುಪಿಯ ಕೃಷ್ಣನ ಬಾಲಲೀಲೆ ದಾಸರಿಗೆ ಈ ಕೃತಿ ರಚಿಸಲು ಪ್ರೇರಣೆಯನ್ನಿತ್ತಿರಬಹುದು

ಕಠಿನ ಶಬ್ದಗಳ ಅರ್ಥ ಹರವಿ—ದೊಡ್ಡ ಗಡಿಗೆ ಪುಂಡಾತನ—ಪೋಕರಿತನ

೧೯

ಸಾವು ಸಂಭವಿಸುವುದಕ್ಕೆ ಮುಂಚೆ ಮನ್ಮಥನ ತಂದೆಯಾದ ವಿಷ್ಣುವನ್ನು ಸ್ಮರಿಸಬೇಕೆಂಬ ಹಿತೋಪದೇಶವಿಲ್ಲಿದೆ. ಯಮನ ದೂತರು ಬಂದು ಪ್ರಾಣವನ್ನು ಅಪಹರಿಸುವ ಕಾಲದಲ್ಲಿ ಬೇರೆ ಯಾರೂ ನಮಗೆ ನೆರವಾಗಲಾರರು ಎಂದು ತಿಳಿಸುತ್ತಾರೆ. ಈ ನೆಪದಲ್ಲಿ ಯಮಬಾಧೆಯ ಒಂದೆರಡು ಚಿತ್ರಗಳನ್ನು ಕೊಟ್ಟಿರುತ್ತಾರೆ

ಕಠಿನ ಶಬ್ದಗಳ ಅರ್ಥ ಚಿತ್ತಜನಯ್ಯ—ಮನ್ಮಥನ ತಂದೆ, ಶ್ರೀಕೃಷ್ಣ. ಜಾಲ—ಕೋಟಲೆ (?). ದಂಡಧರ—ಯಮ ಆಂಗಳು—ಬಾಯಿಯ ಮೇಲ್ಭಾಗ.

೨೦

'ಮಧ್ವನಾಮ' ಎಂಬ ಹೆಸರಿನಲ್ಲಿ ಸುಪ್ರಸಿದ್ಧವಾಗಿರುವ ಈ ಕೀರ್ತನೆಯಲ್ಲಿ ಹನುಮ, ಭೀಮ ಮತ್ತು ಮಧ್ವರ ಅವತಾರಗಳ ವರ್ಣನೆಯಿದೆ ಈ ಮೂವರು ವಾಯುದೇವರ ಅವತಾರವೆಂಬ ನಂಬಿಕೆ ಮಾಧ್ವರಲ್ಲಿದೆ. (ದೇವಸ್ಯ ಭರ್ಗೋಃ ಮಹತ್ ವಾಯೋಃ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ ಮಧ್ವೋ ಯತ್ತು ತೃತೀಯಕಂ ) ಜೀವೋತ್ತಮರಾದ ವಾಯುದೇವರು ತ್ರೇತ, ದ್ವಾಪರ ಮತ್ತು ಕಲಿಯುಗಗಳಲ್ಲಿ ಲೋಕೋದ್ಧಾರಕ್ಕಾಗಿ ಹೇಗೆ ಅವತರಿಸಿದರೆಂಬುದನ್ನು ಇಲ್ಲಿ ಸವಿಸ್ತಾರವಾಗಿ ನಿರೂಪಿಸಿದೆ. ಈ ಮಧ್ವನಾಮದ ಶ್ರೇಷ್ಠತ್ವವನ್ನು ಸಾರಿ ಹೇಳುವ ಸಲುವಾಗಿ ಜಗನ್ನಾಥದಾಸರು ಇದಕ್ಕೆ ಒಂದು ಫಲಸ್ತುತಿಯನ್ನು ಬರೆದಿರುವರು.

ನು ೧-೪. ಈ ಅವತಾರತ್ರಯಗಳಿಗೆಲ್ಲ ಮೂಲರಾದ ವಾಯುದೇವರ ಸ್ತುತಿಯಿಂದ ಈ ಕೀರ್ತನೆ ಮೊದಲಾಗುತ್ತದೆ. ಆವ ಕಚ್ಛಪರೂಪದಿಂದಲಂಡೋದಕವ ಆ ವಾಯು ನಮ್ಮ ಕುಲ ಗುರುರಾಯನು ಈ ಜಗತ್ತನ್ನು ಆದಿಶೇಷನು ಹೊತ್ತಿರುವನೆಂಬ ಕಲ್ಪನೆ ನಮ್ಮಲ್ಲಿದ್ದರೂ, ವಾಯುದೇವರು ಸರ್ವಶಕ್ತನೂ, ಸರ್ವಧಾರಕನೂ ಎಂಬುದಾಗಿ ಪರಿಗಣಿತವಾಗಿರುವುದರಿಂದ ಶ್ರೀಪಾದರಾಜರು ಈ ನುಡಿಯಲ್ಲಿ ಆದಿಶೇಷನಿಗೂ ಆಶ್ರಯರಾಗಿ ವಾಯುದೇವರು ಬ್ರಹ್ಮಾಂಡದ ಸುತ್ತಲೂ ವ್ಯಾಪಿಸಿರುವ ನೀರಿನಲ್ಲಿ ಕೂರ್ಮರೂಪಿನಿಂದ (ಕಚ್ಛಪರೂಪ) ಕರ್ತವ್ಯಮಗ್ನರಾಗಿರುವರೆಂದು ತಿಳಿಸಿರುತ್ತಾರೆ ಇದಕ್ಕೆ ಆಧಾರಭೂತವಾದ ಈ ಸಂಸ್ಕೃತದ ಶ್ಲೋಕಗಳನ್ನು ಗಮನಿಸಬಹುದು

ಸ ಏಷ ಕೂರ್ಮರೂಪೇಣ ವಾಯುರಂಡೋದಕೇ ಸ್ಥಿತಃ ।
ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ॥
ಉಪಾಸ್ತೇ ಕೂರ್ಮರೂಪಂ ಯೋ ವಾಯು ಸಂಸ್ಥಿತಿಮಾಪ್ನುಯಾತ್ ।
ಇಚ್ಛಯಾ ವಿನಿವೃತ್ತಿಂ ವಾ ಲೋಕಂ ಚಾಽವೃತ್ತಿವರ್ಜಿತಂ ॥
(ಆನಂದತೀರ್ಥ ವಿರಚಿತ ಬೃಹದಾರಣ್ಯಕ ಉಪನಿಷದ್ಭಾಷ್ಯ, ಅ. 111, ಬ್ರಾ. ೨).

ಆ ವಾಯುದೇವರ ಅನುಗ್ರಹದಿಂದ ಸರ್ವರೂ ಹರಿಯ ಕೃಪೆಗೆ ಪಾತ್ರರಾಗುವರು. ಆದಕ್ಕಾಗಿ ಈ ಮಧ್ವನಾಮದ ಮೊದಲಲ್ಲಿ ವಾಯುದೇವರ ಈ ಸ್ತುತಿ ತುಂಬ ಅರ್ಥವತ್ತಾಗಿದೆ. ಈ ವಾಯುವನ್ನೇ ಮುಖ್ಯಪ್ರಾಣನೆಂದು ಕರೆಯುವರು ವಾಯುದೇವರು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಎಂಬುದಾಗಿ ಜೀವಿಗಳಲ್ಲಿ ನೆಲಸಿ ಚೇತನ ಕಾರಣರಾಗಿರುವರು ಆದ್ದರಿಂದ ವಾಯುದೇವರಿದ್ದಲ್ಲಿ 'ಹರಿ ನೆಲಸಿಹನು', ಇಲ್ಲದಿದ್ದಲ್ಲಿ 'ಹರಿ ತಾ ತೊಲಗುವನು.' ನಮ್ಮ ಶರೀರದ ಒಂದೊಂದು ಅವಯವಕ್ಕೂ ಒಬ್ಬೊಬ್ಬ ಕರಣದೇವತೆಯುಂಟು ಆಯಾ ದೇವತೆ ಕೈಬಿಡಲು ಆಯಾ ಅವಯವಕ್ಕೆ ಮಾತ್ರ ನ್ಯೂನತೆಯುಂಟಾಗುತ್ತದೆ ಮುಖ್ಯಪ್ರಾಣನಾದರೊ ಸರ್ವ ಚೇಷ್ಟೆಗಳಿಗೂ ಕಾರಣನು. ಆತನು ಅಗಲಿದರೆ ಸಮಸ್ತ ದೇಹವೇ ಅಪ್ರಯೋಜಕವೆನ್ನಿಸಿ ಅದು ಹೆಣವೆಂದು ಕರೆಯಲಾಗುತ್ತದೆ ಜೀವೋತ್ತಮರಾದ ವಾಯುವೇ ಶ್ರೇಷ್ಠರೆನ್ನಿಸಿರುವುದರಿಂದ ದಾಸರು, 'ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ ಪರತರನೆನಿಸಿ ನಿಯಾಮಿಸಿ ನೆಲಸಿಪ' ಹರಿಯಭಕ್ತನೆಂದು ತಿಳಿಸಿರುವರು ಪವಮಾನನ ಈ ಸ್ತುತಿ ಮಧ್ವನಾಮಕ್ಕೆ ತಕ್ಕ ಪೀಠಿಕೆಯಾಗಿದೆ.

ನು. ೫-೧೧ ಈ ನುಡಿಗಳಲ್ಲಿ ವಾಯುದೇವರು ತ್ರೇತಾಯುಗದಲ್ಲಿ ಹನುಮಂತನಾಗಿ ಅವತಾರವೆತ್ತಿ ಲೋಕೋದ್ಧಾರವನ್ನು ಮಾಡಿದ ವಿವರವಿದೆ. ರಾಮನ ಸೇವೆಗಾಗಿಯೇ ಹನುಮಂತನಾಗಿ ಉದಿಸಿದ. ಪೋತಭಾವದಿ ತರಣಿ ಬಿಂಬಕ್ಕೆ ಲಂಘಿಸಿದ: ಹನುಮಂತನು ಹುಟ್ಟಿದೊಡನೆಯೇ ಆಕಾಶದತ್ತ ದೃಷ್ಟಿ ಹರಿಯಿಸಲು, ಅಲ್ಲಿದ್ದ ಸೂರ್ಯ ಹಣ್ಣಿನಂತೆ ಮಗುವಿಗೆ ತೋರಿಬಂದನಂತೆ ಆಗ ಅದನ್ನು ಪಡೆಯಲೆಂದು ಹಾರಲು, ಇಂದ್ರನು ಕೋಪದಿಂದ ಕೆನ್ನೆಗೆ ಏಟು ಕೊಟ್ಟನಂತೆ. ಅಂದಿನಿಂದ ಹನುಮಂತನ ಮುಖ ವಿಶಿಷ್ಟವಾದ ಆಕಾರವನ್ನು ತಾಳಿತೆಂದು ನಂಬಿಕೆ. ಆದರೆ ಮುಂದೆ ಸೂರ್ಯನನ್ನು ಆಶ್ರಯಿಸಿ ಹನುಮಂತನು ವ್ಯಾಕರಣಗಳನ್ನು ಕಲಿತು ನವವ್ಯಾಕರಣಪಂಡಿತನೆನ್ನಿಸಿದನು ಅವನ ಬಾಯಲ್ಲಿ ಒಂದಾದರೂ ಅಪಶಬ್ದ ಬರುತ್ತಿರಲಿಲ್ಲ. ಆತನ ಒಡೆಯನಾದ ರಾಮನೂ ಸಹ ಹನುಮಂತನ ಈ ಸ್ಪಷ್ಟೋಚ್ಚಾರಣೆಯನ್ನು ಮೆಚ್ಚಿ ಅವನನ್ನು ಅನುಕರಿಸತೊಡಗಿದನಂತೆ. ರಾಮನನ್ನು ಸುರಕ್ಷಿತವಾದ ಸ್ಥಳದಲ್ಲಿ ನಿಲ್ಲಿಸಿ, ತಾನು ಸಮುದ್ರೋಲ್ಲಂಘನವನ್ನು ಮಾಡಿ, ಲಂಕೆಯನ್ನೇ ಸುಟ್ಟುಬಂದನು ಅಶೋಕವನದಲ್ಲಿದ್ದ ಸೀತೆ ತನ್ನ ಕೈಗಿತ್ತ ಚೂಡಾಮಣಿಯನ್ನು ರಾಮನಿಗೆ ತಂದು ಒಪ್ಪಿಸಿದ ರಾವಣನ ಸಂಹಾರದಲ್ಲಿ ತನ್ನ ಸ್ವಾಮಿಗೆ ಬೆಂಬಲವಾಗಿ ನಿಂತ. ಕಪಿಸೇನೆಯೆಲ್ಲ ಸರ್ಪಬಂಧದಲ್ಲಿ ಸಿಕ್ಕಿ ಸಂಕಟಪಡುತ್ತಿರಲು, ಜಾಂಬವಂತನ ಅಣತಿಯಂತೆ ಸಂಜೀವಿನಿ ಮೂಲಿಕೆಗಿಂತ ಹೆಚ್ಚಾಗಿ ಸಂಜೀವಿನಿ ಪರ್ವತವನ್ನೇ ಹೊತ್ತುತಂದ. ಹನುಮಂತನ ಮಹತ್ಕಾರ್ಯಗಳನ್ನೆಲ್ಲ ಮನವಾರೆ ಮೆಚ್ಚಿಕೊಂಡ ಶ್ರೀರಾಮನು ಆತನಿಗೆ ಬ್ರಹ್ಮಪದವಿಯನ್ನು ಕೊಡುವುದಾಗಿ ಹೇಳಲು, ಆತನು ಆ ಪದವಿ ಪ್ರಶಸ್ತಿಗಳಾವುದನ್ನೂ ಒಲ್ಲದೆ ಪರಮಾತ್ಮನ ಸೇವೆಯೊಂದನ್ನೇ ಬೇಡಿ ಪಡೆದ ಆದ್ದರಿಂದಲೇ ಹನುಮಂತನು ದಾಸ್ಯಭಾವಕ್ಕೆ ಸೂಕ್ತವಾದ ನಿದರ್ಶನ

ನು. ೧೨-೨೧ · ಈ ನುಡಿಗಳಲ್ಲಿ ವಾಯುದೇವರು ದ್ವಾಪರದಲ್ಲಿ ಭೀಮಸೇನನ ಅವತಾರವನ್ನು ತಾಳಿ ಬಂದ ವಿವರವನ್ನು ಹೇಳಿದೆ ಭೀಮನು ಹುಟ್ಟುವುದೇ ತಡ ಪ್ರಕೃತಿಯೆಲ್ಲ ತಲ್ಲಣಿಸಿತು. ಅವನ ಪರಾಕ್ರಮದ ಎದುರು ಯಾರೂ ನಿಲ್ಲುವಂತಿರಲಿಲ್ಲ. ಕೌರವರು ಕುಡಿಸಿದ ವಿಷ, ಅರಗಿನ ಮನೆಗೆ ಹತ್ತಿಸಿದ ಬೆಂಕಿ, ಇವು ಯಾವುವೂ ಅವನಿಗೆ ತಟ್ಟಲಿಲ್ಲ ಅಷ್ಟೇ ಅಲ್ಲದೆ, ಅಲ್ಲಿದ್ದ ಬಕಾಸುರ, ಹಿಡಿಂಬಾಸುರರನ್ನೂ ಸಂಹರಿಸಿದನು. ಬೆನ್ನಟ್ಟಿ ಬಂದ ರಾಕ್ಷಸಾದಿಗಳನ್ನೆಲ್ಲ ಸದೆಬಡಿದು ದ್ರೌಪದಿಗೆ ಸಂತೋಷವನ್ನುಂಟುಮಾಡಿದ. ರಾಜಕುಲಶ್ರೇಷ್ಠನಾದ ಮಾಗಧನನ್ನು ಸೀಳಿದ ಕೌರವರ ಸೈನ್ಯವನ್ನೇ ಸವರಿಹಾಕುವೆನೆಂದು ಪ್ರತಿಜ್ಞೆ ಮಾಡಿದ ಅಡವಿಯಲ್ಲಿ ಎದುರಾದ ಕಿರ್ಮೀರಾದಿಗಳನ್ನು ಕೊಂದು, ಹೆಂಡತಿಗೆ ಸೌಗಂಧಿಕಾಪುಷ್ಪವನ್ನು ತಂದುಕೊಟ್ಟ ಮಾನಿನಿಗೆ ಸೌಗಂಧವನೆ ತಂದ · ಪಾಂಡವರು ವನವಾಸ ಮಾಡುತ್ತಿದ್ದ ಸಮಯದಲ್ಲಿ ದ್ರೌಪದಿಯು ಕುಬೇರನಿಗೆ

ಸೇರಿದ ತೋಟದ ಕೊಳದಲ್ಲಿದ್ದ ಸೌಗಂಧಿಕಾಪುಷ್ಪವನ್ನು ಬಯಸಿದಳು. ಅದನ್ನು ತರಲು ಹೊರ ಹೊಗ ದಾರಿಯಲ್ಲಿ, ತ್ರೇತಾಯುಗದಲ್ಲಿ ಹಲವಾರು ಮಹತ್ಕಾರ್ಯಗಳನ್ನು ಮಾಡಿ ಬಳಲಿದ್ದ ಹನುಮಂತನನ್ನು ಕಂಡನು ಭೀಮನು ಗರ್ಜಿಸಲು, ಆ ಹನುಮಂತನು ತನ್ನ ಬಾಲವನ್ನು ಸ್ವಲ್ಪ ವಾರೆ ಮಾಡಬೇಕೆಂದು ಕೇಳಿಕೊಂಡನು. ಉಭಯರಿಗೂ ವಾಗ್ವಾದ ಮೊದಲಾಯಿತು. ಕಡೆಗೆ ಭೀಮನು, ಎದುರಿಗಿರುವವನೂ ತನ್ನಂತೆಯೇ ವಾಯು ಅವತಾರನಾದ ಹನುಮಂತನೆಂದು ತಿಳಿದುಕೊಂಡನು. ಆ ವಯೋವೃದ್ಧನಾದ ಹನುಮಂತನ ಮನವನ್ನು ಒಲಿಸಿ, ದ್ರೌಪದಿಗೆ ಬೇಕಾಗಿದ್ದ ಸೌಗಂಧಿಕಾಪುಷ್ಪವನ್ನು ತಂದುಕೊಟ್ಟ.

ಕೀಚಕನನ್ನೂ ಅವನ ನೂರು ಜನ ತಮ್ಮಂದಿರನ್ನೂ ಸವರಿ ಹಾಕಿದ. ಕೀಚಕ ಮೊದಲಾದವರ ಸರದಿಯಾದ ಬಳಿಕ ದುಶ್ಶಾಸನನ ಸಂಹಾರಮಾಡಿದ. ಮಹಾಭಾರತದ ಯುದ್ಧದಲ್ಲಿ ಅಶ್ವತ್ಥಾಮನು ಪಾಂಡವರ ಮೇಲೆ ನಾರಾಯಣಾಸ್ತ್ರವನ್ನು ಪ್ರಯೋಗಿಸಲು, ಭೀಮನನ್ನು ಹೊರತು ಉಳಿದವರೆಲ್ಲ ಭಯಗ್ರಸ್ತರಾದರು ಭೀಮನ ಸಮ್ಮುಖದಲ್ಲಿ ಅದು ನಿಸ್ತೇಜವಾಯಿತು

(ಮಹಾಭಾರತ ತಾತ್ಪರ್ಯ ನಿರ್ಣಯ, ಅ. ೨೬.)

ನು. ೨೨-೨೭ ಈ ನುಡಿಗಳಲ್ಲಿ ಶ್ರೀಮಧ್ವಾಚಾರ್ಯರ ಜೀವನದ ಸಾಧನಗಳನ್ನು ಚಿತ್ರಿಸಿದೆ. ಹಿಂದಿನ ಯುಗಗಳಲ್ಲಿ ರಾಕ್ಷಸರಾಗಿ ಹುಟ್ಟಿದ್ದವರು ಕಲಿಯುಗದಲ್ಲಿ ಮತ್ತೆ ಜನ್ಮವೆತ್ತಿ ವೇನನ ಮತವನ್ನು ಪ್ರಚಾರಮಾಡತೊಡಗಿದ್ದರು. ಆಗ ಆ ಪವಮಾನದೇವರೇ ಜನರ ಉದ್ಧಾರಕ್ಕಾಗಿ ಮಧ್ವಾಚಾರ್ಯರೆಂಬ ಹೆಸರಿನಲ್ಲಿ ಬೆಳಗಿದರು. ಚಿಕ್ಕಂದಿನಲ್ಲಿಯೇ ಬದರಿಯ ಯಾತ್ರೆಯನ್ನು ಕೈಕೊಂಡು ಸಮಸ್ತ ಶಾಸ್ತ್ರಗಳಲ್ಲಿಯೂ ಪ್ರವೀಣರಾಗಿ, ಭೂಮಂಡಲದಲ್ಲಿ ವ್ಯಾಪಿಸಿದ್ದ ಮಾಯಾ ವಾದವನ್ನು ಖಂಡಿಸಿದರು. ಮಾಯಾವಾದಿಗಳು ಸರ್ವೇಶ್ವರನಾದ ಹರಿ ಮತ್ತು ಜಗತ್ತುಗಳೆಲ್ಲ ಮಿಥ್ಯೆಯೆಂದು ಸಾರುತ್ತಿರಬೇಕಾದರೆ, ಶ್ರೀ ಮಧ್ವಾಚಾರ್ಯರು, ಸರ್ವೇಶ್ವರನಾದ ಹರಿಯೂ, ಜಗತ್ತೂ ತಥ್ಯವೆಂದು ಸಮರ್ಥನೆ ಮಾಡಿದರು. ತಮ್ಮ ಕೆಲಸವೆಲ್ಲ ಮುಗಿದ ಬಳಿಕ ಬದರಿಕಾ ಶ್ರಮಕ್ಕೆ ಹಿಂದಿರುಗಿ, ತಮ್ಮ ಪರಮಜ್ಞಾನದಿಂದ ಪುನೀತರಾದರು. ಶ್ರೀಪಾದರಾಜರು ತಮ್ಮ ಆಚಾರ್ಯರನ್ನು ಹೃತ್ಪೂರ್ವಕವಾಗಿ ಸ್ತುತಿಸಿ ವಂದಿಸಿರುವರು.

ಶ್ರೀಪಾದರಾಜರ ಕಾಲಕ್ಕೆ ಸುಮಾರು ಮುನ್ನೂರು ವರ್ಷಗಳ ತರುವಾಯ ಹರಿದಾಸ ಪರಂಪರೆ ಯಲ್ಲಿ ಹೆಸರುವಾಸಿಯಾದ ಜಗನ್ನಾಥದಾಸರು (ಕ್ರಿ.ಶ. ೧೭೨೮-೧೮೦೯) ಈ ಕೃತಿಗೆ ಬರೆದಿರುವ ಫಲಸ್ತುತಿಯ ಮೂಲಕ ಇದರ ಮಹತ್ವವನ್ನು ತಿಳಿಯಬಹುದು. ಈ ಮಧ್ವನಾಮವನ್ನು ಓದಿದ ವರಿಗೂ, ಬರೆದವರಿಗೂ ಗ್ರಹಣ ದಿನಗಳಂದು ಗೋಸಹಸ್ರಗಳನ್ನು ಬ್ರಾಹ್ಮಣರಿಗೆ ದಾನಮಾಡಿ ದಷ್ಟು ಶುಭಫಲ ಪ್ರಾಪ್ತವಾಗುತ್ತದೆ ಎನ್ನುವರು. ಹೀಗೆಯೇ ಲೌಕಿಕವಾಗಿ ಅನೇಕ ಇಷ್ಟಾರ್ಥ ಗಳು ನೆರವೇರುವುವು. ಎಲ್ಲ ದೃಷ್ಟಿಗಳಿಂದಲೂ ಇದು ಸುಖದಾಯಕವೆನ್ನುವರು

ಕಠಿನ ಶಬ್ದಗಳ ಅರ್ಥ: ಜಗತ್ರಾಣ—ಜಗತ್ತಿನ ರಕ್ಷಕ. ಸುತ್ರಾಣ—ಶಕ್ತಿದಾಯಕ. ಸದ್ಧಾಮ—ಒಳ್ಳೆಯ ನೆಲೆ. ಕಚ್ಛಪ—ಆಮೆ. ಅಂಡೋದಕ—ಬ್ರಹ್ಮಾಂಡವನ್ನು ಬಳಸಿರುವ ನೀರು. ಓವಿ—ಒಲಿದು ಶೇಷಮೂರುತಿ—ಆದಿಶೇಷ. ಬಳಿವಿಡಿ—ಅನುಸರಿಸು. ಎಯ್ದು— ತಲಪು ಕರಣಾಭಿಮಾನಿ ಸುರರು—ಇಂದ್ರಿಯಾಭಿಮಾನಿಗಳಾದ ದೇವತೆಗಳು. ಬುಧಜನ— ವಿದ್ವಾಂಸರು ಪರತರ—ಶ್ರೇಷ್ಠ ವಾತಸುತ—ವಾಯುಕುಮಾರ. ಪೋತಭಾವ—ಶಿಶುಭಾವ, ಮಗುವಿನಂತೆ. ತರಣಿಬಿಂಬ—ಸೂರ್ಯಬಿಂಬ. ಲಂಘಿಸು—ಹಾರು. ಎಣೆ—ಸಮಾನ ಶಬ್ದ ಶಾಸ್ತ್ರ—ವ್ಯಾಕರಣ. ಉರವಣಿಸಿ—ಆತುರಿಸಿ. ನಿಖಿಳವ್ಯಾಕರಣಗಳ ಇವ ಪೇಳಿದ: ಹನುಮಂತನು ಸೂರ್ಯನನ್ನು ಆಶ್ರಯಿಸಿ ವ್ಯಾಕರಣ ಸೂತ್ರ, ಸೂತ್ರವೃತ್ತಿ, ಭಾಷ್ಯ ಮೊದಲಾದುವುಗಳನ್ನು ಕಲಿತ ನೆಂದು ವಿದಿತವಾಗುತ್ತದೆ. ಅಲ್ಲದೆ ಇವನೇ ಒಂದು ವ್ಯಾಕರಣವನ್ನು ರಚಿಸಿದನೆಂದು ಪ್ರತೀತಿ ಇವನಿಗೆ

ನವವ್ಯಾಕರಣ ಪಂಡಿತನೆಂಬ ಬಿರುದೂ ಉಂಟು. (ಸಂಸ್ಕೃತದಲ್ಲಿ ಇಂದ್ರ, ಚಂದ್ರ, ಕಾಶಕೃತ್ಸ್ನ, ಕೌಮಾರ, ಅಪಿಶಲ, ಶಾಕಟಾಯನ, ಪಾಣಿನಿ, ಸಾರಸ್ವತ ಮತ್ತು ಶಾಕಲ ವಿರಚಿತ ಒಂಬತ್ತು ವ್ಯಾಕರಣಗಳು ಉಲ್ಲೇಖವಾಗಿವೆ.) ತರಣಿಸುತ—ಸೂರ್ಯವಂಶಕ್ಕೆ ಸೇರಿದ ಶ್ರೀರಾಮ. ಧರಣಿಸುತೆ—ಭೂದೇವಿಯ ಮಗಳಾದ ಸೀತೆ. ದನುಜರು—ರಾಕ್ಷಸರು. ಹರಿ—ಶ್ರೀವಿಷ್ಣುವಿನ ಅವತಾರವಾದ ಶ್ರೀರಾಮ. ಚೂಡಾಮಣಿ—ಸೀತಾದೇವಿಯ ಶಿರೋಮಣಿ. ಹರಿ—ಕಪಿ. ದಶಶಿರ—ರಾವಣ ಹುಡಿಗುಟ್ಟು—ಪುಡಿಮಾಡು, ನಶಿಸು. ಗಿರಿಸಹಿತ ಸಂಜೀವನವ ಕಿತ್ತುತಂದಿತ್ತ: ಲಕ್ಷ್ಮಣನು ಯುದ್ಧದಲ್ಲಿ ಮೂರ್ಛೆ ಹೋಗಿರಲು ಅವನನ್ನು ಎಚ್ಚರಿಸಲು ಸಂಜೀವಿನಿ ಮೂಲಿಕೆ ಬೇಕಾಗಿತ್ತು. ಆ ಕೆಲಸವನ್ನು ಮಾಡಲು ಹೊರಟ ಆಂಜನೇಯನು ಸಂಜೀವಿನಿ ಮೂಲಿಕೆಯನ್ನು ಹುಡುಕಲು ಹೊತ್ತಾಗುವುದೆಂದೆಣಿಸಿ, ಸಂಜೀವಿನಿ ಪರ್ವತವನ್ನೇ ಕಿತ್ತುತಂದ ಸಂಗತಿ ಸುಪ್ರಸಿದ್ಧವಾದುದು. ಹರಿವರ—ಕಪಿಶ್ರೇಷ್ಠ. ಸರಿ—ಸಮಾನರು. ಮೌಕ್ತಿಕ—ಮುತ್ತು. ಅಜಪದವಿ—ಬ್ರಹ್ಮಪಟ್ಟ. ಸೋಮಕುಲ—ಚಂದ್ರವಂಶ. ಶತಶೃಂಗ—ಇದು ಒಂದು ಪರ್ವತದ ಹೆಸರು. ಹರಿ—ಸಿಂಹ. ಕುರುಪ—ಕೌರವ, ದುರ್ಯೋಧನ. ಗರಳ—ವಿಷ. ಉರಗ—ಹಾವು. ಜಾಹ್ನವಿ—ಗಂಗಾನದಿ. ಅನುಜರು—ತಮ್ಮಂದಿರು. ದ್ರೌಪದಿಯ ಕೈವಿಡಿದು—ಭಾರತೀದೇವಿಯ ಅಂಶಳಾದ ದ್ರೌಪದಿಯನ್ನು ಭೀಮನೇ ಕೈ ಹಿಡಿದನೆಂಬ ಸಂಗತಿ ಇಲ್ಲಿ ವಿಶೇಷವಾದದ್ದು. ಮಾಗಧ—ಜರಾಸಂಧ, ಕೃಷ್ಣನ ವೈರಿ. ರಾಜಸೂಯಯಾಗ ಮಾಡುವುದಕ್ಕೆ ಪೂರ್ವಭಾವಿಯಾಗಿ ದಿಗ್ವಿಜಯ ಯಾತ್ರೆಗೆ ಹೊರಟಂದು, ಈತನನ್ನು ಕೃಷ್ಣನು ಭೀಮನ ಕೈಯಿಂದ ಕೊಲ್ಲಿಸುವನು. ಆಜಿ—ಯುದ್ಧ. ಅನ್ವಯ—ವಂಶ. ಗುರುಸುತ—ಅಶ್ವತ್ಥಾಮ ಹರಿಯ ದಿವ್ಯಾಸ್ತ್ರ—ನಾರಾಯಣಾಸ್ತ್ರ. ವೃಕೋದರ—ಭೀಮ. ತ್ರಿಭುವನ—ಮೂರುಲೋಕ. ವಿಬುಧರು—ವಿದ್ವಾಂಸರು. ವೇನ—ಅಂಗರಾಜನ ಮಗನಾದ ಈತನು ಒಬ್ಬ ನಾಸ್ತಿಕ. ಇವನು ರಾಜನಾದ ಬಳಿಕ ದೇಶದಲ್ಲಿ ಸಾತ್ವಿಕರು ಬಾಳುವುದೇ ಕಷ್ಟವಾಯಿತು. ದೇವತೆಗಳನ್ನೂ ಧಿಕ್ಕರಿಸಿ ಬಹಳ ಅಹಂಕಾರದಿಂದ ಮೆರೆದನು. ಕಡೆಗೆ ಋಷಿಗಳ ಹಿತೋಪದೇಶವನ್ನು ಅಲಕ್ಷಿಸಿದ್ದರಿಂದ ಅವರ ಹುಂಕಾರ ಮಾತ್ರದಿಂದಲೇ ಅವನಳಿಯನ್ನೈದಿದ (ಭಾಗವತ, IV, ಅ ೧೪). ಈ ವೇನನ ನಾಸ್ತಿಕಮತ ಮತ್ತೆ ಭೂಮಿಯಲ್ಲಿ ಪ್ರಚಾರವಾಗತೊಡಗಿತ್ತು ಎಂದು ಇಲ್ಲಿಯ ಅಭಿಪ್ರಾಯ. ಅರ್ಭಕತನ—ಚಿಕ್ಕಂದಿನಲ್ಲಿ. ಉರ್ವಿ—ಭೂಮಿ. ಉರ್ವಿಯೊಳು ಮಾಯೆ ಬೀರಲು ತತ್ತ್ವಮಾರ್ಗವನು· ಶ್ರೀಮಧ್ವಾಚಾರ್ಯರ ಅವತಾರದ ಕಾಲಕ್ಕೆ ಶಂಕರರ ಅದ್ವೈತಮತ ಸಾಕಷ್ಟು ಪ್ರಸಿದ್ಧವಾಗಿತ್ತು. ಅಲ್ಲಿನ ಮಿಥ್ಯಾವಾದವನ್ನು ಕುರಿತ ಮಾತಿದು. ಇದನ್ನು ಶ್ರೀಮಧ್ವಾಚಾರ್ಯರು ಬಲವಾಗಿ ಖಂಡಿಸಿದರು. ಶರ್ವ—ಈಶ್ವರ. ಗೀರ್ವಾಣಸಂತತಿ—ದೇವತೆಗಳ ಸಮೂಹ ದುರ್ವಾದಿಮತತಿಮಿರ ಮಾರ್ತಾಂಡ—ಶಾಸ್ತ್ರವಿರುದ್ಧವಾದ ಮತಾಂಧಕಾರಕ್ಕೆ ಸೂರ್ಯನಂತಿದ್ದವರು. ವಾದಿಗಜ ಪಂಚಾನನ—ಪ್ರತಿವಾದಿಗಳೆಂಬ ಆನೆಗೆ ಸಿಂಹಸದೃಶರಾಗಿದ್ದವರು ಚಾರ್ವಾಕಗರ್ವಪರ್ವತ ಕುಲಿಶ—ನಾಸ್ತಿಕವಾದ ಪುರಸ್ಕರ್ತೃಗಳಾದ ಚಾರ್ವಾಕರ ಗರ್ವವೆಂಬ ಪರ್ವತಕ್ಕೆ ವಜ್ರಾಯುಧದಂತಿದ್ದವರು. ಶ್ರೀಮಧ್ವಾಚಾರ್ಯರು ತಮಗಿಂತ ಪೂರ್ವದಲ್ಲಿ ರಚಿತವಾಗಿದ್ದ ೨೧ ಭಾಷ್ಯಗಳನ್ನು ಖಂಡಿಸಿದರೆಂದು ವ್ಯಕ್ತವಾಗುತ್ತದೆ. ಆದ್ದರಿಂದ ಈ ವಿಶೇಷಣಗಳು ಅರ್ಥವತ್ತಾಗಿವೆ. ಸೋಮಸೂರ್ಯೋಪರಾಗ—ಚಂದ್ರ ಇಲ್ಲವೇ ಸೂರ್ಯರ ಗ್ರಹಣ ಕಾಲದಲ್ಲಿ ಭೂಮಿದೇವರು—ಬ್ರಾಹ್ಮಣರು. ಸುರನದಿ—ಗಂಗಾನದಿ ತಟ—ದಡ ಸೂತ್ರನಾಮಕ—ಚೇತನಾಚೇತನಗಳಲ್ಲಿ ಅಂತರ್ಗತನಾಗಿರುವ ವಾಯುದೇವರು. ಭವಕೂಪಾರ—ಜನ್ಮವೆಂಬ ಸಮುದ್ರ.

೨೧

ಹರಿದಾಸ ಸಾಹಿತ್ಯದ ವಿಶಿಷ್ಟ ಪ್ರಕಾರಗಳಲ್ಲಿ ಜೋಗುಳ ಪದವೂ ಒಂದು. ಇದನ್ನೇ ಲಾಲಿ ಪದವೆಂದೂ ಕರೆಯುವುದುಂಟು. ಪ್ರಕೃತ ಕೀರ್ತನೆಯಲ್ಲಿ ಪರಮಾತ್ಮನನ್ನು ತೊಟ್ಟಿಲಲ್ಲಿ ಮಲಗಿಸಿ ದೇವಾನುದೇವತೆಗಳು ಮತ್ತು ಅವರವರ ಪತ್ನಿಯರೂ ಕೂಡಿ ಜೋಗುಳ ಹಾಡಿದ ವರ್ಣನೆಯಿದೆ. ಭಗವಂತನ ಮಹಿಮೆಗೆ ತಕ್ಕಂತೆ, ಇಲ್ಲಿನ ತೊಟ್ಟಿಲು ಅಸದೃಶವಾದದ್ದು ಭೂಮಿಯೇ ಚಿನ್ನದ ತೊಟ್ಟಿಲು; ಅದಕ್ಕೆ ಸೂರ್ಯ ಚಂದ್ರರೇ ಕಲಶಗಳು ಚತುರ್ವೇದಗಳು ನಾಲ್ಕು ಸರಪಣಿಗಳು. ಜೋಗುಳ ಹಾಡುವಲ್ಲಿ ಕೃಷ್ಣನ ಲೀಲಾವಿನೋದಗಳನ್ನು ಮೊದಲು ಹೇಳಿದೆ ಅನಂತರ ದಶಾವತಾರದ ಇತರ ವಿವರಗಳೆಲ್ಲ ಬಹು ಸ್ವಾರಸ್ಯವಾಗಿ ನಿರೂಪಿತವಾಗಿವೆ

ಕಠಿನ ಶಬ್ದಗಳ ಅರ್ಥ: ಕಷ್ಟ ನಿರ್ಧೂಮ—ಕಷ್ಟ ಪರಿಹಾರಕ. ತುತಿ—ಸ್ತುತಿ ಇಂಬಿಡು—ಸಲಹು ನಿಗಮಗೋಚರ—ವೇದಗಳಿಗೆ ತೋರಿಬರುವವನು ತಮನ ಮರ್ದಿಸಿ ವೇದತತಿಗಳನು ತಂದೆ: ತಮನೆಂಬ ರಾಕ್ಷಸನು ವೇದಗಳನ್ನು ಅಪಹರಿಸಿಕೊಂಡು ಸಮುದ್ರದಲ್ಲಿ ಅಡಗಿಕೊಳ್ಳಲು ಆಗ ವಿಷ್ಣುವು ಮತ್ಸ್ಯಾವತಾರವನ್ನೆತ್ತಿ ಅವನನ್ನು ಸಂಹರಿಸಿ ವೇದಗಳನ್ನು ಮರಳಿ ತಂದನೆಂದು ಭಾಗವತದಲ್ಲಿ ನಿರೂಪಿತವಾಗಿದೆ (ಈ ರಾಕ್ಷಸನ ಹೆಸರು ಕೆಲವೆಡೆ ಹಯಗ್ರೀವನೆಂದೂ, ಸೋಮಕನೆಂದೂ ಹೇಳಿರುವುದುಂಟು) (ಭಾಗವತ, viii, ಅ. ೨೪) ಸುಮನಸರಿಗಾಗಿ ಮಂದರ ಪೊತ್ತು ನಿಂದೆ: ದೇವತೆಗಳೂ ದಾನವರೂ ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ನಿರ್ಮಿಸಿಕೊಂಡು ಸಮುದ್ರವನ್ನು ಮಥಿಸುವ ಕಾಲದಲ್ಲಿ ಶ್ರೀವಿಷ್ಣುವು ಆಮೆಯ ಅವತಾರವೆತ್ತಿ ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಧರಿಸಿದ್ದನು (ಭಾಗವತ, viii, ಅ. ೭) ಕ್ಷಮೆ—ಭೂಮಿ. ಕ್ಷಮೆಗಾಗಿ ಪೋಗಿ ಹಿರಣ್ಯಾಕ್ಷನ ಕೊಂದೆ: ಹಿರಣ್ಯಾಕ್ಷನು ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರದ ತಳದಲ್ಲಿರಲು, ಶ್ರೀವಿಷ್ಣುವು ವರಾಹಾವತಾರವೆತ್ತಿ ಅವನನ್ನು ಸಂಹರಿಸಿ ಭೂಮಿಯನ್ನು ತನ್ನ ಕೋರೆ ಹಲ್ಲುಗಳ ಮೇಲಿಟ್ಟುಕೊಂಡು ಎದ್ದು ಬಂದನು (ಭಾಗವತ, iii, ಅ.೧೩) ನಮಿಸಿ ಕರೆದರೆ ಕಂಭದಿಂದ್ಹೊರಟು ಬಂದೆ: ತರಳ ಪ್ರಹ್ಲಾದನ ಪ್ರಾರ್ಥನೆಯನ್ನು ಮನ್ನಿಸಿ ಕಂಬದಿಂದ ಹೊರಕ್ಕೆ ಬಂದ ನರಸಿಂಹನು ಹಿರಣ್ಯಕಶಿಪುವನ್ನು ಸಂಹರಿಸಿದನು (ಭಾಗವತ, vii, ಅ. ೮). ತರಳನಾಗಿ ಬಲಿಯದಾನವ ಬೇಡ್ದೆ: ಶ್ರೀ ವಿಷ್ಣುವು ವಾಮನನಾಗಿ ಬಲಿಚಕ್ರವರ್ತಿಯು ಬಳಿಗೆ ಸುಳಿದು ಮೂರು ಹೆಜ್ಜೆಗಳಷ್ಟು ಎಡೆಯನ್ನು ಬೇಡಿ, ತ್ರಿವಿಕ್ರಮನಾಗಿ ಬೆಳೆದು, ಬಲಿಯನ್ನು ಸುತಳಕ್ಕೆ ಮೆಟ್ಟಿದನು (ಭಾಗವತ, viii, ಅ ೧೩). ಪರಶುಧರಿಸಿ ಕ್ಷತ್ರಿಯರ ಸವರಿದೆ: ಪರಶುರಾಮನು ಕಾರ್ತವೀರ್ಯನ ಅಕಾರ್ಯಕ್ಕಾಗಿ ಕುಪಿತನಾಗಿ, ಇಪ್ಪತ್ತೊಂದು ಬಾರಿ ಭೂಮಂಡಲವನ್ನು ಸುತ್ತಿ ಕ್ಷತ್ರಿಯರನ್ನೆಲ್ಲ ತನ್ನ ಕೊಡಲಿಯಿಂದ ಸಂಹರಿಸಿದನು (ಭಾಗವತ, ix, ಅ. ೧೬) ದುರುಳ ರಾವಣನ ಶಿರವ ಚೆಂಡಾಡಿದೆ ದುಷ್ಟ ರಾವಣನ ಸಂಹಾರ ಮಾಡಿದ ಶ್ರೀರಾಮನ ಅವತಾರವನ್ನು ಇದು ಸೂಚಿಸುತ್ತದೆ (ಭಾಗವತ, ix, ಅ. ೧೦–೧೧). ಚರಿಸಿ ಮನೆಗಳ ಪಾಲು ಮೊಸರನ್ನು ಕುಡಿದೆ: ಶ್ರೀಕೃಷ್ಣನು ಗೋಕುಲದಲ್ಲಿ ನಡೆಸಿದ ಹಾವಳಿಯ ವರ್ಣನೆಯಿದು (ಭಾಗವತ, x, ಅ ೧–೪೯) ಬುದ್ಧನಾಗಿ ಪತಿವ್ರತೆರನಾಳಿದೆಯಲ್ಲ: ಶ್ರೀ ವಿಷ್ಣುವು ಬೌದ್ಧಾವತಾರವೆತ್ತಿ ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯಕ್ಕೆ ಗ್ಲಾನಿಯುಂಟಾಗುವಂತೆ ಅವರ ಕಣ್ಣಿಗೆ ವಿವಸ್ತ್ರನಾಗಿ ತೋರಿಬಂದನೆಂದೂ, ಆ ಮೂಲಕ ತ್ರಿಪುರಾಸುರರಿಗೆ ಕೇಡು ಸಂಭವಿಸಿ ಅವರ ಮರಣ ಸನ್ನಿಹಿತವಾಯಿತೆಂದೂ ಹೆಂಗಸರ ಹಾಡುಗಳಲ್ಲಿ ಒಂದು ಕಥೆ ಕೇಳಿ ಬರುತ್ತದೆ. ಈ ತ್ರಿಪುರಾಸುರ ಸಂಹಾರದ ಸಂದರ್ಭದಲ್ಲಿ ಈಶ್ವರನು ವಹಿಸಿದ್ದ ಪಾತ್ರವನ್ನು ಕುರಿತು ಸುಪ್ರಸಿದ್ಧವಾದ ಒಂದು ಕಥೆಯಿರುವುದಷ್ಟೆ ಹೀಗೆಯೇ ಜೈನಸಂಪ್ರದಾಯದ ಕಥೆಯೊಂದು ಶಿಶುಮಾಯಣನ 'ತ್ರಿಪುರದಹನ ಸಾಂಗತ್ಯ'ದಲ್ಲಿ ಸಾಂಕೇತಿಕವಾಗಿ ನಿರೂಪಿತವಾಗಿದೆ.

ಷುದ್ದು ತುರಗವನೇರಿ ಕಲ್ಕ್ಯನಾದ್ಯಲ್ಲ. ಕಲಿಯುಗದಲ್ಲಿ ಅನಾಚಾರಗಳು ಮೇರೆಮೀರಲು ಶ್ರೀ ವಿಷ್ಣುವು ಕಲ್ಕಿ ಅವತಾರವನ್ನೆತ್ತಿ ಕುದುರೆಯೇರಿ ಬರುವನೆಂದು ಹೇಳಲಾಗಿದೆ (ಭಾಗವತ, xii, ಅ. ೨).

## ೨೨

ಹರಿದಾಸರು ತಮ್ಮ ದೈನಂದಿನ ಜೀವನ ಲೌಕಿಕವ್ಯವಹಾರಗಳಲ್ಲಿ ಕಳೆದುಹೋಗುತ್ತಿರುವುದನ್ನು ಕಂಡು, ನೊಂದುಕೊಂಡು, ಭಗವಂತನಲ್ಲಿ ಮೊರೆಹೋಗುವರು ಆತನ ಧ್ಯಾನವೊಂದು ತಮಗೆ ಪ್ರಾಪ್ತವಾದರೆ ಸಾಕು ಎಂದುಕೊಳ್ಳುವರು ಚಂಚಲಚಿತ್ತಕ್ಕೆ ಪರರ ಮನೆಗಳ ತಿಂಡಿತೀರ್ಥಗಳೆಂದರೆ ಪರಮ ಪ್ರಿಯ ಹೀಗೆ ತಮ್ಮನ್ನು ತಾವೇ ಶೋಧಿಸಿಕೊಂಡು, ಪಾಪಿಗಳಲ್ಲಿ ಪಾಪಿಯಾದ ಅಜಾಮಿಳನನ್ನು ಕಡೆಯಲ್ಲಿ ಉದ್ಧಾರ ಮಾಡಿದ ಕೀರ್ತಿಯನ್ನು ಕೇಳಿ ತಾವು ದೇವರ ಬಳಿಗೆ ಬಂದುದಾಗಿಯೂ, ಆ ಖ್ಯಾತಿಯ ಸಲುವಾಗಿ ತಮ್ಮನ್ನೂ ಸಲಹಬೇಕೆಂದೂ ಬೇಡಿಕೊಳ್ಳುವರು. ಎಲ್ಲ ಭಕ್ತರಲ್ಲೂ ಆತ್ಮನಿಂದೆ ಕೇಳಿ ಬರುತ್ತದೆ ಆ ಮೂಲಕ ಅವರ ಮನಸ್ಸು ಶುದ್ಧವಾಗುತ್ತದೆ.

ಕಠಿನ ಶಬ್ದಗಳ ಅರ್ಥ. ಹಯವದನ—ವಿಷ್ಣುವಿನ ಹಯಗ್ರೀವ ಸ್ವರೂಪವನ್ನು ಇಲ್ಲಿ ಸಂಬೋಧಿಸಲಾಗಿದೆ. ನೆನಹು—ಸ್ಮರಣೆ, ಧ್ಯಾನ ಅಜಾಮಿಳ· ಈತನು ಜನ್ಮತಃ ಬ್ರಾಹ್ಮಣನೆನ್ನಿಸಿದ್ದರೂ, ಮಾತಾಪಿತೃಗಳನ್ನೂ, ಧರ್ಮಪತ್ನಿಯನ್ನೂ ತ್ಯಜಿಸಿ ಒಬ್ಬ ಶೂದ್ರ ಸ್ತ್ರೀಯಲ್ಲಿ ವ್ಯಾಮೋಹಗೊಂಡು ದುರಾಚಾರಗಳಲ್ಲಿ ಮಗ್ನನಾಗಿದ್ದನು ಈತನಿಗೆ ನಾರಾಯಣನೆಂಬ ಮಗನಿದ್ದನು ಕಡೆಗಾಲದಲ್ಲಿ ತೊದಲು ತೊದಲುತ್ತ ಮಗನಾದ ನಾರಾಯಣನ ಹೆಸರನ್ನು ಹಿಡಿದು ಕರೆಯಲು ಆ ಮೂಲಕ ಸದ್ಗತಿಯನ್ನು ಪಡೆದನು (ಭಾಗವತ, vi, ಅ. ೧-೨).

ವಾತಜ—ವಾಯುಪುತ್ರ.

## ೨೩

ಸಮಸ್ತ ಪಾಪಗಳನ್ನೂ ಪರಿಹಾರಮಾಡತಕ್ಕ ದೇವರದೇವನಾದ ನರಸಿಂಹನು ತಮ್ಮನ್ನು ಸಂರಕ್ಷಿಸಬೇಕೆಂದು ಕೇಳಿಕೊಳ್ಳುವ ಹರಿದಾಸರ ಮೊರೆ ಇಲ್ಲಿ ಅಡಕವಾಗಿದೆ. ಈ ಸಂದರ್ಭದಲ್ಲಿ ಬಳಸಿರುವ ಉಪಮಾನಗಳೂ, ನಿವೇದಿಸಿಕೊಂಡಿರುವ ಕ್ರಮವೂ ಚೆನ್ನಾಗಿವೆ. ಪರಮಾತ್ಮನ ಹೃದಯ ವಿಶಾಲವಾದ ಸಮುದ್ರದಂತಿರಲು ಅದಕ್ಕೆ ಎಲ್ಲ ಕಾಲುಹೊಳೆಗಳೂ ಒಂದೇ ಅಲ್ಲವೇ? ಭಕ್ತನನ್ನು ಅರಿಷಡ್ವರ್ಗಗಳು ಬಂದು ಕಾಡುತ್ತಿವೆ. ಒಂದು ಮೊಲಕ್ಕೆ ಆರು ಹುಲಿಗಳು ಬಂದು ಮುತ್ತಿದರೆ ಅದರ ಗತಿ ಏನಾಗಬೇಕು? ಹಾಗಾಗಿದೆ ಇಲ್ಲಿನ ಭಕ್ತನ ಪಾಡು. ಪಡೆದ ಮಕ್ಕಳು ಹುಚ್ಚರಾದರೆ ತಂದೆ ತಾಯಿಗಳು ಹೇಗೆ ಕೈಬಿಡುವುದಿಲ್ಲವೋ ಹಾಗೆ ಪರಮಾತ್ಮನು ಭಕ್ತನನ್ನು ಬಿಡುವುದಿಲ್ಲವೆಂದು ಭರವಸೆ. ಭಕ್ತನು ಮಾಡುವ ಸೇವೆಯಿಂದ ಅವನಿಗೆ ಕರ್ಮಗಳಿಂದ ಬಿಡುಗಡೆಯಾಗಬೇಕು. ಅಡಸಿ ಬಂದ ಆಪತ್ತು ತಾಪತ್ರಯಗಳಿಂದ ಮುಕ್ತಿ ಲಭಿಸಬೇಕು. ಇಲ್ಲದಿದ್ದಲ್ಲಿ ದೇವರಿಗೆ ಶರಣಾಗಿ ಏನು ಪ್ರಯೋಜನ ಎಂಬ ಪ್ರಶ್ನೆಯು ಉದಿಸುತ್ತದೆ. ಅರಸಿನ ಸಂಪರ್ಕದಿಂದ ದಾಸಿ ರಂಭೆ ಎನ್ನಿಸುವಂತೆ, ಸ್ಪರ್ಶಶಿಲೆ ಸೋಂಕಲು ಕಬ್ಬಿಣ ಬಂಗಾರವಾಗುವಂತೆ, ಪರಮಾತ್ಮನ ಕೃಪೆಯಿಂದ ಮಾತ್ರವೇ ಭಕ್ತನ ಉದ್ಧಾರ ಅದಕ್ಕಾಗಿ ದಾಸರು, ಕಡೆಯಲ್ಲಿ ಮಾನಾಭಿಮಾನದ ಒಡೆಯನೂ ಸರ್ವಜ್ಞನೂ ಆದ ಗೋವಿಂದನಲ್ಲಿ ಬಲವಾಗಿ ಮೊರೆಯಿಡುವರು.

ಕಠಿನ ಶಬ್ದಗಳ ಅರ್ಥ: ದುರಿತಗಜ—ಪಾಪವೆಂಬ ಆನೆ. ಪಂಚಾನನ—ಸಿಂಹ. ಒಂದು ಮೊಲಕೆ ಆರು ಹುಲಿ ಬಂದು ಕವಿದಿವೆ. ಮೊಲ—ಪರಮ ಸಾತ್ವಿಕವೂ ಸಾಧುವೂ ಆದ ಪ್ರಾಣಿಯ ಹೋಲಿಕೆ ಪ್ರಕೃತದಲ್ಲಿ ಹರಿದಾಸರಿಗೆ ಅನ್ವಯಿಸುತ್ತದೆ. ಆರು ಹುಲಿ—ಕಾಮ, ಕ್ರೋಧ, ಲೋಭ, ಮೋಹ,

ಮದ, ಮಾತ್ಸರ್ಯ ಎಂಬ ಅರಿಷಡ್ವರ್ಗ. ವಾಲ್ಯೆಸು—ಒಲ್ಯೆಸು. ವ್ಯಾವಹಾರಿಕರೂಪದ ಪ್ರಯೋಗ ವನ್ನು ಗಮನಿಸಿ. ತಾಪತ್ರಯ—ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ ತಾಪಗಳು. ಪರುಷ < ಸ್ಪರ್ಶ—ಸ್ಪರ್ಶಶಿಲೆ.

೨೪

ನಾನಾ ಆಭರಣಗಳಿಂದ ಅಲಂಕೃತನಾಗಿ ಸುಂದರನಾಗಿರುವ ಶ್ರೀಕೃಷ್ಣನನ್ನು ಗೋಪಿ ಬೀದಿಗೆ ಹೋಗಬೇಡವೆಂದೂ, ಹೆಂಗಸರು ಆತನ ಸ್ಫುರದ್ರೂಪಕ್ಕೆ ಮರುಳಾಗಿ ತಮ್ಮ ಕಣ್ಣುಗಳಿಂದ ಹೀರಿ, ಕಡೆಗೆ, ದೃಷ್ಟಿ ತಾಗಬಹುದೆಂದೂ ಶಂಕಿಸುವಳು ಈ ನೆಪದಲ್ಲಿ ಶ್ರೀಕೃಷ್ಣನ ವಿಶಿಷ್ಟ ಶೃಂಗಾರಗಳ ವರ್ಣನೆಯಿದೆ.

ಕಠಿನ ಶಬ್ದಗಳ ಅರ್ಥ· ಪೆಂಡ್ಯೆ—ಪೆಂಡೆಯ, ಕಾಲಿಗೆ ಧರಿಸುವ ಬಳೆ. ಪಟ್ಟೆ—ರೇಷ್ಮೆಯ ವಸ್ತ್ರ, ಮಗುಟ ಉರ—ಎದೆ. ವೈಜಯಂತಿ—ಹಾರ ಕೌಸ್ತುಭ—ಸಮುದ್ರಮಥನದಿಂದ ಉದಿಸಿಬಂದ ಒಂದು ರತ್ನ ಶ್ರೀವತ್ಸಲಾಂಛನ—ಶ್ರೀವಿಷ್ಣುವಿನ ಎದೆಯ ಮೇಲಿನ ಚಿಹ್ನೆ. ನಗ—ಬೆಟ್ಟ, ಇಲ್ಲಿ ಗೋವರ್ಧನಗಿರಿ. ಇಂದ್ರನಿಗೆ ಪೂಜೆಯನ್ನು ನಿರಾಕರಿಸಲು ಆಗ ಗೋಕುಲ ದಲ್ಲಿ ಬಲವಾದ ಮಳೆ ಸುರಿಯುವುದು. ಆಗ ಕೃಷ್ಣನು ಗೋವರ್ಧನಗಿರಿಯನ್ನೇ ಕೊಡೆಯಂತೆ ತನ್ನ ಬೆರಳಿನಿಂದ ಎತ್ತಿ ಹಿಡಿಯುವನು (ಭಾಗವತ, X, ಅ ೨೫). ಬಾಹುಪುರಿ—ಬಾಹುಪೂರ, ತೋಳಬಂದಿ. ತಳಿರು—ಚಿಗುರು. ಸುಳಿಪಲ್ಲು—ಸ್ವಚ್ಛವಾದ ಹಲ್ಲು. ನಳಿನದಳಾಕ್ಷ—ತಾವರೆಯ ದಳದಂತಿರುವ ಕಣ್ಣುಳ್ಳವನು. ಕುಂಡಲ—ಕಿವಿಯ ಆಭರಣ ನಾಸಿಕ—ಮೂಗು. ಲಲಾಟ—ಹಣೆ. ತರುಣೀರ ಪೋಟಿ ಮಾಡುತ—ತರುಣಿಯರೊಂದಿಗೆ ಸ್ಪರ್ಧಿಸುತ್ತ. ಚಾಟುಮಾತು—ಮನೋಹರವಾದ ಮಾತು. ಪೊಟ್ಟನಂತೆ—ಹೊಣೆಯಿಲ್ಲದವನಂತೆ (?). ನೀಟು—ಉಚಿತ. ಪಾಟಲಾಧರ—ಕೆಂಪು ತುಟಿಯುಳ್ಳವನು. ಅಂಕಿತ—ಹೆಸರುವಾಸಿಯಾದ ವೇಣು—ಕೊಳಲು. ಪಂಕಜಾಕ್ಷ—ತಾವರೆಯಂತೆ ಕಣ್ಣುಳ್ಳವನು ಹಿಂಗದೆ—ಕುಗ್ಗದೆ, ಇಂಗದೆ.

೨೫

ಕೃತ, ತ್ರೇತ, ದ್ವಾಪರಯುಗಗಳಲ್ಲಿ ಕ್ರಮವಾಗಿ ಧ್ಯಾನ, ಯಜ್ಞ, ದೇವತಾರ್ಚನೆಗಳ ಮೂಲಕ ಭಗವಂತನ ಅನುಗ್ರಹವಾದರೆ, ಈ ಕಲಿಯುಗದಲ್ಲಿ ಈ ಎಲ್ಲ ಪುಣ್ಯವೂ ಗಾಯನದ ಮೂಲಕವೇ ಲಭಿಸುವುದೆಂಬ ಭಾವನೆ ಹರಿದಾಸರ ಕೀರ್ತನ ಕೈಂಕರ್ಯಕ್ಕೆ ತಕ್ಕಂತಿದೆ. ಇದು ವಿಷ್ಣುಪುರಾಣ ದಲ್ಲಿ ಉಕ್ತವಾಗಿರುವ ಒಂದು ಶ್ಲೋಕದ ಯಥಾವತ್ತಾದ ಅನುವಾದ. ಕೀರ್ತನವನ್ನು ಒಂದು ಸಂಪ್ರದಾಯವನ್ನಾಗಿ ಬೆಳೆಸಿದ ಶ್ರೀಪಾದರಾಜರೇ ಇದನ್ನು ಹಾಡಿರುವ ಸಂಭವ ಹೆಚ್ಚು ಅಂಕಿತ ಪಲ್ಲಟವಾಗಿ ಪುರಂದರದಾಸರ ರಚನೆಗಳಲ್ಲಿ ಇದು ಸೇರಿ ಹೋಗಿರುವಂತಿದೆ.

ಕಠಿನ ಶಬ್ದಗಳ ಅರ್ಥ· ಯಜನ—ಯಾಗಮಾಡುವಿಕೆ. ದಾನವಾಂತಕ—ರಾಕ್ಷಸರಿಗೆ ಯಮ ಸ್ವರೂಪನಾದ ಶ್ರೀಹರಿ ಕೈಗೊಡು—ಕೈನೀಡಿ ಸಲಹುವುದು.

೨೬

ಇದು ಶ್ರೀಕೃಷ್ಣನನ್ನು ಕುರಿತ ಒಂದು ಪ್ರಾರ್ಥನೆ ಕೀರ್ತನೆಯಲ್ಲಿ ರಾಮಾವತಾರ ಮತ್ತು ಕೃಷ್ಣಾವತಾರಗಳೆರಡರ ಸ್ತುತಿಯೂ ಇದೆ.

ಕಠಿನ ಶಬ್ದಗಳ ಅರ್ಥ. ಪಾಹಿ—ಸಂರಕ್ಷಿಸು ದಿನಕರಭವಪಾಲ—ಸೂರ್ಯವಂಶೋದ್ಧಾರಕ ನಾದ ಶ್ರೀರಾಮ ಕನಕಾಂಕಿತ ಚೇಲ—ಚಿನ್ನದಿಂದ ಮಾಡಿದ ಉಡುಗೆ ಪವನಜ ಪರಿವಾರ —ಭೀಮಸೇನನೇ ಮೊದಲಾದವರು ಯವನವಿದಾರ—ಕಾಲಯವನನ ವಿನಾಶಕ ತುಂಗ

ವಿಹಂಗ—ಉನ್ನತವಾದ ಪಕ್ಷಿಯಾದ ಗರುಡ ತುರಂಗ—ಕುದುರೆ, ಗರುಡನನ್ನೇ ಅಶ್ವವಾಹನ ವಾಗುಳ್ಳವನು. (ಇದೇ ಪ್ರಯೋಗ ಮುಂದೆ ಪುರಂದರದಾಸರಲ್ಲಿಯೂ ಕೇಳಿ ಬರುತ್ತದೆ 'ಗರುಡ ದೇವನೆ ತುರಗ') ದಯಾಪಾಂಗ—ದಯಾದೃಷ್ಟಿಯುಳ್ಳವನು. ಭವಭಂಗ—ಜನ್ಮವನ್ನು ನಿವಾರಿಸುವವನು.

## ೨೭

ಇದರಲ್ಲಿ ದಾಸರು ತಮ್ಮ ತನು, ಮನಗಳನ್ನು ಪರಮಾತ್ಮನ ಸೇವೆಗೆ ಹೇಗೆ ಸಮರ್ಪಿಸಿರುವರೆನ್ನುವದನ್ನು ನಿವೇದಿಸಿಕೊಂಡಿದ್ದಾರೆ. ಆಯಾ ಅವಯವಗಳಿಂದ ಹೇಗೆ ಸೇವೆ ಸಲ್ಲುವುದೆಂಬ ನಿರೂಪಣೆಯಿದೆ.

ಕಠಿನ ಶಬ್ದಗಳ ಅರ್ಥ: ಚರಣ—ಪಾದ. ಎರಗು—ನಮಸ್ಕರಿಸು. ಚಕ್ಷು—ಕಣ್ಣು. ಎರಕ—ಪ್ರೀತಿ. ಕರಣ < ಕರ್ಣ—ಕಿವಿ. ನಾಸಿಕ—ಮೂಗು ನಿರುಮಾಲ್ಯ < ನಿರ್ಮಾಲ್ಯ—ದೇವರಿಗೆ ಪೂಜಿಸಿದ ಪುಷ್ಪಹಾರ. ಘ್ರಾಣಿಸು—ಮೂಸಿನೋಡು. ಬಲ್ಪು—ಬಲವಾಗಿ. ಇಲ್ಲಿ 'ಖ್ಯಾಲಿನಿಂದಲೆ' ಎಂಬ ಪಾಠಾಂತರವಿದೆ. ಕೆಲವು ಸಂದರ್ಭಗಳಲ್ಲಿ ಇದಕ್ಕೆ ಧ್ಯಾನ ಎಂಬ ಅರ್ಥವೂ ಉಂಟು. ಇದು ತುಂಬ ವಿರಳ ಪ್ರಯೋಗ. ಶ್ರೀಪಾದರಾಜರ ಶೈಲಿಯಲ್ಲಿ ಈ ರೀತಿಯ ಉರ್ದು ಶಬ್ದ ಪ್ರಯೋಗ ಹೆಚ್ಚಾಗಿ ಕಂಡುಬರುವುದಿಲ್ಲವಾದ ರಿಂದ ಇಲ್ಲಿ ಸಂಪಾದಕರ ಪಾಠವನ್ನು ನಿರ್ದೇಶಿಸಿದೆ. ಮುಂದೆ ಬರುವ ಸ್ಮರಣೆಗೆ ಪೋಷಕವಾಗಿ 'ಬಲ್ಪು' ಸರಿಹೋಗಬಹುದೆಂದು ಆಶಿಸಿ ಹೀಗೆ ಸೂಚಿಸಿದೆ. ವೃತ್ತಿ–ಪ್ರವೃತ್ತಿ, ಮನೋಧರ್ಮ. ಈ ಕೀರ್ತನೆ ಪುರಂದರವಿಠಲಾಂಕಿತದಲ್ಲಿಯೂ ದೊರೆಯುತ್ತದೆ. ಆದರೆ ಹೆಚ್ಚಿನ ಆಕರಗಳಲ್ಲಿ 'ರಂಗವಿಠಲ'ನೆಂಬ ಅಂಕಿತವೇ ಇರುವುದರಿಂದ ಇದನ್ನು ಶ್ರೀಪಾದರಾಜರದೆಂದು ಅಂಗೀಕರಿಸಿದೆ

## ೨೮

ಈ ಕೀರ್ತನೆಯಲ್ಲಿ ಶ್ರೀಪಾದರಾಜರು, ಮನಸ್ಸು ಸಹಜವಾಗಿ ಎಂತಹುದು ಎನ್ನುವುದನ್ನು ಪ್ರಸ್ತಾಪಿಸಿರುತ್ತಾರೆ ಅದು ಸರ್ವದಾ ಹೀನ ಕಾರ್ಯಗಳತ್ತ ಪ್ರವರ್ತಿಸುವುದಾಗಿ ತಿಳಿಸಿ, ಕೆಲವು ಹೇಯಕಾರ್ಯಗಳನ್ನು ಉಲ್ಲೇಖಿಸಿರುವರು ಅದರ ದುರ್ಗುಣಗಳನ್ನು ಹೋಗಲಾಡಿಸಬಲ್ಲವನು ಪರಮಾತ್ಮನೊಬ್ಬನೇ ಆದುದರಿಂದ ಆತನನ್ನು ಮರೆಹೊಕ್ಕಿರುವುದಾಗಿ ಹೇಳಿಕೊಂಡಿರುವರು. ಇಲ್ಲಿನ ಪಲ್ಲವಿ ತುಂಬ ಅರ್ಥವತ್ತಾಗಿದೆ. ಕಡೆಗೆ ರಂಗವಿಠಲನು ಒಲಿದಿದ್ದೇ ಆದರೆ, ಮಾನವನಿಗೆ ರಾಜಪದವಿಯೂ, ಭಕ್ತರಿಗೆ ಸಂರಕ್ಷಣೆಯೂ ಪ್ರಾಪ್ತವಾದೀತೆಂದು ಎಣಿಸಿ, ಆ ಭಗವಂತನನ್ನು ತಾವು ಬಿಟ್ಟಿರುವುದಿಲ್ಲವೆಂದು ಒತ್ತಿ ಹೇಳುವರು.

ಕಠಿನ ಶಬ್ದಗಳ ಅರ್ಥ: ನಿರುತ—ನಿಶ್ಚಯ, ಸದಾ ಉನ್ಮತ್ತರು—ಉದ್ರೇಕಿಗಳು, ಮದಿಸಿದವರು. ಹೇಯ—ತುಚ್ಛ

## ೨೯

ಈ ರಚನೆಯಲ್ಲಿ ದಾಸರು ಪರಮಾತ್ಮನಲ್ಲಿ ಎಂಥ ಅಚಲವಾದ ವಿಶ್ವಾಸವನ್ನಿಟ್ಟಿರುವರೆನ್ನುವುದನ್ನು ತಿಳಿಸಿದೆ. ಲಕ್ಷ್ಮೀನಾರಾಯಣನನ್ನು ಬಿಟ್ಟು ಸಂರಕ್ಷಿಸುವ ಬೇರಾವ ದೈವವೂ ಅವರ ಪಾಲಿಗಿಲ್ಲ ತಮ್ಮ ಜನ್ಮದ ಕ್ಲೇಶಗಳನ್ನೆಲ್ಲ ಹೇಳಿಕೊಂಡಿರುವರು. ಭಗವಂತನ ಗುಣಸ್ತೋಮವನ್ನು ಹೇಳಿ ಶರಣಾಗತರಾಗಿರುವರು.

ಕಠಿನ ಶಬ್ದಗಳ ಅರ್ಥ: ರಂಗನಗರ ಉತ್ತುಂಗನೆ—ಶ್ರೀರಂಗದಲ್ಲಿರುವ ರಂಗನಾಥನನ್ನು ಕುರಿತಿರಬಹುದಾದ್ದರಿಂದ ಆ ಪಟ್ಟಣಕ್ಕೇ ಶ್ರೇಷ್ಠನೆಂದು ಸಂಬೋಧಿಸಿರುವರು. ಗರುಡತುರಂಗನೆ—

ಈ ಪ್ರಯೋಗ ದಾಸರ ರಚನೆಗಳಲ್ಲಿ ವಿಶಿಷ್ಟವಾದುದೆಂದು ಈ ಮೊದಲೇ ಪ್ರಸ್ತಾಪಿಸಿದೆ ಗರುಡ ನನ್ನೇ ಕುದುರೆಯಂತೆ ಬಳಸುವವನು ಎಂದು ಅರ್ಥ ಅನಂಗನ ಪೆತ್ತ ರಂಗವಿಠಲನೆ—ಮನ್ಮಥನು ಶ್ರೀವಿಷ್ಣುವಿನ ಪುತ್ರನೆಂದು ನಂಬಿಕೆ.

## ೩೦

ಈ ಸುಳಾದಿಯಲ್ಲಿ ಹರಿದಾಸರು ಸರ್ವಶಕ್ತನಾದ ಭಗವಂತನಲ್ಲಿ ತಮ್ಮ ಸುಖದುಃಖಗಳನ್ನೆಲ್ಲ ನಿವೇದಿಸಿಕೊಂಡು, ಆತನೊಬ್ಬನನ್ನೇ ನಂಬಿರುವ ತಮ್ಮನ್ನು ಕಾಪಾಡಬೇಕೆಂದು ಕೇಳಿಕೊಂಡಿರುವರು.

ಕಠಿನ ಶಬ್ದಗಳ ಅರ್ಥ: ನಿನ್ನಾಧೀನ ಶರೀರ ಕರಣ ಚೇಷ್ಟೆಗಳೆಲ್ಲ. ನಿನ್ನಾಧೀನ ಚರಾಚರವೆಂದು ಶ್ರುತಿ ಸಾರುತಲಿವೆ ಈ ಪಂಕ್ತಿಗಳು "ನಾಹಂ ಕರ್ತಾ ಸರ್ವಂ ಹರಿಃ ಕರ್ತಾ" ಎಂಬ ಹೇಳಿಕೆಯ ವಿವರಣೆಯಾಗಿದೆ ಕರಣಚೇಷ್ಟೆಗಳು—ಇಂದ್ರಿಯ ವ್ಯಾಪಾರಗಳು ನಿರಯ—ನರಕ. ಚರಾಚರ—ಚೇತನಾಚೇತನ ಶ್ರುತಿ—ವೇದ. ಲೇಪಿಸು—ಬಳೆ. ಇಂತು ಪುಣ್ಯ ಪಾಪವೆಲ್ಲ ನಿನ್ನ ಲೇಪಿಸವೋ ದೇವ, ಎಂತು ಜೀವರನು ಪುಣ್ಯಪಾಪಂಗಳನುಣಿಸುವೆ: ಪರಮಾತ್ಮನು ಇತರ ಜೀವಿಗಳಿಗೆ ಪ್ರೇರಕನಾಗಿದ್ದು ತಾನು ಮಾತ್ರ ನಿರ್ಲಿಪ್ತನೆನ್ನಿಸುವನು ಆದ್ದರಿಂದ ಪುಣ್ಯ ಪಾಪಗಳ ಫಲ ಜೀವಿಗಳಿಗೆ ಬರುವವೇ ವಿನಾ ಅವನನ್ನು ಸೋಂಕುವುದಿಲ್ಲ. ಹರಣ—ಪ್ರಾಣ. ರವಣ—ಗೋಳು. ಮಾಣಿಸು—ನಿವಾರಿಸು ಭವ—ಜನ್ಮ. ಕುಂದ—ಮಲ್ಲಿಗೆ. ಧವಳ—ಬಿಳುಪು. ಮಂದಹಾಸ—ನಸುನಗೆ ಹೊರೆ—ಸಲಹು. ಜಂಗುಳಿ—ಸಮೂಹ.

## ೩೧

ಭಕ್ತಪರಾಧೀನನಾದ ಪರಮಾತ್ಮನ ಗುಣಮಾಹಾತ್ಮ್ಯೆಯನ್ನು ಈ ಕೀರ್ತನೆಯಲ್ಲಿ ನಿದರ್ಶನಗಳ ಸಮೇತವಾಗಿ ಪ್ರತಿಪಾದಿಸಿದೆ. ಇಲ್ಲಿನ ಪಲ್ಲವಿಯ ಸೊಗಸು ಹೇಳತೀರದು ದಾಸರು ಭಗವಂತನನ್ನು "ನೀನೆ ಬಲ್ಲಿದನೋ ರಂಗಾ, ನಿನ್ನ ದಾಸರು ಬಲ್ಲಿದರೊ" ಎಂದು ಪ್ರಶ್ನೆ ಕೇಳುವುದರಲ್ಲಿ ಭಕ್ತರ ಅಗ್ಗಳಿಕೆಯನ್ನು ಎತ್ತಿ ಹಿಡಿದು, ಭಕ್ತರಿಗೆ ಭಗವಂತನು ಹೇಗೆ ವಶನಾಗುವನೆಂಬುದನ್ನು ಮುಂದೆ ಬಿಡಿಬಿಡಿಯಾಗಿ ಹೇಳತೊಡಗುವರು. ಶ್ರೀಕೃಷ್ಣನು ಧರ್ಮರಾಯನ ಪಕ್ಷ ವಹಿಸಿದ್ದು, ಪಾರ್ಥನ ರಥಕ್ಕೆ ಸಾರಥಿಯಾದದ್ದು, ಬಲಿಚಕ್ರವರ್ತಿಯನ್ನು ಸುತಳಕ್ಕೆ ಮೆಟ್ಟಿದರೂ ಅವನ ಭಕ್ತಿಗಾಗಿ ಮೆಚ್ಚಿ ಅವನ ಮನೆಯ ಬಾಗಿಲನ್ನು ಕಾದದ್ದು, ಭೀಷ್ಮನ ಭಕ್ತಿಗಾಗಿ ಮನಸೋತದ್ದು, ಬಾಲಕನಾದ ಪ್ರಹ್ಲಾದನ ಸಲುವಾಗಿ ನರಮೃಗವಾದದ್ದು ಮೊದಲಾದ ಒಂದೊಂದು ಸನ್ನಿವೇಶವೂ ಸ್ವಾರಸ್ಯವಾಗಿ ಚಿತ್ರಿತವಾಗಿದೆ ಭಾರತ ಭಾಗವತಗಳ ಅವಲೋಕನವಿದೆ ಕಡೆಯ ನುಡಿಯಲ್ಲಿ 'ಸ್ಮರಿಪರ ಮನದಲಿ ಸೆರೆಯ ಸಿಕ್ಕಿದ ಮ್ಯಾಲೆ' ಎಂಬ ಪಂಕ್ತಿ ಭಗವಂತನ ಭಕ್ತವಾತ್ಸಲ್ಯವನ್ನು ಬಹಳ ಚೆನ್ನಾಗಿ ಪ್ರಕಟಪಡಿಸುತ್ತದೆ.

ಕಠಿನ ಶಬ್ದಗಳ ಅರ್ಥ: ನಿಧಾನಿಸು—ಪರಿಶೀಲಿಸು ಪರಬೊಮ್ಮ—ಪರಬ್ರಹ್ಮ. ನಿರುತ—ನಿಶ್ಚಯ. ಶ್ರುತಿ—ವೇದ ಪುರುಹೂತ—ಇಂದ್ರ. ವಾಲೈಸು—ಓಲೈಸು. ಸೂತ—ಸಾರಥಿ. ಜಲಜಭವಾಂಡ—ಬ್ರಹ್ಮಾಂಡ ಬಲಿಯ ಮನೆಯ ಬಾಗಿಲ ಕಾಯ್ದ ಮ್ಯಾಲೆ: ಬಲಿಚಕ್ರವರ್ತಿಯ ದರ್ಪವನ್ನು ಅಡಗಿಸಲು, ಶ್ರೀವಿಷ್ಣು ವಾಮನನಾಗಿ ಅವನ ಬಳಿಗೆ ಬಂದನು. ಆತನಲ್ಲಿ ಮೂರು ಹೆಜ್ಜೆಗಳಷ್ಟು ಎಡೆಯನ್ನು ಬೇಡಿ, ಒಂದು ಹೆಜ್ಜೆಯಿಂದ ಆಕಾಶವನ್ನೂ, ಇನ್ನೊಂದು ಹೆಜ್ಜೆಯಿಂದ ಭೂಮಿಯನ್ನೂ ಅಳೆದು, ಮೂರನೆಯ ಹೆಜ್ಜೆಗೆ ಎಡೆಯಿಲ್ಲದೆ ಹೋಗಲು, ಚಕ್ರವರ್ತಿಯ ಇಷ್ಟಾನುಸಾರ ಅವನ ತಲೆಯಮೇಲೆ ಪಾದವನ್ನಿಟ್ಟು ಅವನನ್ನು ಸುತಳಕ್ಕೆ ತಳ್ಳುವನು (ಭಾಗವತ VIII, ಅ. ೧೮). ಅನಂತರ ಅವನ ಭಕ್ತಿಗೆ ಮೆಚ್ಚಿ ಅವನ ಮನೆಯ ಬಾಗಿಲನ್ನು

ಕಾಯುವನು ಧುರ—ಯುದ್ಧ. ಎಚ್ಚೊಡೆದು—ಹೊಡೆ. ದ್ವಿರುಕ್ತಿ (ಎಚ್ಚು+ ಹೊಡೆ). ಜೋಡು—ಕವಚ. ಧುರದೊಳು ಮ್ಯಾಲೆ · ಅರ್ಜುನನಿಗೆ ಸಾರಥಿಯಾದ ಶ್ರೀಕೃಷ್ಣನು ತಾನು ಯಾವ ಆಯುಧವನ್ನೂ ಹಿಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದನಷ್ಟೆ. ಆದರೆ ಮಹಾಭಾರತ ದಲ್ಲಿ ಬರುವ ಭೀಷ್ಮಪರ್ವದಲ್ಲಿಯೇ ಈ ಪ್ರತಿಜ್ಞೆಗೆ ಭಂಗವುಂಟಾದ ಒಂದು ಸಂದರ್ಭ ಬರುತ್ತದೆ. ಭೀಷ್ಮನಿಗೂ ಅರ್ಜುನನಿಗೂ ಬಲವಾದ ಕಾಳಗ ಸಾಗಿರಲು, ಭೀಷ್ಮನು ಬಿಟ್ಟ ಬಾಣ ಸಾರಥಿಯಾದ ಶ್ರೀಕೃಷ್ಣನಿಗೆ ತಾಕುತ್ತದೆ ಆಗ ಕೆರಳಿದ ಶ್ರೀಕೃಷ್ಣನು ತನ್ನ ಕೈಯಲ್ಲಿ ಚಕ್ರವನ್ನು ಹಿಡಿದುಕೊಂಡು ಭೀಷ್ಮನನ್ನು ಸಂಹರಿಸಲು ತೇರಿಳಿದು ಹೊರಡುವನು. ಆಗ ಭೀಷ್ಮನು ಅಸಹಾಯಕನಾಗಿ ಶ್ರೀಕೃಷ್ಣನನ್ನು ಬಾಯಿತುಂಬ ಕೊಂಡಾಡತೊಡಗುವನು. ಆ ಭಕ್ತನು ಮಾಡಿದ ಗುಣಗಾನಕ್ಕೆ ಮನವೊಲಿದು ಶ್ರೀಕೃಷ್ಣನು ಶಾಂತನಾಗಿ ಹಿಂತಿರುಗುವನು ತೆತ್ತಿಗ— ಸೇವಕ

೩೨

'ಪಾಲೊಳಗದು ನೀರೊಳಗದು ಹರಿ ನಾ ನಿನ್ನ ನಂಬಿದೆನೋ' ಎಂಬ ಪಲ್ಲವಿಯಿಂದಲೇ ಈ ಕೀರ್ತನೆಯ ತಿರುಳೇನೆನ್ನುವುದು ವಿದಿತವಾಗುತ್ತದೆ ಸುಖವೇ ಆಗಲಿ, ದುಃಖವೇ ಆಗಲಿ, ಎರಡನ್ನೂ ಭಕ್ತನು ಸಮಾನವೆಂದೆಣಿಸಿ, ಭಗವಂತನಲ್ಲಿ ಭರವಸೆಯಿಂದಿರುವುದು ಅವನ ಸಹಜ ಗುಣ ಈ ಸ್ವಭಾವವನ್ನು ಇಲ್ಲಿ ವಿವರಿಸಿದೆ "ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯ" ಎಂಬ ಅನುಪಲ್ಲವಿ, 'ನೀನಿಟ್ಟಂಗೆ ಇರುವೆನೋ ಹರಿಯೆ' ಎಂಬ ಇದೇ ದಾಸರ ಇನ್ನೊಂದು ಕೀರ್ತನೆಯ ಪಲ್ಲವಿಯನ್ನು (ಕೀ ೪) ನೆನಪಿಗೆ ತರುತ್ತದೆ ಪ್ರತಿಯೊಂದು ನುಡಿಯಲ್ಲಿಯೂ ಮೇಲೆ ಹೇಳಿದ ದ್ವಂದ್ವಭಾವದ ವಿವರಣೆಯಿದೆ

ಕಠಿನ ಶಬ್ದಗಳ ಅರ್ಥ : ದುರಿತ—ಪಾಪ. ಅಖಿಳಖಿಳ—ಅಭಂಗ, ಭಂಗೆ ಅನವರತ— ಸರ್ವದಾ ಪ್ರಾಣಾಪಾನ ವ್ಯಾನೋದಾನ ಸಮಾನ—ಪಂಚಪ್ರಾಣಗಳು (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಪಂಚಪ್ರಾಣಗಳನ್ನು ಭೇದಿಸಿ ನೋಡುವುದು.

೩೩

ಇದೊಂದು ವಾತ್ಸಲ್ಯಭಾವವನ್ನು ನಿರೂಪಿಸುವ ಸುಪ್ರಸಿದ್ಧವಾದ ಕೀರ್ತನೆ ದಾಸರು ಮುದ್ದು ಬಾಲಕನಾದ ಶ್ರೀಕೃಷ್ಣನನ್ನು ಮಕ್ಕಳ ಮಾತಿನಲ್ಲಿಯೇ ಸ್ವಾಗತಿಸುವ ರೀತಿ ಮನೋಜ್ಞವಾಗಿದೆ. ಮೊದಲನೆಯ ನುಡಿಯಲ್ಲಿ ಶ್ರೀರಾಮನ ಅವತಾರದ ಪ್ರಸಂಗವನ್ನೂ, ಎರಡನೆಯ ನುಡಿಯಲ್ಲಿ ಶ್ರೀಕೃಷ್ಣನ ಅವತಾರದ ಪ್ರಸಂಗವನ್ನೂ ನಿರೂಪಿಸಿ, ಶ್ರೀಕೃಷ್ಣನು ಪಾಂಡವರಿಗೆ ಹೇಗೆ ಪರಮ ಪ್ರಿಯನಾದವನೆಂಬುದನ್ನೂ ತಿಳಿಸಿರುವರು

ಕಠಿನ ಶಬ್ದಗಳ ಅರ್ಥ ಪೋಪು—ಪೋಗುವಿಕೆ ಜಾಹ್ನವಿ—ಗಂಗಾನದಿ. ಶ್ರೀರಾಮನು ಜಾನಕಿಯನ್ನು ವಿವಾಹವಾದ ಸಂದರ್ಭವನ್ನು ಇಲ್ಲಿ ಸೂಚಿಸಿದೆ ಭೀಷ್ಮಕನ ಕುವರಿ—ಭೀಷ್ಮಕ ರಾಜನ ಮಗಳಾದ ರುಕ್ಮಿಣಿ. ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಬೇಕೆಂದು ಮೊದಲು ನಿಶ್ಚಯ ವಾಗಿತ್ತು. ಆದರೆ ಆಕೆಗೆ ಶ್ರೀಕೃಷ್ಣನನ್ನಲ್ಲದೆ ಬೇರಾರನ್ನೂ ವರಿಸುವ ಆಸೆಯಿರಲಿಲ್ಲ. ಇದನ್ನರಿತ ಶ್ರೀಕೃಷ್ಣನು ಸ್ವಯಂವರ ಕಾಲದಲ್ಲಿ ಆಕೆಯನ್ನು ಅಪಹರಿಸಿಕೊಂಡು ಬಂದು ಮದುವೆಯಾಗು ವನು. ಈ ವಿಷಯವನ್ನೆಲ್ಲ ಈ ಎರಡನೆಯ ನುಡಿಯಲ್ಲಿ ಸಂಗ್ರಹವಾಗಿ ಬರೆದಿದೆ. ವಾಲೆ—ಪತ್ರ ಓಲೆ > ವಾಲೆ (ವ್ಯಾವಹಾರಿಕರೂಪ) ಲೆತ್ತ—ಪಗಡೆ.

ಈ ಪುಟ್ಟ ಕೀರ್ತನೆ ತನ್ನ ಅತಿ ಪ್ರಚುರತೆಯಿಂದ ಹಲವಾರು ಪಾಠಾಂತರಗಳಿಂದ ನಿಬಿಡವಾಗಿದೆ. ನುಡಿಗಳಲ್ಲಿ ಪ್ರಾಸೋಲ್ಲಂಘನೆಯಾಗಿದೆ. ಶ್ರೀರಾಮಾವತಾರದಲ್ಲಿ ವಿದಿತವಾಗುವ ರಾವಣನ ವಶ

ವಾಗಬಹುದಾಗಿದ್ದ ಜಾನಕಿಯ ಸಂರಕ್ಷಣೆಗೂ, ಶ್ರೀಕೃಷ್ಣಾವತಾರದಲ್ಲಿ ವಿದಿತವಾಗುವ ಶಿಶುಪಾಲನ ವಶವಾಗಬಹುದಾಗಿದ್ದ ರುಕ್ಮಿಣಿಯ ಸಂರಕ್ಷಣೆಗೂ ಸಾದೃಶ್ಯವಿದೆ. ಹೀಗೆಯೇ ಪಾಂಡವರು ದ್ಯೂತದಲ್ಲಿ ಸೋತು ದಿಕ್ಕುಗೆಟ್ಟಿರಲು ಅವರಿಗೆ ನೆರವಾಗುವ ಶ್ರೀಕೃಷ್ಣನ ಭಕ್ತವಾತ್ಸಲ್ಯ ಕಡೆಯ ನುಡಿಯಲ್ಲಿದೆ. ಶಿಶುರೂಪಿಯಾದ ಭಗವಂತನಲ್ಲಿ ಅಂತರ್ಗತವಾಗಿರುವ ಭಕ್ತಜನಸಂರಕ್ಷಣೆಯನ್ನೇ ಇಲ್ಲಿ ಹರಿದಾಸರು ಸೂಚಿಸಿರುವಂತಿದೆ.

## ೩೪

ಶ್ರೀಕೃಷ್ಣನ ಬಾಲಲೀಲೆಗಳನ್ನು ಈ ಕೀರ್ತನೆಯಲ್ಲಿ ಬಹಳ ಮನೋಹರವಾಗಿ ಚಿತ್ರಿಸಿದೆ. ಶ್ರೀಕೃಷ್ಣನ ಚೋರತನ, ಮಾಹಾತ್ಮ್ಯ ಮತ್ತು ತುಂಟತನಗಳನ್ನು ನಿದರ್ಶನಪೂರ್ವಕವಾಗಿ ನಿರೂಪಿಸಿದೆ

ಕಠಿನ ಶಬ್ದಗಳ ಅರ್ಥ ಮಸ್ತಕ—ತಲೆ, ಶಿರಸ್ಸು ಮುಜ್ಜಗ—ಮೂರು ಜಗತ್ತುಗಳು. (ಮೂರು + ಜಗ > ಮುಜ್ಜಗ. ಪ್ರಾಸದ ಸಲುವಾಗಿ 'ಮೂಜಗ'ವೆಂಬುದಕ್ಕೆ ಬದಲಾಗಿ ಮುಜ್ಜಗವೆಂದು ಬಳಸಲಾಗಿದೆ) ಬೊಜ್ಜೆ—ಹೊಟ್ಟೆ (ಬೊಜ್ಜು ಎಂಬ ಶಬ್ದದೊಂದಿಗೆ ಹೋಲಿಸಿ) ಅಂಗನೆಯರ ವ್ರತಭಂಗವ ಮಾಡಿದ· ಇದು ದಶಾವತಾರಗಳಲ್ಲಿ ಒಂದಾದ ಬುದ್ಧನ ಅವತಾರವನ್ನು ಕುರಿತುದಾಗಿದೆ ತ್ರಿಪುರಾಸುರರ ಸತಿಯರ ಪಾತಿವ್ರತ್ಯಭಂಗವನ್ನು ಮಾಡುವುದರ ಮೂಲಕ, ಆ ರಾಕ್ಷಸರ ಮರಣಕ್ಕೆ ಕಾರಣವಾಗುವ ಶ್ರೀವಿಷ್ಣುವಿನ ಅವತಾರಲೀಲೆಯನ್ನು ಇಲ್ಲಿ ಪ್ರಸ್ತಾಪಿಸಿದೆ.

## ೩೫

ಇದು ಶ್ರೀಕೃಷ್ಣನನ್ನು ಕುರಿತ ಮತ್ತೊಂದು ಸ್ವಾಗತ ಕೀರ್ತನೆ. ಪರಮಾತ್ಮನು ತಮ್ಮ ತಲೆಯ ಮೇಲೆ ತನ್ನ ಕರವನ್ನಿಟ್ಟು ಸಲಹಬೇಕೆಂದು ದಾಸರು ಬೇಡಿಕೊಳ್ಳುವರು ಆತನ ಪಾದಮಹಿಮೆಗಳನ್ನು ಹೊಗಳುವುದಾಗಿಯೂ, ಆತನ ಭಕ್ತರ ಸಹವಾಸವನ್ನು ದಯಪಾಲಿಸಬೇಕೆಂದೂ ಬೇಡಿಕೊಳ್ಳುವರು ಹೇಯ ವಿಷಯಗಳಿಂದ ತಮ್ಮ ಮನಸ್ಸು ದೂರವಾಗಿ ಪರಿಶುದ್ಧವಾಗಿರುವಂತೆ ಅನುಗ್ರಹಿಸಬೇಕೆಂದು ಕೋರಿಕೊಳ್ಳುವರು ತಮ್ಮ ಹೃದಯಾಬ್ಜಮಂಟಪದಲ್ಲಿ ನೆಲಸಿ, ಧ್ಯಾನಗೋಚರನಾಗಿರಬೇಕೆಂದು ಆಶಿಸುವರು

ಕಠಿನ ಶಬ್ದಗಳ ಅರ್ಥ· ಅಂಘ್ರಿಕಮಲ—ಪಾದಪದ್ಮ ಚಾರುತರ—ಸುಂದರತರ ಕರುಣಾವಾರಿಧಿ—ಕರುಣಾ ಸಮುದ್ರ ವಾರಿಜಾಸನ—ಬ್ರಹ್ಮ. ನಿರಜ—ನಿರ್ಮಲ, ಧೂಳಿಲ್ಲದವನು ತವ—ನಿನ್ನ. ಕೊಲ್ಲಿ—ಕೊಂದು (ಈ ಪ್ರಯೋಗ ವಿಶಿಷ್ಟವಾಗಿದೆ ಹಿಂದಿನ ಪಂಕ್ತಿಯ ಅರ್ಥದಲ್ಲಿ ಬರುವ ಒಳಪ್ರಾಸಕ್ಕೆ ತಕ್ಕಂತೆ ಈ ವ್ಯಾಕರಣ ವಿರುದ್ಧವಾದ ರೂಪವನ್ನು ಬಳಸಿರುವಂತಿದೆ) ಏಸು—ಎಷ್ಟು. ಅಭಿವ್ಯಾಪ್ತ—ವ್ಯಾಪಿಸಿರುವ. ಚಿನುಮಯ < ಚಿನ್ಮಯ ನಡುಗನ್ನಡದ ದ್ವಿತ್ವ ವಿರಳವಾದ ರೂಪ.

## ೩೬

ಭೃಗುಮುನಿಯ ಕಥೆಯ ಮೂಲಕ ಹರಿಸರ್ವೋತ್ತಮತ್ವವನ್ನಿಲ್ಲಿ ವರ್ಣಿಸಿದೆ ಒಮ್ಮೆ ತ್ರಿಮೂರ್ತಿಗಳಾದ ಹರಿ, ಹರ, ಬ್ರಹ್ಮರಲ್ಲಿ ಯಾರು ದೊಡ್ಡವರೆಂದು ಶ್ರೇಷ್ಠರಾದ ಮುನಿಗಳು ತರ್ಕಮಾಡತೊಡಗಿದರು. ಇದರ ಇತ್ಯರ್ಥಕ್ಕಾಗಿ ಅವರ ಭೃಗುವನ್ನು ಕರೆಸಿ ವಿಚಾರಿಸಿ ಬರುವಂತೆ ತಿಳಿಸಿದರು. ಅದೇ ಮೇರೆಗೆ ಭೃಗುಮುನಿ ಮೊದಲು ಬ್ರಹ್ಮನಲ್ಲಿಗೆ ಬಂದನು ಬ್ರಹ್ಮನಾದರೋ ಭೃಗುಮುನಿ ತನಗೆ ನಮಸ್ಕರಿಸದೆ ಅವಮಾನಪಡಿಸಿದನೆಂದು ಸಿಟ್ಟಾಗಿ ಆತನನ್ನು ನಿಂದಿಸಿದನು ಭೃಗುಮುನಿ ಬ್ರಹ್ಮನು ಪರತತ್ವವಲ್ಲವೆಂದು ಬಗೆದು, ಈಶ್ವರನ ಬಳಿಗೆ ಬಂದನು. ಅಲ್ಲಿ ಈಶ್ವರನು ಭೃಗುವನ್ನು ತನ್ನ ತಮ್ಮನೆಂಬ ಪ್ರೀತಿಯಿಂದ ತಬ್ಬಿಕೊಳ್ಳಲು ಬರಲು,

ಮುನಿಯು ನಿರಾಕರಿಸಿ ದೂರ ಸರಿದನು ಕುಪಿತನಾದ ಈಶ್ವರನು ಭೃಗುವನ್ನು ಸಂಹರಿಸಲೆಂದು ಶೂಲವನ್ನು ತೆಗೆದುಕೊಳ್ಳಲು, ಪಾರ್ವತಿ ಅಡ್ಡ ಬಂದು ಗಂಡನ ಕೋಪವನ್ನು ತಡೆದಳು. ಅನಂತರ ಭೃಗು ವೈಕುಂಠಕ್ಕೆ ಬಂದನು ಅಲ್ಲಿ ಮಹಾಲಕ್ಷ್ಮಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ ಶ್ರೀವಿಷ್ಣುವನ್ನು ಕಂಡು ತನ್ನ ಕಾಲಿನಿಂದ ಒದೆಯಲು, ದೇವರು ಸ್ವಲ್ಪವೂ ಕೋಪಿಸಿಕೊಳ್ಳದೆ, ಮುನಿಯ ಕಾಲನ್ನು ಮುಟ್ಟಿ, ನಮಸ್ಕರಿಸಿ, ಹೃತ್ಪೂರ್ವಕವಾಗಿ ಸ್ವಾಗತಿಸಿದನು. ಶ್ರೀಹರಿ "ಎಲೈ ಮುನಿಯೆ, ನಿಮ್ಮ ಪಾದಸ್ಪರ್ಶದಿಂದ ನಾನು ಪಾವನನಾದೆ. ನಿಮ್ಮ ಪಾದಧೂಳು ಲಭಿಸುವುದು ಸುಲಭವೆ" ಎಂದು ಕೊಂಡಾಡಿ ಮೈಮರೆತನು ಆಗ ಭೃಗುವಿಗೆ ಶ್ರೀಹರಿಯ ಸಹನೆ, ಸದ್ಗುಣಗಳು ವಿದಿತವಾಗಿ ಆತನೇ ಪರತತ್ತ್ವವೆಂದು ನಿರ್ಧರಿಸಿದನು. ಅಲ್ಲಿಂದ ಬಂದು, ಈ ವಿಷಯವನ್ನು ಮುನಿಗಳಿಗೆ ತಿಳಿಸಿದನು (ಭಾಗವತ X, ಅ. ೮೯) ಪದ್ಮಪುರಾಣದಲ್ಲಿ ಹರ ಮತ್ತು ಬ್ರಹ್ಮರ ವರ್ತನೆ ಬೇರೆ ತೆರನಾಗಿದೆ (ಉತ್ತರಖಂಡ, ಅ ೨೮೨, ಪ ೨೯-೪೨).

ಸಮುದ್ರಮಥನ ಕಾಲದಲ್ಲಿ ಉದಿಸಿದ ಶ್ರೀಲಕ್ಷ್ಮಿ, ಈಶ್ವರ, ಬ್ರಹ್ಮ ಮತ್ತು ಸುರಶ್ರೇಷ್ಠರನ್ನು ಒಲ್ಲದೆ ಶ್ರೀವಿಷ್ಣುವನ್ನು ವರಿಸಿದ್ದು ಸರಿಯಷ್ಟೆ. ಕೊಳದಲ್ಲಿ ಮೊಸಳೆಯ ಬಾಯಿಗೆ ಸಿಕ್ಕಿ ತೊಳಲುತ್ತಿದ್ದ ಗಜೇಂದ್ರನ ಕಷ್ಟವನ್ನು ನಿವಾರಿಸಿದವನು ಶ್ರೀಹರಿಯಲ್ಲವೆ! [ಈ ಗಜೇಂದ್ರನು ಇಂದ್ರದ್ಯುಮ್ನನೆಂಬ ಒಬ್ಬ ವಿಷ್ಣುಭಕ್ತ. ಇವನು ಅಗಸ್ತ್ಯರ ಶಾಪದಿಂದ ಆನೆಯ ಜನ್ಮವನ್ನು ತಾಳುವನು ಗಜೇಂದ್ರನಾದಂದು ಶ್ರೀವಿಷ್ಣುವಿನ ಧ್ಯಾನದಿಂದ ಮೊಸಳೆಯ ಬಾಯಿಂದ ಬಿಡುಗಡೆ ಪಡೆಯುವನು (ಭಾಗವತ VIII, ಅ. ೪) ] ರಾಜಸೂಯಯಾಗ ಕಾಲದಲ್ಲಿ ಭೀಷ್ಮರು ಶ್ರೀಕೃಷ್ಣನೊಬ್ಬನೆ ಅಗ್ರಪೂಜೆಗೆ ಅರ್ಹನೆಂದು ಹೇಳಿದರಷ್ಟೆ. ಈತನ ಪಾದಸಂಗದಿಂದ ಗಂಗೆ ಪುನೀತಳಾದಳು ಗಂಗಾಧರನು ಶ್ರೀಹರಿಯ ದಾಸನು ಶ್ರೀಹರಿ ಮಂಗಳಾತ್ಮಕನು ಮತ್ತು ಜಗತ್ತಿನ ಸೃಷ್ಟಿಗೆ ಕಾರಣನು. ಈ ಎಲ್ಲ ಕಾರಣಗಳಿಂದ ಶ್ರೀಹರಿಯೊಬ್ಬನೇ ಸರ್ವೋತ್ತಮನೆಂಬ ತತ್ತ್ವವನ್ನು ಶ್ರೀಪಾದರಾಜರು ಇಲ್ಲಿ ಪೌರಾಣಿಕ ನಿದರ್ಶನಗಳನ್ನಿತ್ತು ಸಮರ್ಥಿಸಿರುತ್ತಾರೆ.

ಕಠಿನ ಶಬ್ದಗಳ ಅರ್ಥ ವಿರಿಂಚಿ—ಬ್ರಹ್ಮ ಸರಸಿಜಾತ, ಪದ್ಮಜ, ವನಜಭವ—ಬ್ರಹ್ಮ ಮನಸಿಜವೈರಿ—ಮನ್ಮಥನ ವೈರಿಯಾದ ಈಶ್ವರ ಅನುಜ—ತಮ್ಮ. ತಕ್ಕೈಸು—ಆಲಿಂಗಿಸು ಸರಸಿಜನಯ್ಯ—ಬ್ರಹ್ಮನ ತಂದೆಯಾದ ಶ್ರೀವಿಷ್ಣು. ಇಲ್ಲಿ ಮಾಧ್ವ ತತ್ವಕ್ಕೆ ಅನುಸಾರವಾಗಿ ಈ ಸಂಬಂಧವನ್ನು ಹೇಳಿದೆ ಆ ತತ್ವದಲ್ಲಿ ಬ್ರಹ್ಮನು ಶ್ರೀವಿಷ್ಣುವಿನ ಮಗನಾದರೆ, ರುದ್ರನು ಮೊಮ್ಮಗನೆಂದು ಹೇಳಿದೆ ಇದಕ್ಕೆ ತಾರತಮ್ಯವೆಂದು ಹೆಸರು ಪವಡಿಸು—ಮಲಗು ಫುಲ್ಲನಾಭ—ಕಮಲನಾಭ, ಶ್ರೀವಿಷ್ಣು ಪೊಡಮಡು—ನಮಸ್ಕರಿಸು. ಬಿಜಯಂಗೈಸು—ದಯಮಾಡಿಸುವುದು. ಚರಣರಜ—ಪಾದಧೂಳಿ. ಒರೆ—ಹೇಳು ದನುಜರು—ರಾಕ್ಷಸರು ಮೃಡ—ಈಶ್ವರ ದೇವವ್ರತ—ಭೀಷ್ಮ.

## ೩೭

ಮುಕ್ತಿ ಸಂಪಾದಿಸಲಿಚ್ಛಿಸುವವನಿಗೆ ಸುತ್ತಮುತ್ತಲ ವಾತಾವರಣ ಹೇಗೆ ಅನುಕೂಲವಾಗಿರಬೇಕೆಂಬ ಚಿತ್ರವಿಲ್ಲಿದೆ. ಆತನಿಗೆ ಭಕ್ತಿ, ವಿರಕ್ತಿ ಮತ್ತು ಸರ್ವಶಕ್ತಿಗಳೂ ಒಂದುಗೂಡಿಬರಬೇಕು. ಆತನ ಸಂಸಾರ ನೆರವಾಗಬೇಕು. ಇನ್ನು ಆತನು ಕೈಗೊಳ್ಳುವ ಜಪ, ತಪ, ವ್ರತಗಳು ಒಂದಕ್ಕೊಂದು ಹೊಂದಿಕೊಂಡು, ಮನಸ್ಸು ಸಮಾಧಾನವಾಗಿರಬೇಕು ದುಸ್ಸಂಗದಿಂದ ದೂರವಾಗಿ ಸತ್ಸಂಗದ ಸನಿಹದಲ್ಲಿರಬೇಕು ಎಲ್ಲಕ್ಕಿಂತ ಮಿಗಿಲಾಗಿ ರಂಗವಿಠಲನಲ್ಲಿ ಅಚಲವಾದ ನಂಬಿಕೆ ಇರಬೇಕು

ಕಠಿನ ಶಬ್ದಗಳ ಅರ್ಥ : ಜಾಣುವೆ—ಜಾಣ್ಮೆ ಉಪಶಾಂತ—ನೆಮ್ಮದಿ, ಸಮಾಧಾನ.

## ೩೮

ಜನಪ್ರಿಯವಾಗಿರುವ ಶ್ರೀಪಾದರಾಜರ ಕೃತಿಗಳಲ್ಲಿ ಇದೂ ಒಂದು. ಶ್ರೀಹರಿಯ ನಾಮಸ್ಮರಣೆ, ತೀರ್ಥಯಾತ್ರೆ, ಸತ್ಕರ್ಮಸದಾಚಾರಗಳು ಮತ್ತು ಅವಯವಾದಿಗಳ ಸಾರ್ಥಕ್ಯವನ್ನು ಕುರಿತು ಈ ಕೃತಿಯಲ್ಲಿ ಪ್ರಸ್ತಾಪಿಸಲಾಗಿದೆ.

ಕಠಿನ ಶಬ್ದಗಳ ಅರ್ಥ ಶೇಷಗಿರಿವಾಸ—ಆದಿಶೇಷನೇ ತಿರುಪತಿಯ ಗಿರಿಯ ರೂಪದಲ್ಲಿ ಇರುವನೆಂದು ಪುರಾಣೋಕ್ತವಾದ ಸಂಗತಿ ಇದು ಅಲ್ಲಿ ನೆಲಸಿರುವ ಶ್ರೀನಿವಾಸದೇವರನ್ನು ಕುರಿತು ದಾಗಿದೆ ಮಣಿ—ನಮಸ್ಕರಿಸು

## ೩೯

ಭಾಗವತದಲ್ಲಿ ಬರುವ ಭ್ರಮರಗೀತದಿಂದ (x. ಅ ೪೭) ಸ್ಫೂರ್ತಿಗೊಂಡು ಶ್ರೀಪಾದರಾಜರು ಈ ದೀರ್ಘವಾದ ಕೃತಿಯನ್ನು ರಚಿಸಿರುತ್ತಾರೆ. ಇದು ಕೇವಲ ಸಂಸ್ಕೃತದ ಅನುವಾದವಲ್ಲ ಇಲ್ಲಿನ ನಿರೂಪಣೆಯಲ್ಲಿ ದಾಸರ ಕಲ್ಪನಾಭಾಗವೂ ಸಾಕಷ್ಟಿದೆ ಕನ್ನಡದಲ್ಲಿ ಶ್ರೀಪಾದರಾಜರ ಈ ಕೀರ್ತನೆ ಮೊದಲನೆಯದಾಗಿರುವುದು ಮಾತ್ರವಲ್ಲದೆ ತುಂಬ ವಿಶಿಷ್ಟವೂ ಆಗಿದೆ.

ಶ್ರೀಕೃಷ್ಣನು ಮಧುರೆಗೆ ಹೋದ ಮೇಲೆ ಗೋಕುಲದಲ್ಲಿದ್ದ ಗೋಪಿಯರೆಲ್ಲ ಅವನ ಅಗಲಿಕೆಯಿಂದ ತುಂಬ ನೊಂದಿದವರಾದರು. ಆಗ ಒಂದು ಭೃಂಗವು ಹಾರಿ ಬರಲು ಅದು ಶ್ರೀಕೃಷ್ಣನ ದೂತನಿರಬಹುದೆಂದು ಎಣಿಸಿ ಗೋಪಿಯರು ಅದರೊಂದಿಗೆ ತಮ್ಮ ದುಃಖವನ್ನೆಲ್ಲ ತೋಡಿಕೊಳ್ಳುವರು. ಈ ನಿವೇದನೆಯಲ್ಲಿ ಅವರ ಅಂತರಂಗದ ಪರಿಚಯವಾಗುವುದು. ಈ ಕೀರ್ತನೆಯ ಪಲ್ಲವಿ ನಿಡಿದಾಗಿರುವಂತೆಯೇ ತುಂಬ ಆಕರ್ಷಕವಾಗಿಯೂ ಇದೆ ಭೃಂಗವನ್ನು ಶ್ರೀಕೃಷ್ಣನ ಮಿತ್ರನೆಂದು ಭಾವಿಸಿರುವುದರಿಂದ ಅದಕ್ಕೂ ಮೋಸದ ಅಪವಾದ ತಪ್ಪಲಿಲ್ಲ. ಶ್ರೀಕೃಷ್ಣನು ತಾನು ಮಾತ್ರ ಮಧುರೆಯಲ್ಲಿ ಉಳಿದು ನಿನ್ನನ್ನು ನಮ್ಮ ಬಳಿಗೆ ಕಳುಹಿಸಿದನೆ ಎಂದು ಆಕ್ಷೇಪಣೆಯ ಧಾಟಿಯಲ್ಲಿಯೇ ಮೊದಲುಮಾಡುವರು. ಈ ಗೋಪಿಯರಾದರೋ ಹುಲ್ಲೆ ಮೃಗಗಳು ಬೇಡನ ಬಾಣಗಳಿಗೆ ಸಿಕ್ಕಿ ತೊಳಲುವಂತೆ ಮನ್ಮಥನ ಪುಷ್ಪಬಾಣಗಳಿಗೆ ಗುರಿಯಾಗಿ ತುಂಬ ನೊಂದಿರುವರು. ಆ ಭೃಂಗವನ್ನು ಕಂಡೊಡನೆಯೇ ಅವರಿಗೆ ಅಚ್ಯುತನನ್ನು ಕಂಡಷ್ಟೇ ಸಂತೋಷವಾಗುವುದು. ತಾವು ಎಷ್ಟೇ ನವೆಯುತ್ತಿದ್ದರೂ, ಚನ್ನಿಗರರಸನಾದ ಆತನ ಕುಶಲವನ್ನು ಮೊದಲು ಕೇಳುವರು. ಚಿಕ್ಕಂದಿನಿಂದಲೂ ಅವನನ್ನು ಬಲ್ಲ ಅವರು, ಅವನು ಮಾಡಿದ ಕಪಟಕ್ಕಾಗಿ ದೂರುವರು. ಶ್ರೀಕೃಷ್ಣನು ತಮ್ಮನ್ನು ತನ್ನ ಸ್ನೇಹವೆಂಬ ನಾವೆಯಲ್ಲಿಟ್ಟು, ಕಡೆಗೆ ನಡುನೀರಿನಲ್ಲಿ ಕೈಬಿಟ್ಟನೆಂದು ಆಪಾದಿಸುವರು. "ಒಂದು ವೇಳೆ ಆ ಕೃಷ್ಣನು ತನ್ನ ಸಾಕು ತಂದೆತಾಯಿಯರಾದ ನಂದಗೋಪ ಮತ್ತು ಯಶೋದೆಯರನ್ನು ನೋಡಿಬರಲು ಹೇಳಿಕಳುಹಿಸಿರಬಹುದು ಹಾಗೆಯೇ ತಮ್ಮನ್ನು ನೋಡಿಬರಲು ಹೇಳಿರಬಹುದು. ನಾವಾದರೋ ನಮ್ಮ ಅಸ್ತಿತ್ವವನ್ನೆಲ್ಲ ಕಳೆದುಕೊಂಡು ಕಂಗೆಟ್ಟಿರುತ್ತೇವೆ, ಅವನಾದರೋ ಮಧುರೆಯ ನಾರಿಯರ ವ್ಯಾಮೋಹದಲ್ಲಿ ಸಿಕ್ಕಿಬಿದ್ದು ನಮ್ಮೆಲ್ಲರನ್ನೂ ಮರೆತಿರುವನು"—ಎಂದು ಬಗೆಬಗೆಯಾಗಿ ದೂರುವರು. ಮಧುಕುಂಜವನದಲ್ಲಿ ಅವನ ವೇಣುಗಾನಕ್ಕೆ ಮಾರುಹೋಗಿ ನಾಚಿದವರನ್ನು ಅವನು ಸಂತೈಸಿದ ಚಿತ್ರ ಬಹಳ ಚೆನ್ನಾಗಿದೆ. ಆತನೊಂದಿಗೆ ಅವರು ಉಪವನದಲ್ಲಿ ಆಡಿದ ರತಿಕ್ರೀಡೆಯನ್ನು ನೆನೆದು ನೊಂದುಕೊಳ್ಳುವರು. ಬ್ರಹ್ಮ ಮತ್ತು ಮುನಿಜನರ ಗೌರವಕ್ಕೆ ಪಾತ್ರನಾದ ಅಂಥವನನ್ನು ಅಗಲಿ, ತಾವು ನಿರ್ಜೀವಿಗಳಂತೆ ಜೀವಿಸುತ್ತಿರುವುದನ್ನೇ ಕಂಡು ತಾವು ಕಲ್ಲೆದೆಯವರೆಂದು ಆತ್ಮನಿಂದೆ ಮಾಡಿಕೊಳ್ಳುವರು. ನಾನಾ ಆಭರಣಗಳಿಂದ ವಿರಾಜಿಸುತ್ತಿದ್ದ ಆತನನ್ನು ಸ್ಮರಿಸಿ ಸ್ಮರಿಸಿ ಸಂಕಟಪಡುವರು. ಈ ರೀತಿ ತಮ್ಮ

ಮನಸ್ಸನ್ನೆಲ್ಲ ಸೂರೆಗೊಂಡ ಶ್ರೀಕೃಷ್ಣನು ಅಕ್ರೂರನೊಂದಿಗೆ ಹೊರಟುಹೋದುದಕ್ಕಾಗಿ ಪರಿತಪಿಸುವರು

ಈ ಹೃದಯದ ವಿಹ್ವಲವನ್ನು ಸ್ವಲ್ಪ ಸೈರಿಸಿಕೊಂಡು ತಮಗೂ, ಶ್ರೀಕೃಷ್ಣನಿಗೂ ಇದ್ದ ಅಂತರವನ್ನು ತಾವಾಗಿಯೇ ಪರಿಶೀಲಿಸುವರು "ಅವನೋ ಲಕ್ಷ್ಮೀರಮಣ, ನಾವೋ ಸೂಕ್ಷ್ಮರಾದ ಗೊಲ್ಲತಿಯರು ಅವನಿಗೆ ಹೊಟ್ಟೆಯಲ್ಲಿ ಬ್ರಹ್ಮಾಂಡವೇ ಹುದುಗಿದೆ, ನಾವೋ ನೊಣಗಳು. ಅವನು ಮೋಕ್ಷಕ್ಕೆ ಒಡೆಯನು , ನಾವೋ ಹಸುವಿನ ಹಾಲನ್ನು ಕುಡಿದು ತೃಪ್ತರಾಗಿರುವವರು"— ಎಂದು ಹೋಲಿಸಿಕೊಂಡು ಆತನನ್ನು ತಮ್ಮಂಥವರು ಬಯಸುವುದು ಉಚಿತವಲ್ಲವೆಂದು ಬಗೆಯುವರು ಯಾವುದೋ ಪೂರ್ವಾರ್ಜಿತ ಪುಣ್ಯದಿಂದ ಮಥುರೆಯ ನಾರಿಯರು ಅವನನ್ನು ಪಡೆದಿರುವರೆಂದೂ, ಆತನು ತಮ್ಮ ಹೃದಯಮಂದಿರದಲ್ಲಿ ನೆಲಸಿದ್ದರೆ ಸಾಕೆಂದೂ, ತಾವು ರಾಸಕ್ರೀಡೆಯಾಡುವ ಸಂದರ್ಭದಲ್ಲಿ ಏನಾದರೂ ತಪ್ಪು ಮಾಡಿದ್ದರೆ ತಮ್ಮನ್ನು ಮನ್ನಿಸಬೇಕೆಂದೂ ಈ ಗೋಪಿಯರು ಬೇಡಿ ಸಮಾಧಾನಪಟ್ಟುಕೊಳ್ಳುವರು ಶ್ರೀಹರಿಯ ಅವತಾರಗಳನ್ನು ನೆನೆದು, ಅವನಿಗೆ ನಮಿಸುವರು

ಕಠಿನ ಶಬ್ದಗಳ ಅರ್ಥ ಅಂಗಜಲುಬ್ಧಕ—ಮನ್ಮಥನೆಂಬ ಬೇಡ ಪೂಗೋಲು—ಹೂವಿನ ಬಾಣ ಕಿತವ—ಮೋಸಗಾರ ಚಿಣ್ಣತನ—ಚಿಕ್ಕವನು ಗನ್ನಗಾರ—ಮೋಸಗಾರ ನೇಹ—ಸ್ನೇಹ ನಾವೆ—ದೋಣಿ ರಮ್ಮೆ—ರಮೆ ಪ್ರಾಸದಸಲುವಾಗಿ ದ್ವಿತ್ವಪ್ರಯೋಗ ಉಮ್ಮಳಿಸು—ಸಂಕಟಪಡು. ಹೊಮ್ಮೇಲಟ್ಟದಲಿ—ಹೊನ್ನಿನ ಕರುಮಾಡದಲ್ಲಿ ಅಂಚೆಯಗಮ್ಮನೇರ < ಅಂಚೆಗಮನೆಯರು—ಹಂಸದಂತೆ ನಡೆಯುಳ್ಳವರು ಕುಚ—ಮೊಲೆ ಕುಂಕುಮ್ಮ—ಕುಂಕುಮ. ಕಮ್ಮಗೋಲ—ಮನ್ಮಥ ಬಾಹೋದು—ಬರುವುದು (ಬರ್ಪುದು > ಬಹುದು > ಬಾಹೋದು. ಇದು ನಡುಗನ್ನಡದ ವ್ಯಾವಹಾರಿಕ ಪ್ರಯೋಗ ) ಮಧುವೈರಿ—ಮಧುವೆಂಬ ರಾಕ್ಷಸನನ್ನು ಸಂಹರಿಸಿದ ಶ್ರೀಕೃಷ್ಣ ಮದಿರಾಕ್ಷಿಯರು—ಪಾನಾಸಕ್ತರಾದಂತೆ ಕಣ್ಣುಳ್ಳ ಹೆಂಗಸರು. ಧಾಮ—ಮನೆ. ಮೃಗಮದ—ಕಸ್ತೂರಿ ಮೇದಿನಿ—ಭೂಮಿ ಅಧರ—ಕೆಳದುಟಿ. ವಜ್ರಾಂಕುಶಧ್ವಜಾಂಕಿತ ಹೆಜ್ಜೆ—ದೇವರ ಪಾದರೇಖೆಯ ವಿವರವನ್ನಿಲ್ಲಿ ಹೇಳಿದೆ. ರತಿಕಜ್ಜ—ರತಿಕಾರ್ಯ ನಿರ್ಜರೋತ್ತಂಸ—ಶ್ರೇಷ್ಠರಾದ ಸುರರು. ಮಜ್ಜನ—ಸ್ನಾನ. ಅಬ್ಜಭವ—ಬ್ರಹ್ಮ ಕಜ್ಜಲ—ಕಾಡಿಗೆ. ಲಜ್ಜೆಗೆಟ್ಟು—ನಾಚಿಕೆಗೆಟ್ಟು ವಜ್ಜರೆದೆ—ವಜ್ರದಂತಹ ಎದೆ. ಕತ್ತೂರಿ—ಕಸ್ತೂರಿ. ಜೊಲ್ಲೆ ದುರುಬು—ತುರುಬಿನ ಕೊನೆ ಚಲತ್—ಚಲಿಸುವ. ಕುಂಡಲ—ಆಭರಣ. ತಿಂಗಳು—ಚಂದ್ರ. ಶ್ರೀವತ್ಸ—ವಿಷ್ಣುವಿನ ಎದೆಯ ಮೇಲಿನ ಚಿಹ್ನೆ ಕೌಸ್ತುಭ ವೈಜಯಂತಿ—ವಿಷ್ಣುವು ಧರಿಸಿರುವ ಕೊರಳ ಪದಕ ಮುತ್ತು ಮಾಲೆ. ಭುಜಕೀರ್ತಿ—ಬಾಹುಪೂರ, ಭುಜದ ಮೇಲೆ ಹಾಕಿಕೊಂಡಿರುವ ಒಂದು ಅಲಂಕಾರಾಭರಣ ಉತ್ಪಲ—ಕನ್ನೈದಿಲೆ. ಬಾವನ್ನ—ಶ್ರೀಗಂಧ. ತೀಡಿ—ಲೇಪಿಸಿಕೊಂಡು. ಪೊನ್ನಂಬರ—ಚಿನ್ನದಂತಹ ಕಾಂತಿಯುಳ್ಳ ಬಟ್ಟೆ ನೂಪುರ—ಕಾಲಂದುಗೆ ಎಮ್ಮ ಚಿತ್ತಶಿಖಿಗೆ ಪೀಯೂಷಸಿಕ್ತ ಮೇಘದಂತೆ ಒಪ್ಪುವ ಶ್ರೀಹರಿಯ—ತಮ್ಮ ಮನಸ್ಸೆಂಬ ನವಿಲಿಗೆ ನೀರಿನಿಂದ ಕೂಡಿದ ಮೋಡದಂತಿರುವ ಶ್ರೀಹರಿಯ ವಿರಹದಿಂದ ಕಳವಳಪಡುತ್ತಿರುವ ಆ ಗೋಪಿಯರ ಮನದ ತಾಪಕ್ಕೆ ತಂಪನ್ನುಂಟುಮಾಡುವ ಶ್ರೀಹರಿಯನ್ನು ನೆನಸುವ ಈ ಚಿತ್ರ ಸೂಕ್ತವಾಗಿದೆ ಹತ್ತಿಲಿ—ಹತ್ತಿರ (ಅಪೂರ್ವವಾದ ನಡುಗನ್ನಡದ ಪ್ರಯೋಗ ) ಸತ್ವರ—ಬೇಗನೆ ಕುಕ್ಷಿ—ಹೊಟ್ಟೆ ಬೊಮ್ಮಾಂಡ—ಬ್ರಹ್ಮಾಂಡ ಮಕ್ಷಿಕ—ನೊಣ ಅಕ್ಷಿ—ಕಣ್ಣು ಕ್ಷೋಣಿ—ಭೂಮಿ ಚರಾಚರದೀಕ್ಷಿಗೆ—ಚೇತನಾಚೇತನಗಳ ಹೊಣೆಯನ್ನು ಹೊತ್ತಿರುವ ದೇವರಿಗೆ. ಸಾಮ್ಯವೆ—ಹೋಲಿಕೆಯೆ. ಅಕ್ಷಮಣರು—ಅಕ್ಷಮ್ಯರು ಇಂದೀವರ—ಕನ್ನೈದಿಲೆ ಮಂದರೋದ್ಧರ—ಮಂದರಪರ್ವತವನ್ನು ಎತ್ತಿಹಿಡಿದಂತಹ ವಿಷ್ಣು. ವೇದಸ್ತೇಯಾರಿ—ವೇದಗಳನ್ನು

ಕದ್ದವನ (ಸೋಮುಕನ) ಶತ್ರು, (ವೇದ + ಅಸ್ತ್ರೀಯ = ವೇದಾಸ್ತ್ರೀಯ). ಕೊರುಮ< ಕೊರ್ಮ—ಆಮೆ. ಪೊಂಗಣ್ಣ—ಹಿರಣ್ಯಾಕ್ಷ ನರಸಿಂಗ—ನರಸಿಂಹಾವತಾರ. ವಟು—ಬಾಲ ಬ್ರಹ್ಮಚಾರಿ (ವಾಮನ). ಭಾರ್ಗವ—ಪರಶುರಾಮ. ಅಂಗದ ಪಾರ್ಥ ಶಂಭು ತುರಂಗಪ— ಅಂಗದಪ—ರಾಮ, ಪಾರ್ಥಪ—ಕೃಷ್ಣ, ಶಂಭುಪ—ಬುದ್ಧ, ತುರಂಗಪ—ಕಲ್ಕಿ (ಶ್ರೀ ಬೇಲೂರು ಕೇಶವದಾಸರ ವ್ಯಾಖ್ಯಾನ, 'ಹರಿದಾಸ ಸಾಹಿತ್ಯ', ಪು ೧೧೧). ಕಂಬುತುರಂಗಪ—ಶಂಖದಂತೆ ಕೊರಳುಳ್ಳ ಕುದುರೆಯ ಒಡೆಯನಾದ ಕಲ್ಕಿ

## ೪೦

ಈ ಉಗಾಭೋಗದಲ್ಲಿ ಲೌಕಿಕವಾಗಿ ಯಾರು ಯಾರಿಗೆ ಯಾವಾವುದರಿಂದ ಸಂತೋಷ ಬರುವುದೆನ್ನುವುದನ್ನು ತಿಳಿಯಹೇಳಿ, ಅನಂತರ ತಮಗೆ ಪರಮಾತ್ಮನನ್ನು ಸ್ಮರಿಸುವ ಸಂತೋಷ ಲಭಿಸಲಿ ಎಂದು ಪ್ರಾರ್ಥಿಸಿಕೊಳ್ಳಲಾಗಿದೆ.

ಕಠಿನ ಶಬ್ದದ ಅರ್ಥ ತನಯರು—ಮಕ್ಕಳು.

## ೪೧

ಈ ಕೀರ್ತನೆಯಲ್ಲಿ ದಾಸರ ಮಾಧ್ವಮತದ ಮೇಲಿನ ನಿಷ್ಠೆ ಕಂಡುಬರುತ್ತದೆ. ಆನಂದ ತೀರ್ಥರ ಸ್ಮರಣೆ ಮೊದಲ್ಗೊಂಡು ವಿದ್ವಾಂಸರ ಸಹವಾಸ, ಉಪವಾಸ, ಜಪ, ತಪಗಳ ನೇಮ, ಶಾಸ್ತ್ರಪರನಗಳಿಲ್ಲದೆ ಈ ಜೀವನಿಗೆ ಸದ್ಗತಿಯಿಲ್ಲವೆಂದು ತಿಳಿಸಲಾಗಿದೆ.

ಕಠಿನ ಶಬ್ದಗಳ ಅರ್ಥ· ಮರುದಂಶರಮತ—ಮಾರುತನ ಅಂಶದವರಾದ ಆನಂದತೀರ್ಥರ ಮತ. ಗುರುರಾಯ—ಶ್ರೀಮನ್ಮಧ್ವಾಚಾರ್ಯರು. ಘೃತ—ತುಪ್ಪ. ಸೂರಿಜನ—ವಿದ್ವಾಂಸರು. ಏಸು—ಎಷ್ಟು. ಮಧ್ವಶಾಸ್ತ್ರ—ದ್ವೈತಸಿದ್ಧಾಂತ, ತಾರತಮ್ಯಜ್ಞಾನ—ಪಂಚಭೇದ, ನೀಚೋಚ್ಚ ಭಾವವೇ ಮೊದಲಾದ ತತ್ತ್ವಗಳು ಪರಮಗತಿ—ಸದ್ಗತಿ.

## ೪೨

ಶ್ರೀಕೃಷ್ಣನು ಹಸುಗಳನ್ನು ಕಾಯುತ್ತಿರಬೇಕಾದರೆ, ಭಕ್ತನು ತಾನು ಅವನೊಂದಿಗೆ ಇದ್ದದ್ದನ್ನು ನೆನಪು ಮಾಡಿಕೊಡುವ ಧಾಟಿಯಲ್ಲಿ ಈ ಕೀರ್ತನೆ ರಚಿತವಾಗಿದೆ ಶ್ರೀಕೃಷ್ಣನ ಗೋಪಾಲ ಲೀಲೆಯೆಲ್ಲ ಇಲ್ಲಿ ವರ್ಣಿತವಾಗಿದೆ

ಕಠಿನ ಶಬ್ದಗಳ ಅರ್ಥ: ತೊಂಡ—ಸೇವಕ ಕಲ್ಲಿಚೀಲ—ಬುತ್ತಿಯ ಗಂಟು. ಮ್ಯಾಳ< ಮೇಳ. (ವ್ಯಾವಹಾರಿಕ ಪ್ರಯೋಗ) ಶರಣಾಗತರು—ಮರೆಹೊಕ್ಕು ಬಂದವರು. ನರಸಿಂಗ— ನರಸಿಂಹಾವತಾರವನ್ನು ತಾಳಿದ ಭಗವಂತ.

## ೪೩

ಈ ಕೀರ್ತನೆ ವಿಷಯದ ದೃಷ್ಟಿಯಿಂದಲೂ ಮತ್ತು ರಚನೆಯ ದೃಷ್ಟಿಯಿಂದಲೂ ಮುಖ್ಯವಾದುದು ಇಲ್ಲಿ ವೃತ್ತದಂತಿರುವ ಒಂದು ಶ್ಲೋಕವಾದ ಮೇಲೆ ಒಂದು ಪದವು ಬರುತ್ತದೆ. ಇದಕ್ಕೆ 'ವೃತ್ತನಾಮ'ವೆಂದು ಹೆಸರು. ಮಧುರೆಗೆ ಹೊರಟು ನಿಂತಿದ್ದ ಕೃಷ್ಣನನ್ನು ಗೋಪಿಯರು ತಡೆಗಟ್ಟಿ ನಿಲ್ಲಿಸುವುದೇ ಇಲ್ಲಿನ ಮುಖ್ಯ ವಿಷಯ ಒಬ್ಬ ಸಖಿ ತನ್ನ ಗೆಳತಿಯರನ್ನು ಕುರಿತು "ಮಾನನಿಧಿಯಾದ ಶ್ರೀಕೃಷ್ಣನು ಮಧುರೆಗೆ ಹೋಗುವನಂತೆ. ನಮಗೇನು ದಾರಿ?" ಎಂದು ಪ್ರಶ್ನಿಸುವಳು. ಆಗ ಉಳಿದವರು ಅವನನ್ನು ಅಡ್ಡಗಟ್ಟಿ ನಿಲ್ಲಿಸುವುದಾಗಿ ತಿಳಿಸುವರು. ಅದೇ ಮೇರೆಗೆ ಬಂದು ಶ್ರೀಕೃಷ್ಣನನ್ನು ಸುತ್ತುಗಟ್ಟುವರು "ಎಲೈ ಕೃಷ್ಣನೆ' ಬೇಡ, ಮಧುರೆಗೆ ಹೋಗಬೇಡ. ದೈನ್ಯದಿಂದ ಕೇಳಿಕೊಳ್ಳು

ತ್ತೀವೆ" ಎಂದು ಅಂಗಲಾಚುವರು ಶ್ರೀಕೃಷ್ಣನು ಚಿಕ್ಕಂದಿನಿಂದ ಅವರೊಂದಿಗಿದ್ದು ಈಗ ಅವರನ್ನು ಮರೆಯುವುದಿಲ್ಲವೆಂದೂ, ಬೇಗ ಹೋಗಿ ಬರುವೆನೆಂದೂ ಭರವಸೆಯ ಮಾತುಗಳನ್ನು ಆಡುವನು ಆ ಹೆಂಗಸರಿಗಾದರೋ ಮಥುರಾಪುರದ ಹೆಂಗಸರು ಎಲ್ಲಿ ಶ್ರೀಕೃಷ್ಣನನ್ನು ಮರುಳು ಮಾಡುವರೋ ಎಂದು ಭಯ ಬಿಲ್ಲಿನ ಹಬ್ಬದ ನೆವದಲ್ಲಿ ಅವನು ದೂರವಾಗುತ್ತಿರುವನೆಂದು ಅವರಿಗೆ ಸಂಕಟ ಆತನನ್ನು ಅಗಲಿ ತಾವು ಮನ್ಮಥನ ಬಾಣಕ್ಕೆ ಗುರಿಯಾಗಿ ಯಾತನೆಪಡಲಾರೆವೆಂದು ನಿವೇದಿಸಿಕೊಳ್ಳುವರು. ಶ್ರೀಕೃಷ್ಣನು ಮೇಲಿಂದ ಮೇಲೆ ಅವರಿಗೆ ಸಮಾಧಾನ ಹೇಳುವನು. ಯಾವುದಕ್ಕೂ ಅವರು ಸಮ್ಮತಿಸದಿರಲು, ಕಡೆಗೆ ತನ್ನ ಮಕ್ಕಳಾದ ಬ್ರಹ್ಮ ಮತ್ತು ಮನ್ಮಥರ ಮೇಲೆ ಆಣೆಯಿಟ್ಟು ಹೇಳುವನು. ಆಗ ಜಾಣೆಯರಾದ ಆ ಗೋಪಿಯರು 'ಮಾರನೆಂಬುವನು ಈಶ್ವರನಿಂದ ಎಂದೋ ಹತನಾದ. ಬ್ರಹ್ಮನಾದರೋ ನಾಭಿಕಮಲದಲ್ಲಿ ಹುಟ್ಟಿಬಂದವನು ಇವರ ಮೇಲೆ ಆಣೆಯಿಟ್ಟರೂ ಒಂದೆ , ಬಿಟ್ಟರೂ ಒಂದೆ' ಎಂದು ಅತೃಪ್ತಿಯಿಂದ ನೊಂದುಕೊಳ್ಳುವರು. ಮಾತನ್ನು ಮುಂದೆ ಬೆಳೆಸಲು ಬಯಸದೆ "ಶ್ರೀಕೃಷ್ಣ ! ಹಲವು ಮಾತುಗಳೇಕೆ ? ನಿನ್ನ ಪಾದಪದ್ಮವನ್ನೇ ನೆಚ್ಚಿಕೊಂಡಿರುವ ನಮ್ಮನ್ನು ಸಲಹು, ಇಲ್ಲವೆ ಬಿಡು" ಎಂದು ಅಸಹಾಯಕರಾಗಿ ಬೇಡಿಕೊಳ್ಳುವರು.

ಈ ಕೀರ್ತನೆಯಲ್ಲಿನ ಸಂಭಾಷಣಾ ಸಂವಿಧಾನ ತುಂಬ ಸ್ವಾರಸ್ಯವಾಗಿದೆ. ಗೋಪಿಯರ ಅಂತರಂಗದ ಮಾರ್ದವವೂ, ಶ್ರೀಕೃಷ್ಣನ ಸೌಮ್ಯಸ್ವಭಾವವೂ ಸ್ಪಷ್ಟವಾಗಿ ವಿಶದವಾಗುತ್ತವೆ

ಕಠಿನ ಶಬ್ದಗಳ ಅರ್ಥ ಪಥ—ದಾರಿ ಆಣೆ < ಆಜ್ಞೆ. ಐದು—ಹೋಗು ಹರಿಣಾಂಕ—ಚಂದ್ರ, ಜಿಂಕೆಯ ಗುರುತುಳ್ಳವನು ಎರಗು—ನಮಸ್ಕರಿಸು. ಕಂತು—ಮನ್ಮಥ ಮದನ—ಮನ್ಮಥ. ಈಡುಮಾಡು—ಗುರಿಮಾಡು ಪಾಟಲ—ಪಾದರಿ ಕಾಳಾಹಿವೇಣಿಯರು—ಕಾಳಸರ್ಪದಂತೆ ಕಪ್ಪಾದ ಕೂದಲುಳ್ಳವರು ನೀರಜಾಂಬಕ—ತಾವರೆಯ ಹೂವಿನಂತೆ ಕಣ್ಣುಳ್ಳವನು. ಗಾರುಪಳ್ಳಿ—ತೀರ ಸಾಮಾನ್ಯವಾದ ಹಳ್ಳಿ ಇಕ್ಷುಬಿಲ್ಲು—ಕಬ್ಬಿನಬಿಲ್ಲು (ಅರಿಸಮಾಸವನ್ನು ಗಮನಿಸಿ). ಚಾರು—ಮನೋಹರ ವಾರಿಜಾಂಬಕ—ತಾವರೆಯಂತೆ ಕಣ್ಣುಳ್ಳವನು. ವಾರಿಜಾರಿವದನ—ಕಮಲಕ್ಕೆ ಶತ್ರುವಾದ ಚಂದ್ರನಂತೆ ಮುಖವುಳ್ಳವನು. ವಾರಾಶಿಜಾವಲ್ಲಭ—ಸಮುದ್ರದಲ್ಲಿ ಜನಿಸಿದ ಲಕ್ಷ್ಮಿಯ ಗಂಡನಾದ ವಿಷ್ಣು ವಾರಿವಾಹ ನಿಭಾಂಗ—ನೀರನ್ನು ಧರಿಸಿರುವ ಮೋಡದಂತೆ ಶರೀರವುಳ್ಳವನು. ವಾಸವನುತ—ಇಂದ್ರನ ಕೊಂಡಾಟಕ್ಕೆ ಪಾತ್ರನಾದವನು ನಿಚಯ–ಸಮೂಹ. ಪಾರುಗಾಣಿಸು—ತೀರವನ್ನು ಮುಟ್ಟಿಸು. ಅಹೋರಾತ್ರಿ—ಹಗಲು, ಇರುಳು ನೀಲಕುಂತಳೆ—ಕಪ್ಪಾದ ಕೂದಲುಳ್ಳವಳು. ಏಚು—ಏಟು. ಜಾಲತ್ವ—ಮೋಸ, ಮಾಯೆ ('ಇಂದ್ರಜಾಲ') ಬಟ್ಟಗಂಗಳೆ—ಗುಂಡಾಗಿರುವ ಕಣ್ಣುಳ್ಳ ಹೆಂಗಸರು. ವ್ರಜ—ಗೋಕುಲ ಅಟ್ಟುಳಿ—ತೊಂದರೆ ಭ್ರಾತೃ—ಸಹೋದರ ವತ್ಸಪಾಲನೆ—ಹಸುವಿನ ಕರುಗಳ ರಕ್ಷಣೆ. ಪಾರಿಸು—ವಾದಿಸು. ಸೊಲ್ಲು—ಮಾತು. ಸರಸಿಜಭವ—ಬ್ರಹ್ಮ ಮಾರ—ಮನ್ಮಥ. ಆಣೆ—ಪ್ರಮಾಣಮಾಡಿ ಹೇಳುವುದು. ನಾಭಿ—ಹೊಕ್ಕಳು "ಮಾರಿ ಹೊರಗಿನ ಹೊರಗೆ ಹೋಯಿತೆಂಬೊ ತೀರಾಯಿತೆ"—ಇದು 'ಊರ ಹೊರಗಿನ ಮಾರಿ ಊರ ಹೊರಗೆ' ಎಂಬ ಗಾದೆಯ ಅನುಕರಣ. ಊರ ಹೊರಗಿನ ಮಾರಿಯನ್ನು ಊರಾಚೆ ಇಟ್ಟರೆ ಕ್ಷೇಮ. ಆಕೆಯನ್ನು ಒಳಗೆ ಬರಮಾಡಿಕೊಂಡರೆ ಇಲ್ಲದ ಸಂಕಟ. ಪ್ರಕೃತದಲ್ಲಿ ಬ್ರಹ್ಮ ಮತ್ತು ಮನ್ಮಥರ ಕಥೆಯಾದರೋ ಒಬ್ಬೊಬ್ಬರದು ಒಂದೊಂದು ರೀತಿ. ಬ್ರಹ್ಮನು ಸಾಧಾರಣ ರೀತಿಯಲ್ಲಿ ಹುಟ್ಟಿ ಬಂದವನಲ್ಲ ಅವನಿಗೆ ಯಾವ ಹಾನಿಯೂ ತಟ್ಟುವುದಿಲ್ಲ. ಮನ್ಮಥನಂತೂ ಎಂದೋ ಈಶ್ವರನಿಂದ ಸುಟ್ಟು ಅನಂಗನಾಗಿದ್ದಾನೆ. ಅವನು ಎಲ್ಲಕ್ಕೂ ಹೊರತಾಗಿದ್ದಾನೆ ಎಂದಮೇಲೆ ಇಂಥವರ ಮೇಲೆ ಆಣೆಯಿಟ್ಟು ಏನು ಪ್ರಯೋಜನ ? ಶ್ರೀಕೃಷ್ಣನ ಆಣೆ ನಿಮಿತ್ತಮಾತ್ರವೇ ವಿನಾ ಅದರಿಂದ ಯಾವ ಉಪಯೋಗವೂ ಇಲ್ಲ ಎಂಬುದು ಇಲ್ಲಿನ

ಮಥಿತಾರ್ಥ. ಗೋಪಿಯರ ಈ ವ್ಯಂಗ್ಯ ಮತ್ತು ಜಾಣತನಗಳು ಮೆಚ್ಚತಕ್ಕವು ಪದನಳಿನ—ಪಾದ ಪದ್ಮ ಒಲುಮೆ—ಪ್ರೇಮ. ಮಾಣು—ಬಿಡು.

## ೪೪

ಈ ಕೀರ್ತನೆಯಲ್ಲಿ ದಾಸರು ದ್ವೈತಮತಕ್ಕೆ ಪ್ರತಿಯಾದ ಅದ್ವೈತ ಮತದ ಕೆಲವು ತತ್ತ್ವಗಳನ್ನು ತೀರ ಲೌಕಿಕವಾದ ನಿದರ್ಶನಗಳನ್ನಿತ್ತು ಖಂಡಿಸಿದಾರೆ. ಮಾಯಾವಾದ ಮತ್ತು ಅಭೇದ ತತ್ತ್ವಗಳನ್ನು ಇಲ್ಲಿ ಅಲ್ಲಗಳೆಯಲಾಗಿದೆ. ಜಗತ್ತನ್ನು ನಿರ್ಮಿಸಿದ ಒಬ್ಬ ದೇವನಿದ್ದ ಮೇಲೆ ಉಳಿದವರೆಲ್ಲ ಅವನಿಂದ ಭಿನ್ನರೆಂಬುದು ಸರಿಯಷ್ಟೆ. ಎಂದಮೇಲೆ ಭೇದವಿಲ್ಲವೆಂದು ಹೇಳುವುದರಲ್ಲಿ ಅರ್ಥವಿಲ್ಲ. ಅಭೇದ ತತ್ತ್ವವನ್ನು ಎಷ್ಟೇ ಪುರಸ್ಕರಿಸಿದರೂ ಲೌಕಿಕವಾಗಿ ನಮ್ಮ ನಡೆವಳಿಕೆಗಳಲ್ಲಿ ತಾರತಮ್ಯ ದೃಷ್ಟಿ ಇದ್ದೇ ಇದೆ ಜಾತಿಭೇದವಿದಕ್ಕೊಂದು ನಿದರ್ಶನ. ಹೀಗೆಯೇ ಒಂದು ಸಂಸಾರದಲ್ಲಿ ಒಬ್ಬೊಬ್ಬರ ಬಾಂಧವ್ಯ ಒಂದೊಂದು ತೆರನಾದದ್ದು. ವಯೋಭೇದ ಮತ್ತು ಪಾವೆಗಳಿಗೆ ತಕ್ಕಂತೆ ಅಂತರವಿರುತ್ತದೆ ಆದ್ದರಿಂದ ಕೇವಲ ತಾತ್ತ್ವಿಕ ದೃಷ್ಟಿಯಿಂದ ಆ ಭೇದವನ್ನು ಒಪ್ಪಿಕೊಂಡು, ವ್ಯಾವಹಾರಿಕವಾಗಿ ತಾರತಮ್ಯಗಳನ್ನು ಆಚರಿಸುವುದಕ್ಕಿಂತಲೂ ಭೇದಮತವನ್ನು ಬೋಧಿಸುವ ದ್ವೈತಮತವನ್ನು ಗೌರವಿಸಬೇಕೆಂದು ಇಲ್ಲಿನ ವಾದಸರಣಿ ತೀರ ಲೌಕಿಕವಾದ ಉಪಮಾನಗಳನ್ನು ಬಳಸಿರುವುದರಿಂದ ಇಲ್ಲಿನ ತರ್ಕಕ್ರಮ ಸ್ವಲ್ಪ ಕಟುವಾಯಿತು ಎನ್ನಿಸುತ್ತದೆ.

ಕಠಿನ ಶಬ್ದಗಳ ಅರ್ಥ: ಪಂಕ—ಕೆಸರು ಬಿಂಕ—ಹಮ್ಮು

## ೪೫

ದೇವರ ಸಹಸ್ರನಾಮವನ್ನು ಸ್ತುತಿಸದೆ ಬದುಕನ್ನು ವೃಥಾ ಕಳೆದುದಕ್ಕಾಗಿ ದಾಸರು ತಮ್ಮನ್ನು ತಾವೇ ಹಳಿದುಕೊಳ್ಳುವ ಚಿತ್ರವಿಲ್ಲಿದೆ ಕಡೆಗೆ ಪರಮಾತ್ಮನನ್ನು ಮರೆಹೊಕ್ಕು ತಮಗೆ ಮತ್ತೆ ಜನ್ಮವಿಲ್ಲದಂತೆ ಅನುಗ್ರಹಿಸಬೇಕೆಂದು ಬೇಡಿಕೊಳ್ಳುವರು.

ಕಠಿನ ಶಬ್ದಗಳ ಅರ್ಥ: ಭಾಸುರಾಂಗ—ಪ್ರಕಾಶಮಾನವಾದ ಶರೀರ ಶ್ರೀ ವಾಸುಕಿಶಯನ—ಆದಿಶೇಷನ ಮೇಲೆ ಮಲಗಿರುವ ಶ್ರೀವಿಷ್ಣು ಲೇಸಾಗಿ—ಚೆನ್ನಾಗಿ. ಮುರಮುಷ್ಟಿಕವೈರಿ—ಮುರಾಸುರ, ಮುಷ್ಟಿಕರನ್ನು ಸಂಹರಿಸಿದ ಶ್ರೀಕೃಷ್ಣ ಭಾಗವತದಲ್ಲಿ ಉಕ್ತವಾಗಿರುವಂತೆ ಕಂಸನ ಜಟ್ಟಿಗಳಾದ ಚಾಣೂರನನ್ನು ಶ್ರೀಕೃಷ್ಣನೂ ಮುಷ್ಟಿಕನನ್ನು ಬಲರಾಮನೂ ಸಂಹರಿಸುವರು. (ಭಾಗವತ x, ೪ ೪೪). ರೂಢಿಯಲ್ಲಿ ಇಬ್ಬರನ್ನೂ ಒಟ್ಟಿಗೆ ಸೇರಿಸಿ ಹೇಳುವುದರಿಂದ ಇಲ್ಲಿ ಕೃಷ್ಣನಿಗೇ ಅನ್ವಯಿಸಿದೆ. ಮುರ—ನರಕಾಸುರನ ಪರಿವಾರದಲ್ಲಿದ್ದ ಒಬ್ಬ ರಾಕ್ಷಸ ಶ್ರೀಕೃಷ್ಣನು ನರಕಾಸುರನನ್ನು ಸಂಹಾರ ಮಾಡುವುದಕ್ಕೆ ಮೊದಲು ಮುರನು ದೇವರನ್ನು ಪ್ರತಿಭಟಿಸಲು ಆತನಿಂದ ಹತನಾದನು. ಕಾಯಜಜನಕ—ಮನ್ಮಥನ ತಂದೆಯಾದ ಶ್ರೀವಿಷ್ಣು.

## ೪೬

ಬಾಲಕನಾದ ಕೃಷ್ಣನ ತುಂಟತನಗಳನ್ನೆಲ್ಲ ಕೇಳಿದ ಗೋಪಿಯು ಅವನನ್ನು ಪ್ರಶ್ನೆಮಾಡುವ ಸರಣಿಯಲ್ಲಿ ಬರೆದಿರುವ ಈ ಕೀರ್ತನೆ ಪರೋಕ್ಷವಾಗಿ ಭಗವಂತನ ಮಹಿಮೆಗಳನ್ನೆ ಪ್ರಕಟಿಸುತ್ತದೆ. ಆತನು ತನ್ನ ಗೆಳೆಯರೊಂದಿಗೆ ಗೊಲ್ಲತಿಯರ ಮನೆಗಳನ್ನು ಹೊಕ್ಕು ಕದ್ದು ಹಾಲು ಕುಡಿದಿದ್ದು, ಪೂತನಿಯನ್ನು ಸಂಹಾರಮಾಡಿದ್ದು, ಕಂಸನನ್ನೂ, ಮುಷ್ಟಿಕನನ್ನೂ ಅನಾಯಾಸವಾಗಿ ಕೊಂದದ್ದು, ವೃಕ್ಷದ ರೂಪದಲ್ಲಿದ್ದ ಕುಬೇರನ ಮಕ್ಕಳನ್ನು ಉದ್ಧರಿಸಿದ್ದು—ಇವೇ ಮೊದಲಾದ ಪ್ರಸಂಗಗಳೆಲ್ಲ ಇಲ್ಲಿ ನಿರೂಪಿತವಾಗಿವೆ. ಕೃಷ್ಣನು ಅಂಗಿ ಟೊಪ್ಪಿಗೆ ಉಂಗುರ ಉಡಿದಾರಗಳಿಂದ ಅಲಂಕೃತವಾಗಿ ಬರಬೇಕೆಂಬ ಆಹ್ವಾನದಿಂದ ಈ ಕೀರ್ತನೆ ಬಹು ಮನೋಜ್ಞವಾಗಿ ಮುಕ್ತಾಯವಾಗುತ್ತದೆ.

ಕಠಿನ ಶಬ್ದಗಳ ಅರ್ಥ  ಪಾಕಶಾಸನ—ಇಂದ್ರ. ಪೋಕತನ—ತುಂಟತನ ಯಮಳಾರ್ಜುನರನ್ನು ಮಡುಹಿ: ಕುಬೇರನ ಮಕ್ಕಳಾದ ನಳಕೂಬರ ಮತ್ತು ಮಣಿಗ್ರೀವರು ತಮ್ಮ ಅಹಂಕಾರ ವರ್ತನೆಯಿಂದ ನಾರದರ ಶಾಪಕ್ಕೆ ಗುರಿಯಾಗಿ ಗೋಕುಲದಲ್ಲಿ ಅವಳಿ ಮತ್ತಿಮರಗಳಾಗಿ ರೂಪ ತಾಳಿದ್ದರು ಶ್ರೀಕೃಷ್ಣನು ತನ್ನ ಸೊಂಟಕ್ಕೆ ಕಟ್ಟಿದ್ದ ಒರಳಿನ ಸಮೇತ ಆ ಅವಳಿ ಮರಗಳ ಮಧ್ಯೆ ನುಸುಳಿದಾಗ ಅವು ಕಡಿದು ಬಿದ್ದವು ಆ ತರುವಾಯ ಕುಬೇರನ ಮಕ್ಕಳು ಎಂದಿನಂತೆಯೇ ತಮ್ಮ ಪೂರ್ವಜನ್ಮವನ್ನು ಪಡೆದು ದೇವಲೋಕಕ್ಕೆ ತೆರಳಿದರು ಇಲ್ಲಿ ಅರ್ಜುನ ವೃಕ್ಷಗಳ ಸಂಹಾರವನ್ನು ಸೂಚಿಸಿದೆ (ಭಾಗವತ X, ಅ ೧೦)

೪೭

ಈ ದೀರ್ಘವಾದ ಕೀರ್ತನೆಯಲ್ಲಿ ದಾಸರು ಭಕ್ತನನ್ನು ಕಡೆಗಣಿಸಿದ ಭಗವಂತನ ಬಗ್ಗೆ ಅಸಮಾಧಾನಗೊಂಡು ತಮ್ಮ ಸಂಕಟವನ್ನು ಹೇಳಿಕೊಂಡಿದ್ದಾರೆ ಐದನೆಯ ನುಡಿಯಲ್ಲಿ 'ಪೃಥಿವಿಯೊಳಗುದಿಸಿ ಮುಪ್ಪತ್ತಾರು ವರುಷ ಈ ರೀತಿ ಕಾಲ ಕಳೆದೆನೋ ಕೃಷ್ಣ' ಎಂದು ಹೇಳಿರುವುದರಿಂದ ಶ್ರೀಪಾದರಾಜರ ಜೀವನದ ಒಂದೆರಡು ಅಂಶಗಳೂ ಇಲ್ಲಿ ಪರೋಕ್ಷವಾಗಿ ಬೆರೆತಿರಬಹುದು. ಒಟ್ಟಿನಲ್ಲಿ, ಇದೊಂದು ಭಕ್ತನೊಬ್ಬನ ತುಮುಲ ಭಾವವನ್ನು ಪರಿಣಾಮಕಾರಿಯಾಗಿ ನಿರೂಪಿಸುವ ರಚನೆಯೆಂಬುದರಲ್ಲಿ ಸಂದೇಹವಿಲ್ಲ ಕೆಲವು ಪ್ರಮುಖಾಂಶಗಳನ್ನು ಇಲ್ಲಿ ಸಂಗ್ರಹಿಸಬಹುದು. "ಏಕೋ ವಿಷ್ಣುಃ" ಎಂದು ನಂಬಿರುವ ಭಕ್ತನಿಗೂ ದೈವಾನುಗ್ರಹ ಲಭಿಸದಿದ್ದರೆ ತಾನು ಹುಟ್ಟಿ ಫಲವೇನು ಎಂದು ದಾಸರ ಪ್ರಶ್ನೆ ಉಣಲು ಅನ್ನವಾಗಲಿ, ಉಡಲು ಅರಿವೆಯಾಗಲಿ ಕಾಣದೆ, ನಂಟರಿಷ್ಟರನ್ನೆಲ್ಲ ಬಿಟ್ಟು ಕಾಡುಪಾಲಾದೆನಲ್ಲಾ ಎಂದು ಭಕ್ತನು ವ್ಯಥೆಪಡುವನು. ದೇವರೇ ತನ್ನನ್ನು ಸಂರಕ್ಷಿಸಬೇಕೆಂದು ಮೊರೆಯಿಡುವನು. ಋಣದ ಬಾಧೆ ಬೇರೆ ಆತನನ್ನು ಪೀಡಿಸುತ್ತಿದೆ. ಆಳು ದೇಹವನ್ನು ಗೇಣು ಮಾಡಿಕೊಂಡು ಅಂಗಲಾಚುವ ಯಾತನೆ ಹೇಳತೀರದು ಕಂಡಕಂಡವರ ಮನೆಯ ಬಾಗಿಲಿಗೆ ತುತ್ತು ಕೂಳಿಗಾಗಿ ಅಲೆದಾಡುವ ಪಾಡೂ ಸಹಿಸಲಸದಳವೆನ್ನಿಸುತ್ತದೆ ಸಿರಿಯರಸನಾದ ಕೃಷ್ಣನು ಕೈಬಿಟ್ಟರೆ ಅವನಿಗೆ ಎಂದೆಂದಿಗೂ ಅಪಖ್ಯಾತಿ ತಪ್ಪದೆಂದು ಭಕ್ತನು ಎಚ್ಚರಿಸುವನು. ಬಂಕಾಪುರದ ನರಸಿಂಹದೇವನ ಸಾನ್ನಿಧ್ಯದಲ್ಲಿ ಈ ಮನವಿಯನ್ನು ಮಾಡಿಕೊಂಡಂತಿದೆ. ಲೋಕದ ಹೊಣೆಯ ಭಾರವನ್ನು ಹೊತ್ತಿರುವ ಸ್ವಾಮಿಗೆ ತಾನು ಭಾರವಾದೆನೆ ಎಂದು ಪ್ರಶ್ನಿಸುವನು. ತನ್ನ ಅಪರಾಧಗಳನ್ನೆಲ್ಲ ಪಟ್ಟಿಮಾಡಿ ವರದಿ ಒಪ್ಪಿಸಿ, ತನ್ನನ್ನು ಕಾಪಾಡಬೇಕೆಂದು ಮತ್ತೆ ಮತ್ತೆ ಕೋರುವನು. ದೇವರ ಒಲವನ್ನು ಸಂಪಾದಿಸಲು ಪ್ರಾಣವನ್ನಾದರೂ ಪಣವಿಟ್ಟು ಆತ್ಮಹತ್ಯೆ ಮಾಡಿಕೊಳ್ಳಲೆ ಎಂದು ಆಲೋಚಿಸುವನು ದೇವರು ಒಲಿಯುವುದೇ ತಡ, ತನ್ನ ಕಷ್ಟಗಳೆಲ್ಲ ನಿಮಿಷಮಾತ್ರದಲ್ಲಿ ನಿವಾರಣೆಯಾಗುವುದು ಎಂದು ಭಕ್ತನಿಗೆ ಅಚಲವಾದ ನಂಬಿಕೆ. ಆದ್ದರಿಂದ ಭಗವಂತನಲ್ಲಿ ಅನನ್ಯ ಶರಣಾಗುವನು

ಕಠಿನ ಶಬ್ದಗಳ ಅರ್ಥ  ಕಾಕು ಮಾಡುವುದು—ವ್ಯತಿರಿಕ್ತವರ್ತನೆ  ಕುಡುತೆ—ಬೊಗಸೆ. ವಾಲೈಸು—ಓಲೈಸು, ಸೇವಿಸು. ವಾರುತೆ < ವಾರ್ತೆ—ಸುದ್ದಿ. ಈರೇಳು—ಹದಿನಾಲ್ಕು ಹದಿನಾರೆರಡು—ಮೂವತ್ತೆರಡು. ಸುರನದಿಯ ಮಿಾಯಲಿಲ್ಲ—ಗಂಗೆಯಲ್ಲಿ ಸ್ನಾನಮಾಡಲಿಲ್ಲ ವಿಷಯಕೆರಗಿ—ಇಂದ್ರಿಯ ಚಾಪಲ್ಯದತ್ತ ತೆರಳಿ. ಸರ್ವಜ್ಞರಾಯರು—ಶ್ರೀಮಧ್ವಾಚಾರ್ಯರು. ಸ್ಥಿರಭಾರ—ಭೂಮಿಗೆ ಭಾರ "ಊರ ಮಾರಿ ಹೆಗ್ಗರೆಗೋಣನಂತೆ"—ಇದು ಒಂದು ಗಾದೆಯಂತಿದೆ. ಊರ ಮಾರಿಗಾಗಿ ಬಿಟ್ಟ ಕೋಣ ವುಂಡುಬಿದ್ದು ಅಲೆಯುವಂತೆ ಎಂದು ಅರ್ಥವಿರಬಹುದು. ಗರಳ—ವಿಷ. ಎರಡೊಂದು ಶೂಲ—ತ್ರಿಶೂಲ ಕರಗಸ—ಗರಗಸ "ಕಷ್ಟಬಟ್ಟ ಮಗನೆಂದು ದೃಷ್ಟಿ ನೀರೊರಸೆನ್ನ ಪೊಟ್ಟೆಯೊಳ್ಪಿಡಿವರ್‍ಯಾರೋ ಕೃಷ್ಣ" ಎಂಬ ವಾಕ್ಸರಣಿ ಚಿತ್ರವತ್ತಾಗಿದೆ.

ಅಳುತ್ತಿರುವ ಕಂದನ ಕಣ್ಣೊರೆಸಿ ತನ್ನ ಮಡಿಲಲ್ಲಿಟ್ಟು ತಾಯಿಯಾದವಳು ಹೇಗೆ ಸಂತೈಸುವಳೋ ಹಾಗೆಯೇ ನೊಂದ ಭಕ್ತನನ್ನು ಪರಮಾತ್ಮನೊಬ್ಬನೇ ಸಮಾಧಾನಪಡಿಸಬೇಕೆಂಬ ಕೋರಿಕೆ ಸಹಜವಾಗಿದೆ.

೪೮

ರಂಗನಾಥನನ್ನು ನೋಡುವ ಸಲುವಾಗಿ ಎಲ್ಲರನ್ನೂ ಬನ್ನಿರೆಂದು ಕರೆಯುವ ಈ ಕೀರ್ತನೆಯಲ್ಲಿ ದೇವರ ಮಹಿಮೆಯನ್ನು ವ್ಯಕ್ತಪಡಿಸುವ ಹಲವಾರು ವಿಶೇಷಣಗಳನ್ನು ಬಹು ಅರ್ಥವತ್ತಾಗಿ ಬಳಸಿದೆ. (ತಿರುಪತಿಯಲ್ಲಿನ 'ವಿಮಾನ ಶ್ರೀನಿವಾಸ'ನಂತೆ ಇದು ಶ್ರೀರಂಗದಲ್ಲಿನ 'ವಿಮಾನ ಪರವಾಸುದೇವ'ನನ್ನು ಕುರಿತಿರುವಂತಿದೆ.)

ಕಠಿನ ಶಬ್ದಗಳ ಅರ್ಥ ಕಮನೀಯಗಾತ್ರನ—ಮನೋಹರವಾದ ಶರೀರವುಳ್ಳವನ ವಾರಿಧಿನಿಲಯನ—ಕ್ಷೀರಸಮುದ್ರವನ್ನೇ ಮನೆಯಾಗಿ ಉಳ್ಳವನ. ಮಂಜುಳಭಾಷನ—ಮಧುರವಾದ ನುಡಿಯುಳ್ಳವನ ಒಂದೊಂದು ನುಡಿಯಲ್ಲಿಯೂ ಬಳಸಿರುವ ವಿಶೇಷಣಗಳು ಅನುಪ್ರಾಸದಿಂದ ಕೂಡಿ ಪದಬಂಧ ತುಂಬ ಹಿತಕರವಾಗಿದೆ.

೪೯

ಹರಿದಾಸರು ತಮಗೆ ಬಹುಪ್ರಿಯನಾದ ಶ್ರೀಕೃಷ್ಣನನ್ನು ರಂಗನೆಂಬ ಅಭಿದಾನದಿಂದ ಸ್ವಾಗತಿಸುವ ಮತ್ತೊಂದು ಕೀರ್ತನೆಯಿದು ಇದರಲ್ಲಿ ಮೊದಲನೆಯ ನುಡಿಯಲ್ಲಿ ರಾಮಾವತಾರದ ಘಟನೆಗಳ ವಿಷಯವೂ, ಉಳಿದೆರಡು ನುಡಿಗಳಲ್ಲಿ ಕೃಷ್ಣಾವತಾರದ ಪ್ರಸಂಗಗಳ ಉಲ್ಲೇಖವೂ ಬರುತ್ತವೆ. ಈ ಕೀರ್ತನೆಯ ಸರಣಿ ತುಂಬ ಸರಳವೂ ಸ್ವಾರಸ್ಯವೂ ಆಗಿದೆ

ಕಠಿನ ಶಬ್ದಗಳ ಅರ್ಥ: ಕಲುಷವಿಭಂಗ—ಮಾಲಿನ್ಯವನ್ನು ಹೋಗಲಾಡಿಸುವವನು ಪಚ್ಚೆಬಾವುಲಿ—ಪಚ್ಚೆಯಿಂದ ಮಾಡಿದ ಕರ್ಣಾಭರಣ ಹೆಚ್ಚಿದ ವಾಲಿಯನು ಬಾಣದಿ ಚುಚ್ಚಿದ · ಇದು ರಾಮನು ವಾಲಿಯನ್ನು ಸಂಹರಿಸಿದ ಪ್ರಸಂಗವನ್ನು ಕುರಿತುದಾಗಿದೆ. ಸಪ್ತತಾಳಂಗಳನು ಬಿಚ್ಚಿದ: ವಾಲಿಯ ಸಂಹಾರಕ್ಕೆ ಮೊದಲು, ಶ್ರೀರಾಮನ ಸತ್ವಪರೀಕ್ಷೆಗಾಗಿ ಆತನು ಒಂದೇ ಒಂದು ಬಾಣದಿಂದ ಏಳು ತಾಳವೃಕ್ಷಗಳನ್ನು ಏಕಕಾಲದಲ್ಲಿ ಭೇದಿಸಿದ ಸಂಗತಿಯನ್ನು ಇದು ಸೂಚಿಸುತ್ತದೆ (ಮಹಾಭಾರತ ತಾತ್ಪರ್ಯ ನಿರ್ಣಯ, ಅ. VI, ಶ್ಲೋ ೮) ರಾಮಾಯಣದಲ್ಲಿ ಸಾಲವೃಕ್ಷಗಳು ಎಂದು ಹೇಳಿದೆ (ರಾಮಾಯಣ, ಕಿಷ್ಕಿಂಧಾಕಾಂಡ, ಸರ್ಗ ೧೨). ಲಂಕಾದಹನವನ್ನು ಮಾಡಿದ ಹನುಮಂತನನ್ನು ಮೆಚ್ಚಿದ ಸಂಗತಿಯೂ ನಿರೂಪಿತವಾಗಿದೆ. ರಾಮನು ಖರದೂಷಣರನ್ನು ಸಂಹರಿಸಿದ ಸಂದರ್ಭವನ್ನೂ ಹೇಳಲಾಗಿದೆ. ಶ್ರೀಕೃಷ್ಣನು ಅರ್ಜುನನ ರಥವನ್ನು ನಡೆಸುವ ಕಾರ್ಯವನ್ನು ಮಾತ್ರ ಕೈಕೊಂಡಿದ್ದರೂ, ತನಗೇನಾದರೂ ಶತ್ರುಗಳ ಬಾಣ ತಾಕಿದಲ್ಲಿ ತಾನೂ ರಣರಂಗಕ್ಕೆ ಇಳಿಯುವೆನೆಂಬ ಸಂದರ್ಭವನ್ನು ಇಲ್ಲಿ ಸೇರಿಸಿದೆ. ಮುಖ್ಯವಾಗಿ ಇಂತಹ ಒಂದು ಸಂದರ್ಭ ಭೀಷ್ಮಪರ್ವದಲ್ಲಿಯೇ ಬರುತ್ತದೆ ಶ್ರೀಕೃಷ್ಣನು ಚಕ್ರವನ್ನು ಹಿಡಿದುಕೊಂಡು ಭೀಷ್ಮನನ್ನೇ ಸಂಹರಿಸಲು ಹೋಗುತ್ತಾನೆ. ಭೀಷ್ಮನ ಕೃಷ್ಣಭಕ್ತಿಗೆ ಮನಸೋತು ಸುಮ್ಮನಾಗುತ್ತಾನೆ. ಮಾತಂಗ—ಆನೆ ಇತ್ತರ—ಎರಡು ಬದಿಗಳಲ್ಲಿ ಶ್ರೀಕೃಷ್ಣನು ಯುದ್ಧವೀರನೆಂತೋ ಹಾಗೆಯೇ ರಸಿಕನೂ ಹೌದು ಇದರ ಪ್ರಸ್ತಾಪ ಮೂರನೆಯ ನುಡಿಯಲ್ಲಿದೆ. ಮಾತಂಗನ ಭಂಗವ ಪರಿಹರಿಸಿ—ಗಜೇಂದ್ರನನ್ನು ಮೊಸಳೆಯ ಬಾಯಿಂದ ಬಿಡಿಸಿದ ಪ್ರಸಂಗ. ಉತ್ತುಂಗ—ಶ್ರೇಷ್ಠ. ಇಂಥ ಭಕ್ತಜನವತ್ಸಲನಾದ ಭಗವಂತನನ್ನು ಇಲ್ಲಿ ಆಹ್ವಾನಿಸಲಾಗಿದೆ.

೫೦

ಇದು ಒಂದು ಲಾಲಿಪದ. ಪರಮಾತ್ಮನನ್ನು ಶಿಶುವೆಂದು ಎಣಿಸಿ, ಅವನ ಮಹಿಮಾ ವಿಶೇಷಕ್ಕೆ ತಕ್ಕಂತೆ ಕನಕರತ್ನಗಳಿಂದ ನಿರ್ಮಿತವಾದ ಕಾಲುಳ್ಳ, ನಾಲ್ಕು ವೇದಗಳನ್ನೇ ಸರಪಣಿಯಾಗುಳ್ಳ, ಭೂಮಂಡಲವನ್ನೇ ಹಲಗೆಯನ್ನಾಗಿ ಪಡೆದ ತೊಟ್ಟಿಲಿನಲ್ಲಿಟ್ಟು ಅಪೂರ್ವ ರಮಣಿಯರು ಜೋಗುಳವನ್ನು ಹೇಳುತ್ತ ತೂಗುವ ರಮಣೀಯವಾದ ಚಿತ್ರ ಇಲ್ಲಿ ನಿರೂಪಿತವಾಗಿದೆ ಶ್ರೀವಿಷ್ಣು ವಿನ ದಶಾವತಾರಗಳನ್ನು ಒಂದೊಂದು ನುಡಿಯಲ್ಲಿಯೂ ಸ್ತುತಿಸಿ ತೂಗುವ ವರ್ಣನೆ ಮೊದಲಿನಲ್ಲಿಯೇ ಬರುತ್ತದೆ ಅನಂತರ ಪದ್ಮಿನಿ, ಹಸ್ತಿನಿ, ಚಿತ್ತಿನಿ ಮತ್ತು ಶಂಕಿನೀ ಲಕ್ಷಣವುಳ್ಳ ನಾರಿಯರು ಶ್ರೀಹರಿಯನ್ನು ತೂಗಿದರೆಂಬ ವಿಷಯವಿದೆ ಆ ತರುವಾಯ ಕಲ್ಯಾಣಿ, ಆನಂದಭೈರವಿ ಮತ್ತು ದೇವಗಾಂಧಾರ ರಾಗಗಳಲ್ಲಿ ಜೋಗುಳವನ್ನು ಹಾಡಿದರೆಂಬ ನಿರೂಪಣೆಯಿದೆ. ಕಡೆಯಲ್ಲಿ ಶ್ರೀಹರಿಯ ಅಗ್ಗಳಿಕೆಯ ಉದ್ಘೋಷವಿದೆ

ಕಠಿನ ಶಬ್ದಗಳ ಅರ್ಥ ನಿರವಧಿಕ—ಮೇರೆಯಿಲ್ಲದ. ಕರಿಕುಂಭ—ಆನೆಯ ನೆತ್ತಿಯ ಭಾಗ. ಸೋಮ—ಚಂದ್ರ ಸಾಮಜವರದ—ಗಜೇಂದ್ರನಿಗೆ ವರವನ್ನು ದಯಪಾಲಿಸಿದವನು ಭೃಗು ರಾಮಾವತಾರ—ಪರಶುರಾಮಾವತಾರ ಮಲಯಜ—ಶ್ರೀಗಂಧ ವನಜಭವಜನಕ—ಬ್ರಹ್ಮನ ತಂದೆ ಇದು ಮಾಧ್ವಮತದ ತತ್ತ್ವಕ್ಕೆ ಅನುಗುಣವಾಗಿ ಹೇಳಿರುವ ಮಾತು. ಮಕರಿಕಾಪತ್ರ—ಕೆನ್ನೆಯ ಮೇಲೆ ಸ್ತ್ರೀಯರು ಬರೆದುಕೊಂಡಿರುವ ಚಿತ್ರ. ಲಿಕುಚ—ಕಂಚಿಕಾಯಿ. ಪಲ್ಲವಾಧರೆ—ಚಿಗುರಿನಂತೆ ಕೆಂದುಟಿಯುಳ್ಳವಳು ತುಲ್ಯವರ್ಜಿತ—ಅಸದೃಶ ನೀಲಘನ—ನೀಲಮೇಘ (ಕಪ್ಪಾದ ಮೋಡ) ಕರುಣಾಲವಾಲ—ಕರುಣೆಯನ್ನೇ ನೆಲೆಯಾಗುಳ್ಳ (ಆಲವಾಲ—ಪಾತಿ, ಮಡಿ, ನೀರು ನಿಲ್ಲುವ ನೆಲೆ) ಇಂದುಧರ—ಈಶ್ವರ ಇಂದುಕುಲ—ಚಂದ್ರವಂಶ ಭವಭಂಗ—ಜನ್ಮನಾಶ

೫೧

ಇದು ಈಗ ರಾಯರ ಮಹಾಸಂಸ್ಥಾನವೆಂದು ಪ್ರಖ್ಯಾತವಾಗಿರುವ ಮಂತ್ರಾಲಯದ ಪೀಠ ಪರಂಪರೆಯಲ್ಲಿ ಎರಡನೆಯವರಾದ ಶ್ರೀಜಿತಾಮಿತ್ರ ತೀರ್ಥರನ್ನು ಕುರಿತ ಸ್ತುತಿ. ಶ್ರೀ ಜಿತಾಮಿತ್ರ ತೀರ್ಥರ ಪೂರ್ವಾಶ್ರಮದ ಹೆಸರು ಅನಂತಪ್ಪನೆಂದು ಅವನು ತನ್ನ ಅಕ್ಕನ ಆರೈಕೆಯಲ್ಲಿ ಬೆಳೆದನು ಮನೆಯಲ್ಲಿ ಬಡತನವೇ ಮೇಲುಗೈಯಾಗಿತ್ತು ಸಾಂಪ್ರದಾಯಿಕವಾಗಿ ಎಂಟನೆಯ ವರ್ಷಕ್ಕೆ ಉಪನಯನವಾದರೂ ಅವನಿಗೆ ಜನಿವಾರದ ಹಿರಿಮೆ ತಿಳಿದಿರಲಿಲ್ಲ ಊಟ ಮಾಡುವ ಕಾಲದಲ್ಲಿ ಮಾತ್ರ ಧರಿಸುತ್ತಿದ್ದನು. ಆತನ ಅಜ್ಞಾನವನ್ನು ಹೇಳಲಳವಲ್ಲ. ಬೇಸಾಯ ಮಾಡಿಕೊಂಡು ಕಾಲಕಳೆಯುತ್ತಿದ್ದನು

ಒಮ್ಮೆ ಇಂದಿನ ಮಂತ್ರಾಲಯ ಸಂಸ್ಥಾನದ ಪರಂಪರೆಯ ಪ್ರಥಮ ಪೀಠಾಧಿಪತಿಗಳೂ ಶ್ರೀಪಾದರಾಜರ ವಿದ್ಯಾಗುರುಗಳೂ, ದ್ವೈತಸಿದ್ಧಾಂತ ಪಾರಂಗತರೂ ಆದ ಶ್ರೀ ವಿಬುಧೇಂದ್ರ ತೀರ್ಥರು ತಮ್ಮ ಸಂಚಾರ ಕಾಲದಲ್ಲಿ ಅನಂತಪ್ಪನನ್ನು ಕಂಡಕೂಡಲೆ, ಆತನು ರುದ್ರಾಂಶನೆಂದೂ, ತಮ್ಮ ಪೀಠಕ್ಕೆ ಉತ್ತರಾಧಿಕಾರಿಯಾಗಲು ಅರ್ಹನೆಂದೂ ವೇದ್ಯವಾಯಿತು ಆಗ ಅವನ ಮೇಲೆ ಅನುಗ್ರಹ ಬೀರಿ, ಅವನ ಅಜ್ಞಾನವನ್ನು ಪರಿಹರಿಸಿದರು ಅನಂತರ ಅನಂತಪ್ಪನಿಗೆ ಶ್ರೀ ಜಿತಾಮಿತ್ರತೀರ್ಥರೆಂಬ ಆಶ್ರಮನಾಮವನ್ನಿತ್ತು ತಮ್ಮ ಸಂಸ್ಥಾನದ ಉತ್ತರಾಧಿಕಾರಿಯನ್ನಾಗಿ ಸ್ವೀಕರಿಸಿದರು

ಶ್ರೀ ಜಿತಾಮಿತ್ರತೀರ್ಥರು ಸಂಸ್ಥಾನಾಧಿಪತ್ಯವನ್ನು ವಹಿಸಿಕೊಂಡ ಬಳಿಕ ಎಲ್ಲವನ್ನೂ ಚೆನ್ನಾಗಿ ನಿರ್ವಹಿಸಿದರು. ತಮ್ಮ ಬಹುಕಾಲವನ್ನು ಶಿಷ್ಯರಿಗೆ, ಕೃಷ್ಣಾ ಭೀಮಾ ನದಿಗಳ ನಡುಗಡ್ಡೆಯ ಮೇಲೆ ಕುಳಿತು ಬೋಧಿಸುವುದರಲ್ಲಿಯೇ ಸಾರ್ಥಕವಾಗಿ ಕಳೆದರು. ಅವರ ಮನಸ್ಸು ವಿರಕ್ತ ಮುಖವಾಗುವ ವೇಳೆಗೆ ಸಂಸ್ಥಾನದ ಪೀಠಾಧಿಪತ್ಯಕ್ಕೆ ಶ್ರೀ ರಘುನಂದನ ತೀರ್ಥರನ್ನು ಗೊತ್ತು

ಮಾಡಿದರು. ಒಮ್ಮೆ ಶ್ರೀ ಜಿತಾಮಿತ್ರ ತೀರ್ಥರು ತಮ್ಮ ಶಿಷ್ಯರೊಂದಿಗೆ ನದಿಗಳೆರಡರ ನಡುವೆ ಇದ್ದ ಗಡ್ಡೆಯ ಮೇಲೆ ಕುಳಿತು ಪಾಠಪ್ರವಚನ ಕಾರ್ಯಗಳಲ್ಲಿ ಮಗ್ನರಾಗಿರಲು, ನದಿಯಲ್ಲಿ ಬಹು ದೊಡ್ಡ ಪ್ರವಾಹ ಬಂದಿತು. ಶಿಷ್ಯರು ಎಷ್ಟು ಎಚ್ಚರಿಸಿದರೂ ಅವರು ಜಾಗ ಬಿಟ್ಟು ಕದಲಲಿಲ್ಲ. ಶಿಷ್ಯರು ನೀರಿನ ಪಾಲಾಗದೆ ಓಡಿ ಬಂದರು. ಏಳು ದಿನಗಳ ಕಾಲ ಏಕಪ್ರಕಾರವಾಗಿ ಪ್ರವಾಹ ಬಂದು ಮಾರ್ಗಶಿರ ಮಾಸ ಬಹುಳ ಅಮಾವಾಸ್ಯೆಯಂದು ಇಳಿಮುಖವಾಯಿತು. ಆಗ ಶ್ರೀ ಜಿತಾಮಿತ್ರರ ಪೂರ್ವಾಶ್ರಮದ ಅಕ್ಕನೂ ಇತರ ಶಿಷ್ಯರೂ ಶ್ರೀಪಾದಗಳವರನ್ನು ಹುಡುಕಿ, ಎಲ್ಲಿಯೂ ಕಾಣದೆ ಕಂಗೆಟ್ಟರು. ದುಃಖತಪ್ತರಾಗಿದ್ದ ತಮ್ಮ ಆಪ್ತರ ಆತಂಕವನ್ನು ಗ್ರಹಿಸಿದ ಶ್ರೀ ಜಿತಾಮಿತ್ರತೀರ್ಥರು ಅದೃಶ್ಯರಾಗಿಯೇ, ತಾವು ಆ ಎಡೆಯಲ್ಲಿಯೇ ಇರುವುದಾಗಿಯೂ, ಅಲ್ಲಿ ಉದ್ಭವಿಸುವ ಗೋಣದ ವೃಕ್ಷವೊಂದರಲ್ಲಿ ನೆಲಸಿರುವುದಾಗಿಯೂ, ತಮಗೆ ವೃಂದಾವನವನ್ನು ನಿರ್ಮಿಸದೆ, ಆ ವೃಕ್ಷಕ್ಕೇ ಎಲ್ಲ ಪೂಜಾಕಾರ್ಯಗಳೂ ನಡೆಯಬೇಕೆಂದು ಆಜ್ಞಾಪಿಸಿದರು. ಆ ಮಾತುಗಳನ್ನು ಆಲಿಸಿದ ಭಕ್ತವೃಂದದವರು ಶ್ರೀಗಳವರ ಆಜ್ಞಾನುಸಾರವಾಗಿಯೇ ನಡೆದರು. ಆಗ ಮಠದ ಪೀಠಾಧಿಪತ್ಯವನ್ನು ವಹಿಸಿದ್ದ ಶ್ರೀ ರಘುನಂದನ ತೀರ್ಥರು ಈ ಕಾರ್ಯವನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿದರು. ಕ್ರಿ.ಶ. ೧೪೯೭ರಿಂದ ಏಕಪ್ರಕಾರವಾಗಿ ಶ್ರೀ ಜಿತಾಮಿತ್ರ ತೀರ್ಥರ ಆರಾಧನೆಯು ಮಾರ್ಗಶೀರ್ಷಮಾಸ ಕೃಷ್ಣಪಕ್ಷ ಚತುರ್ದಶಿ, ಅಮಾವಾಸ್ಯೆ ಮತ್ತು ಪುಷ್ಯಮಾಸ ಶುಕ್ಲಪಕ್ಷ ಪಾಡ್ಯ ತಿಥಿಗಳಲ್ಲಿ ಮೂರು ದಿನಗಳ ಕಾಲ ವೈಭವದಿಂದ ನಡೆದುಕೊಂಡು ಬರುತ್ತಿದೆ. ಶ್ರೀ ಜಿತಾಮಿತ್ರತೀರ್ಥರು ರುದ್ರಾಂಶರಾದುದರಿಂದ ಆ ಸಂಗತಿಯೂ ಈ ಕೀರ್ತನೆಯಲ್ಲಿ ಉಕ್ತವಾಗಿದೆ.

ಶ್ರೀಪಾದರಾಜರು ತಮ್ಮ ಸಮಕಾಲೀನರಾಗಿದ್ದ ಶ್ರೀ ಜಿತಾಮಿತ್ರತೀರ್ಥರನ್ನು ಕುರಿತು ಬರೆದ ಈ ಕೀರ್ತನೆ, ಕೇವಲ ಸ್ತುತಿಮಾತ್ರವಾಗದೆ ಒಂದು ಸಮಕಾಲೀನ ಪ್ರಮಾಣವೆನ್ನಿಸಿ, ಇದಕ್ಕೆ ಚಾರಿತ್ರಿಕ ಮೌಲ್ಯವೂ ಇದೆ. ಶ್ರೀ ಜಿತಾಮಿತ್ರತೀರ್ಥರನ್ನು ಕುರಿತ ಸ್ತೋತ್ರವೊಂದರಲ್ಲಿ ಅವರ ಜೀವನ ಮಹತ್ವದ ಅರಿವಾಗುತ್ತದೆ.

ಸಪ್ತ ರಾತ್ರಂ ಕೃಷ್ಣವೇಣ್ಯಾಮುಷಿತ್ವಾ ಪುನರುತ್ಥಿತಂ
ಜಿತಾಮಿತ್ರ ಗುರುಂ ವಂದೇ ವಿಬುಧೇಂದ್ರ ಕರೋದ್ಭವಮ್

[ಈ ಕೀರ್ತನೆ ಶ್ರೀ ಜಿತಾಮಿತ್ರರನ್ನು ಕುರಿತುದೆಂಬುದಾಗಿ ಮೊದಲು ನಮ್ಮ ಗಮನ ಸೆಳೆದವರು ಶ್ರೀ ವ್ಯಾಸರಾಜ ಮಠಾಧಿಪತಿಗಳಾದ ಶ್ರೀ ವಿದ್ಯಾಪಯೋನಿಧಿ ತೀರ್ಥರು. ಇದರ ಪ್ರಚಲಿತ ಪಾಠವನ್ನು ಮುದ್ರಿಸಿ, ಈ ಕೀರ್ತನೆಯ ಲುಪ್ತ ಪಾಠವನ್ನು ಸರಿಪಡಿಸಲು ಸಹಾಯಕರಾದವರು 'ಪರಿಮಳ' ಪತ್ರಿಕೆಯ ಸಂಪಾದಕರಾದ ಶ್ರೀ ರಾಜಾ ಎಸ್ ಗುರುರಾಜಾಚಾರ್ಯರು ಇತರ ಅನೇಕ ವಿದ್ವಾಂಸರೂ ಈ ಕೆಲಸದಲ್ಲಿ ನಮಗೆ ನೆರವಾಗಿರುತ್ತಾರೆ. ಸಮಸ್ತರಿಗೂ ನಮ್ಮ ವಂದನೆಗಳು.]

೫೨

ಕೃಷ್ಣನ ವಿರಹದಿಂದ ಪರಿತಪಿಸುತ್ತಿರುವ ಗೋಪಿಯರ ಕಳವಳವನ್ನು ವ್ಯಕ್ತಪಡಿಸುವುದೇ ಈ ಕೀರ್ತನೆಯ ಗುರಿ. 'ಭ್ರಮರಗೀತೆ'ಯನ್ನು ರಚಿಸಿದ ದಾಸರು ಅದನ್ನೇ ಹೋಲುವ ಮತ್ತೊಂದು ಕೃತಿಯನ್ನು ಇಲ್ಲಿ ನೀಡಿದ್ದಾರೆ. ಗೋಪಿಯರು ಭ್ರಮರವನ್ನೇ ಸಂಬೋಧಿಸಿ, ಆತನು ಹೇಗೆ ತಮಗೆ ಮೋಸಮಾಡಿದನೆಂದು ವಿವರಿಸುವರು. ಮುಗ್ಧರಾದ ತಮ್ಮನ್ನು ಮರುಳು ಮಾಡಿ, ಈಗ ಅಗಲಿರುವುದರಿಂದ ವಿರಹಾಗ್ನಿಯನ್ನು ಸಹಿಸುವುದು ತುಂಬ ಕಷ್ಟವೆನ್ನುವರು. ಅವನ ಹಾವ, ಭಾವ, ವಿಕಾಸ, ವಿಭ್ರಮಗಳನ್ನೆಲ್ಲ ಸ್ಮರಿಸಿಕೊಳ್ಳುವರು. ಅವನ ಮೋಸವನ್ನು ಅರ್ಥಮಾಡಿಕೊಳ್ಳದೆ ತಾವು ಜಿಂಕೆಯ ಮರಿಯಂತೆ ಮರುಳಾದೆವೆಂದು ನೊಂದುಕೊಳ್ಳುವರು. ಒಂದೇ ಸಮನೆ

ಆಕ್ಷೇಪಣೆಯ ಮಾತುಗಳನ್ನು ಆಡಿ, ಕಡೆಗೆ ಶ್ರೀಹರಿಯ ಉಂಗುಟದ ಉಗುರಿನ ಮಹಿಮೆಯನ್ನು ಸಾಕ್ಷಾತ್ ಲಕ್ಷ್ಮಿಯೇ ಅರಿತಿಲ್ಲವೆಂದ ಮೇಲೆ ತಮ್ಮಂಥವರ ಪಾಡೇನೆಂದು ಸಮಾಧಾನಪಟ್ಟುಕೊಳ್ಳುವರು ಆತನ ದರ್ಶನಭಾಗ್ಯವಾದರೂ ತಮಗಿರಲೆಂದು ಆಶಿಸಿ, ಗೋಪಿಯರು ದುಂಬಿಯನ್ನು ಮಥುರೆಗೆ ಹೋಗಿ ಆವನನ್ನು ಕರೆತರುವಂತೆ ಕೇಳಿಕೊಳ್ಳುವರು

ಕಠಿನ ಶಬ್ದಗಳ ಅರ್ಥ. ವನಜನಯನ—ಪದ್ಮದಂತೆ ಕಣ್ಣುಳ್ಳ ಕೃಷ್ಣ ಮದನಪಿತ—ಮನ್ಮಥನ ತಂದೆಯಾದ ಕೃಷ್ಣ ದುರಿತಾನಳ < ದುರಿತಾನಲ—ಕೆಟ್ಟ ಬೆಂಕಿ. ಪಡಿ—ಪ್ರತಿ. ಮರುಳುಗಳು—ತಿಳಿವಳಿಕೆಯಿಲ್ಲದವರು ಸಿರಿಯುವನ ಉಂಗುಟದ ಉಗುರು ಗುಣಕಾಣಳು· ಇದು 'ನ ರಮಾಪಿ ಪದಾಂಗುಲಿಲಸನ್ನಖಧೂರಾಜಪದನಂತಸದ್ಗುಣಾನ್ । ಗಣಯೇದ್ಗಣಯಂತ್ಯತಾರತಂ ಪರಮಾನ್ ಕೋಽಸ್ಯ ಪರೋಗುಣಾನ್ ॥ (ಮಧ್ವವಿಜಯ, ೭)' ಎಂಬ ಸಂಸ್ಕೃತ ಪದ್ಯದ ಭಾವವನ್ನೇ ಪ್ರತಿಬಿಂಬಿಸುವಂತಿದೆ.

### ೫೩

ಇಬ್ಬರು ಗೋಪಿಯರು ಕೃಷ್ಣನ ಅಗಲಿಕೆಯಿಂದ ತಮಗೆ ಉಂಟಾದ ಯಾತನೆಯನ್ನು ಕುರಿತು ಪರಸ್ಪರ ಮಾತಾಡಿಕೊಳ್ಳುತ್ತಿದ್ದಾರೆ ಈ ಕೀರ್ತನೆಯ ಪಲ್ಲವಿ ತುಂಬ ಚೆನ್ನಾಗಿದೆ ಯದುಪತಿಯನ್ನು ಅಗಲಿಸಿದ ವಿಧಿಗೆ ನಮ್ಮ ಮೇಲೆ ಸ್ವಲ್ಪವೂ ಕರುಣೆಯಿಲ್ಲವೆಂದು ಅಪಾದಿಸುತ್ತಾರೆ ತಮ್ಮ ಕಣ್ಣು ತಪ್ಪಿಸಿ ಹೋದ ಕೃಷ್ಣನ ಸುಳಿಗುರುಳು ನಗುಮುಖಗಳನ್ನು ನೋಡದೆ ಹೋದುದಕ್ಕಾಗಿ ನೊಂದುಕೊಳ್ಳುವರು. ಹಕ್ಕಿಯಂತೆ ತಮಗೂ ಎರಡು ರೆಕ್ಕೆಗಳಿದ್ದಿದ್ದರೆ ಕೂಡಲೆ ಹೋಗಿ ಅವನನ್ನು ಸೇರಬಹುದಾಗಿತ್ತಲ್ಲ ಎಂದುಕೊಳ್ಳುವರು ಆತನನ್ನು ಅಗಲಿದ್ದರೂ ಇನ್ನೂ ತಾವು ಜೀವದಿಂದಿರುವುದು ಎಂಥ ಭಂಡತನವೆಂದೂ, ತಮ್ಮದು ಕಲ್ಲೆದೆಯೇ ಸರಿಯೆಂದೂ ಆತ್ಮನಿಂದೆ ಮಾಡಿಕೊಳ್ಳುವರು

ಕಠಿನ ಶಬ್ದಗಳ ಅರ್ಥ· ಯದುಪತಿ—ಯದುವಂಶಕ್ಕೆ ಒಡೆಯನಂತಿದ್ದ ಕೃಷ್ಣ ಎವೆ—ಕಣ್ಣು ರೆಪ್ಪೆ ಹಿಂಗು—ಕುಗ್ಗು. ಭಂಗ—ಭಗ್ನ.

### ೫೪

ಇದು ಒಂದು ಶಿವಸ್ತುತಿ ಕೀರ್ತನೆಯ ರೀತಿ ಬಹು ಸ್ವಾರಸ್ಯವಾಗಿದೆ. ಒಬ್ಬ ಸಖಿ ತನ್ನ ಗೆಳತಿಯನ್ನು ಕುರಿತು "ಬಸವನನ್ನು ಏರಿ ಬರುತ್ತಿರುವ ಈ ವಿಷಧರನು ಯಾರು ?" ಎಂದು ಕೇಳುವಳು. ಇನ್ನೊಬ್ಬಳು ಅವನು ಪಾರ್ವತಿಯನ್ನು ಒಲಿದು ಬರುವನೆಂದು ಹೇಳಿ, ಆವನ ವೇಷಭೂಷಣಗಳನ್ನೆಲ್ಲ ವರ್ಣಿಸುವಳು. ಆತನು ಕೈಲಾಸಕ್ಕೆ ಒಡೆಯನೆಂದೂ, ಸ್ಮಶಾನದಲ್ಲಿ ನೆಲಸಿರುವನೆಂದೂ, ಆದಿಶೇಷನನ್ನೇ ಆಭರಣವಾಗುಳ್ಳವನೆಂದೂ, ರಮೆಯರಸನಾದ ವಿಷ್ಣುವಿನ ಮೊಮ್ಮಗನೆಂದೂ ತಿಳಿಯಹೇಳುವಳು ಈಶ್ವರನಲ್ಲಿ ನಾರಾಯಣನು ಸಂಕರ್ಷಣನಾಗಿ ಸಂಹಾರ ಕಾರ್ಯವನ್ನು ನಿರ್ವಹಿಸುವನೆಂದು ಮಾಧ್ವರ ನಂಬಿಕೆ [ಸಂಕರ್ಷಣಃ ಸ ಚ ಬಭೂವ ಪುನಃ ಸುನಿತ್ಯಃ ಸಂಹಾರಕಾರಣ ವಪುಃ ತದನುಜ್ಞಯೈವ ॥ (ಮಹಾಭಾರತ ತಾತ್ಪರ್ಯ ನಿರ್ಣಯ, ಅ I, ಪ. ೭) ಆತನು ದಾಕ್ಷಾಯಣಿಯ ಗಂಡನೆಂದೂ, ದಕ್ಷಯಜ್ಞವನ್ನು ಭಂಗಮಾಡಿದವನೆಂದೂ, ಸಮುದ್ರದಲ್ಲಿ ಹುಟ್ಟಿ ಬಂದ ವಿಷವನ್ನು ಭಕ್ಷಿಸಿದವನೆಂದೂ, ರಾಮನ ಕೃಪೆಯಿಂದ ವಿಪತ್ತಿನಿಂದ ಪಾರಾಗಿ ನೀಲಕಂಠನೆಂಬ ಹೆಸರನ್ನು ಪಡೆದನೆಂದೂ ಹೇಳುವಳು ಈ ಈಶ್ವರನು ಒಮ್ಮೆ, ತನ್ನ ತಾತನಾದ ವಿಷ್ಣುವಲ್ಲಿಗೆ ಬಂದು, ಆತನ ಮೋಹಿನೀರೂಪವನ್ನು ತೋರಿಸಬೇಕೆಂದು ಕೇಳಿಕೊಳ್ಳುತ್ತಾನೆ. ವಿಷ್ಣುವು ಎಷ್ಟು ಸಮಾಧಾನ ಹೇಳಿದರೂ ಅವನಿಗೆ ಒಪ್ಪಿಗೆಯಾಗಲಿಲ್ಲ. ಕಡೆಗೆ ಮಾರನೆಯ ದಿನ ಮೋಹಿನೀ ವೇಷ ಧರಿಸಿ ಬರಲು ಈಶ್ವರನು ಮೋಹಪರವಶನಾಗಿ ವಿಷ್ಣುವನ್ನು ಹಿಡಿಯಲು

ಹೋಗುವನು ಆಗ ವಿಷ್ಣು ತನ್ನ ಕೈಯಲ್ಲಿದ್ದ ಶಂಖ, ಚಕ್ರ ಮತ್ತು ಗದೆಗಳನ್ನು ತೋರಿಸಲು ಈಶ್ವರನು ನಾಚಿ ತಲೆತಗ್ಗಿಸಿ ನಿಲ್ಲುವನು. ವಿಷ್ಣುವಿನಲ್ಲಿ ಕ್ಷಮಾಪಣೆ ಬೇಡುವನು

ಕಠಿನ ಶಬ್ದಗಳ ಅರ್ಥ ವೃಷಭ—ಬಸವ ವಿಷಧರ—ನಂಜುಂಡ ಸಂಕರ್ಷಣ—ರುದ್ರನನ್ನು ಸಂಕರ್ಷಣಸ್ವರೂಪನೆಂದು ನಿರ್ದೇಶಿಸಿದೆ ಮಹಿ—ಭೂಮಿ ಕಾಳಕೂಟ—ವಿಷ. ಶೇಷಗರಳ—ಮಿಕ್ಕ ವಿಷ ಚರಣಾನಖಾಗ್ರ—ಕಾಲುಗುರಿನ ತುದಿ ಚರಣನಖಾಗ್ರದಿ ಧರಣೀ ಬರೆಯುತ್ತಿರಲು—ಕಾಲುಗುರ ತುದಿಯಿಂದ ಭೂಮಿಯ ಮೇಲೆ ಬರೆಯುತ್ತಿರುವ ಚಿತ್ರ ನಾಚಿಕೆಗೆ ತಕ್ಕ ಸಂಕೇತವಾಗಿದೆ ವಕ್ಷ—ಎದೆ ವಕ್ಷದಲೊಪ್ಪುವ ನಿನ್ನಂಗನೆ ಅರಿಯಳು ನಖಮಹಿಮಾಂಕ—ವಿಷ್ಣುವಿನ ಎದೆಯಲ್ಲಿಯೇ ಸರ್ವದಾ ನೆಲಸಿರುವ ಲಕ್ಷ್ಮಿ ಆತನ ಪಾದನಖಮಹಿಮೆಯನ್ನು ತಿಳಿದಿಲ್ಲವೆಂದ ಮೇಲೆ ಉಳಿದವರಿಗೆ ಅದು ಸಾಧ್ಯವಿಲ್ಲವೆಂದು ಇಲ್ಲಿಯ ಭಾವ ವಿಷ್ಣು ಅಪಾರ ಮಹಿಮ ಎಂಬ ಅಭಿಪ್ರಾಯ ಈ ರೀತಿ ನಿರೂಪಿತವಾಗಿದೆ.

**೫೫**

ಮನುಷ್ಯ ಜನ್ಮವನ್ನು ಪ್ರತಿನಿತ್ಯದ ಸದಾಚಾರದಿಂದ ಹೇಗೆ ಸಾರ್ಥಕವಡಿಸಿಕೊಳ್ಳಬೇಕೆಂಬ ನಿಯಮ ನೇಮಗಳನ್ನು ಇಲ್ಲಿ ಸೂಚಿಸಲಾಗಿದೆ

ಕಠಿನ ಶಬ್ದಗಳ ಅರ್ಥ : ತೀರ್ಥಪಾದರು—ಪೂಜ್ಯರು ಸರಿತ—ಸರೋವರ. ಮುಗುಳು—ಮೊಗ್ಗು. ಭೋಗಿಶಯನನ ದಿನ—ಹರಿದಿನ, ಎಂದರೆ ಏಕಾದಶಿ ಜಂಗಮರು—ಚರರು ಪಶ್ಚಿಮ ರಂಗ—ಶ್ರೀರಂಗಪಟ್ಟಣದ ರಂಗನಾಥನನ್ನು ಕುರಿತದ್ದು

**೫೬**

ಈ ಕೀರ್ತನೆ ಮಧುರಭಾವವನ್ನು ಪ್ರಕಟಪಡಿಸುತ್ತದೆ. ಪರಮಾತ್ಮನಲ್ಲಿ ಅನುರಾಗವಿಟ್ಟಿರುವ ಒಬ್ಬಾಕೆ, ಆತನು ತನ್ನನ್ನು ಎಂತು ಸಂಧಿಸಬೇಕೆಂಬುದನ್ನು ಇಲ್ಲಿ ಬಹಳ ಚಾತುರ್ಯದಿಂದ ತಿಳಿಸುತ್ತಾಳೆ ಮೇಲುನೋಟಕ್ಕೆ ಇದು ತುಂಬ ಲೌಕಿಕವಾದ ಸರಣಿಯಲ್ಲಿ ಸಾಗಿದರೂ, ಆಕೆಯ ಇಷ್ಟದೇವತೆಯ ಪರವಾದುದರಿಂದ, ಇದರಲ್ಲಿನ ಆಕೆಯ ಆಧ್ಯಾತ್ಮಿಕ ಅಭೀಪ್ಸೆಯನ್ನು ಮನಗಂಡಾಗ ಇದು ಶೃಂಗಾರಪರವೆನ್ನಿಸಿ ಉನ್ನತವಾಗುತ್ತದೆ ಮಧುರಭಾವವನ್ನು ಪ್ರತಿಪಾದಿಸುವ ಪ್ರಪಂಚದ ಎಲ್ಲ ಭಕ್ತಿಸಾಹಿತ್ಯದಲ್ಲಿಯೂ ಈ ಸಂಪ್ರದಾಯವನ್ನು ನಾವು ಕಾಣಬಹುದು.

ಕಠಿನ ಶಬ್ದಗಳ ಅರ್ಥ ಕಾಂಚಿಯ ದಾಮ—ಡಾಬು, ಒಡ್ಯಾಣ. (ದ್ವಿರುಕ್ತಿ ಪ್ರಯೋಗ) ನಾಡಮಾತುಗಳು—ಸಾಮಾನ್ಯವಾದ ಮಾತುಗಳು ಗಾಡಿಕಾರ—ಸೊಬಗುಗಾರ ಪಾಡು ಪಂಥ—ಪ್ರತಿಜ್ಞೆ.

**೫೭**

ವಿಷ್ಣುವು ಬ್ರಹ್ಮನಿಗೆ ಹೇಗೆ ಒಲಿದು ಬಂದನೆಂಬುದನ್ನು ನಿಮಿತ್ತಮಾಡಿಕೊಂಡು, ಕೃಷ್ಣನು ತನ್ನನ್ನು ಒಲಿದವರಿಗೆ ಯಾವ ರೀತಿಯಲ್ಲಿ ಅನುಗ್ರಹಿಸುವನೆಂಬ ವರ್ಣನೆ ಇಲ್ಲಿದೆ ಆತನು ನವನೀತಚೋರನಾಗಿ ಸುಳಿದುದನ್ನೂ, ಗೋಕುಲದಲ್ಲಿ ಸಮಸ್ತರಿಗೂ ಆನಂದದಾಯಕನಾಗಿ ಬಂದುದನ್ನೂ, ಗೋಪಿಯರಿಗೆ ನವಮೋಹನಾಂಗನಾಗಿ ನಲವಿತ್ತುದನ್ನೂ ಇಲ್ಲಿ ರಮ್ಯವಾಗಿ ನಿರೂಪಿಸಿದೆ.

ಕಠಿನ ಶಬ್ದಗಳ ಅರ್ಥ ಸರಸಿಜಾಕ್ಷ—ಕಮಲದಂತೆ ಕಣ್ಣುಳ್ಳ ವಿಷ್ಣು. ಸರಸಿಜೋದ್ಭವ—ಬ್ರಹ್ಮ, ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿ ಬಂದವನು. ಉರಸು—ಎದೆ (ಉರಸ್ > ಉರಸು). ಸರಸಿಜಾಕ್ಷಿ—ಲಕ್ಷ್ಮಿ ಶರಧಿಗಂಭೀರ—ಸಮುದ್ರದಂತೆ ಗಾಂಭೀರ್ಯವುಳ್ಳವನು. ಹೀರ—ವಜ್ರ ಮೌಕ್ತಿಕ—ಮುತ್ತು ಕೇಯೂರ—ಭುಜಕೀರ್ತಿ ನವನೀತ—ಬೆಣ್ಣೆ. "ನಮ್ಮಂತರಂಗದೊಳಗಿಹ

ಕಲ್ಮಷಭಂಗ"—ನಮ್ಮ ಹೃದಯದಲ್ಲಿ ನೆಲೆಸಿರಬಹುದಾದ ದುರ್ಭಾವನೆಗಳನ್ನು ಹೋಗಲಾಡಿಸುವವನು ಪರಮಾತ್ಮನ ಸಾನ್ನಿಧ್ಯ ಎಷ್ಟು ಪವಿತ್ರವಾದುದೆಂಬುದನ್ನು ಈ ಮಾತು ಮನವರಿಕೆ ಮಾಡಿಕೊಡುತ್ತದೆ

೫೮

ಶ್ರೀಪಾದರಾಜರು ತಮ್ಮ ಶಿಷ್ಯರಾದ ಶ್ರೀವ್ಯಾಸರಾಯರನ್ನು ಇಲ್ಲಿ ಹೃತ್ಪೂರ್ವಕವಾಗಿ ಸ್ತುತಿಸಿದಾರೆ ಗುರುಗಳಾದವರು ಗುಣಶಾಲಿಯಾದ ತಮ್ಮ ಶಿಷ್ಯನನ್ನು ಈ ರೀತಿ ಕೊಂಡಾಡುವುದು ತುಂಬ ಪ್ರಶಸ್ತವಾದುದು. (ಶ್ರೀವ್ಯಾಸರಾಯರು ಪುರಂದರದಾಸರನ್ನು ಹೀಗೆಯೇ ಮೆಚ್ಚಿಕೊಂಡಿರುವುದನ್ನೂ ನೆನೆಯಬಹುದು.) ಈ ಕೀರ್ತನೆಯಲ್ಲಿ, ವ್ಯಾಸರಾಯರು ಎಲ್ಲ ಸಂನ್ಯಾಸಿಗಳಂತೆ ಕೇವಲ ಉದರ ಪೋಷಣೆಗಾಗಿ ಯತಿಗಳಾದವರಲ್ಲವೆಂಬುದನ್ನು ಮೊದಲನೆಯ ನುಡಿಯಲ್ಲಿ ತಿಳಿಸಿರುವರು ಎರಡನೆಯ ನುಡಿಯಲ್ಲಿ ಶ್ರೀವ್ಯಾಸರಾಯರು ಮಾಡಿದ ಲೋಕಸೇವೆಯನ್ನು ಪ್ರಸ್ತಾಪಿಸಿರುವರು ಕಡೆಯ ನುಡಿಯಲ್ಲಿ ಶ್ರೀವ್ಯಾಸರಾಯರ ದೀಕ್ಷಾಗುರುಗಳಾದ ಶ್ರೀ ಬ್ರಹ್ಮಣ್ಯತೀರ್ಥರ ಹೆಸರನ್ನು ಹೇಳಿ ಶ್ಲಾಘಿಸುವರು ಈ ಮೊದಲೆ 'ಇದಿರದಾವನು ನಿನಗೀ ಧರೆಯೊಳು' ಎಂಬ ವ್ಯಾಸಸ್ತುತಿಯೊಂದನ್ನು (ಕೀ ೬) ಕಂಡೆವು ಇದು ಆ ಪಂಕ್ತಿಗೆ ಸೇರಬೇಕಾದ ಇನ್ನೊಂದು ಕೃತಿ ಶ್ರೀವ್ಯಾಸರಾಯರ ಸಂನ್ಯಾಸದ ಮೇಲ್ಮೆಯನ್ನು ಆದಿಶೇಷನೊಬ್ಬನೇ ಸ್ತುತಿಸಬಲ್ಲನೆಂಬುದರಲ್ಲಿ ಅವರ ಮಹಿಮಾ ವಿಶೇಷವೇನು ಎನ್ನುವುದು ಸ್ವವಿದಿತವಾಗುತ್ತದೆ ವ್ಯಾಸರಾಯರು ಡಂಭಾಚಾರದ ಸಂನ್ಯಾಸಿಗಳಲ್ಲವೆಂಬುದನ್ನು ಮೊದಲನೆಯ ನುಡಿಯಲ್ಲಿ ಸ್ಪಷ್ಟಪಡಿಸಲಾಗಿದೆ. ಎರಡನೆಯ ನುಡಿಯಲ್ಲಿ ಅವರು ಹೇಗೆ ಕೆರೆ, ಅಗ್ರಹಾರಗಳನ್ನು ನಿರ್ಮಿಸಿ ಬ್ರಾಹ್ಮಣರ ಕುಟುಂಬಗಳಿಗೆ ನೆರವಿತ್ತರೆಂಬುದನ್ನು ಹೇಳಲಾಗಿದೆ. [ಈಗ ಬೆಳಕಿಗೆ ಬಂದಿರುವ ಕಮಲಾಪುರದ ಶಾಸನದಲ್ಲಿ ಶ್ರೀವ್ಯಾಸರಾಯರು ಶ್ರೀಕೃಷ್ಣದೇವರಾಯನಿಂದ ಪಡೆದ ಭೂಮಿಯನ್ನು ಹೇಗೆ ಇತರರಿಗೆ ಹಂಚಿಕೊಟ್ಟರು ಎಂಬ ವಿವರ ದೊರಕುತ್ತದೆ. (*Epigraphia Indica*, Vol. xxxi, No. 3, p. 139) ಅವನ್ನು ಬಲ್ಲವರಿಗೆ ಶ್ರೀವ್ಯಾಸರಾಯರು ಮೊದಲಿನಿಂದಲೂ ಎಷ್ಟು ಉದಾರಿಗಳು ಎಂಬುದು ವ್ಯಕ್ತವಾಗುತ್ತದೆ] ಶ್ರೀವ್ಯಾಸರಾಯರು ತಮ್ಮ ಗುರುವನ್ನೂ, ತಮ್ಮ ಇಷ್ಟದೇವತೆಯಾದ ಶ್ರೀಹರಿಯ ಉಪಾಸನೆಯನ್ನೂ ಹೇಗೆ ಮಾಡುತ್ತಿದ್ದರೆಂಬ ಚಿತ್ರಣವೂ ಇಷ್ಟೇ ಗಮನಾರ್ಹವಾಗಿದೆ.

ಕಠಿನ ಶಬ್ದಗಳ ಅರ್ಥ ಛಪ್ಪನ್ನ—ಐವತ್ತಾರು ಮಿಂಚುಕೊಳು—ಆಕರ್ಷಕವಾದ ಆಹಾರ. ಬ್ರಹ್ಮಣ್ಯತೀರ್ಥರು—ಶ್ರೀ ವ್ಯಾಸರಾಯರ ದೀಕ್ಷಾಗುರುಗಳು ಇವರು ಮತ್ತು ಶ್ರೀಪಾದರಾಜರು ಪೂರ್ವಾಶ್ರಮದ ಸಂಬಂಧಿಗಳೆಂದು ತಿಳಿದುಬರುತ್ತದೆ ಬ್ರಹ್ಮಣ್ಯತೀರ್ಥರು ಚನ್ನಪಟ್ಟಣದ ಬಳಿಯಿರುವ ಅಬ್ಬೂರಿನಲ್ಲಿ ನೆಲಸಿದ್ದರು. ಈಗಲೂ ಅಲ್ಲಿರುವ ಕುಂದಾಪುರದ ಶ್ರೀ ವ್ಯಾಸರಾಯ ಮಠದಲ್ಲಿ ಪ್ರತಿವರ್ಷವೂ ಶ್ರೀ ಬ್ರಹ್ಮಣ್ಯತೀರ್ಥರ ಆರಾಧನೆ ನಡೆಯುವುದು

೫೯

ವೈಷ್ಣವನೆನ್ನಿಸಿಕೊಳ್ಳಲು ಯಾವ ರೀತಿ ಆಚಾರಶೀಲನಾಗಿರಬೇಕೆಂಬುದನ್ನು ಹೇಳುವ ನೆಪದಲ್ಲಿ ಅವೈಷ್ಣವ ಕರ್ಮಗಳ ಪ್ರಸ್ತಾಪವನ್ನು ಈ ಕೀರ್ತನೆಯಲ್ಲಿ ಮಾಡಿದೆ. ಶ್ರೀಪಾದರಾಜರು ಇದನ್ನು ಉತ್ತಮ ಪುರುಷದಲ್ಲಿ ರಚಿಸಿ, ತಮ್ಮನ್ನು ತಾವೇ ಶೋಧಿಸಿಕೊಂಡಿರುವಂತಿದೆ ಬಾಹ್ಯದ ಡಂಭಾಚಾರಕ್ಕಿಂತಲೂ ಆಂತರಂಗಿಕವಾದ ಚಿತ್ತಶುದ್ಧಿ ಅಗತ್ಯವೆಂಬ ಭಾವನೆಯನ್ನು ಒತ್ತಿ ಒತ್ತಿ ಹೇಳಿರುತ್ತಾರೆ ಆನಂದತೀರ್ಥರ ಗ್ರಂಥಗಳ ಅಧ್ಯಯನ, ಭಕ್ತಿರಸ ಮಜ್ಜನ, ಹರಿನಾಮಸ್ಮರಣ, ಹಿರಿಯರ ವಚನಪಾಲನೆ, ತಾರತಮ್ಯ ಜ್ಞಾನ, ಪಂಚಭೇದ ಪರಿಚಯ, ಜಗತ್ಸತ್ಯತ್ವ, ಭಗವಂತನ ಲೀಲಾಶ್ರವಣ, ಹರಿದಾಸರ ಸಂಗ—ಇವೇ ಮೊದಲಾದುವು ಸದ್ವೈಷ್ಣವನ ಲಕ್ಷಣಗಳು.

ಕಠಿನ ಶಬ್ದಗಳ ಅರ್ಥ: ಪರಬೊಮ್ಮ—ಪರಬ್ರಹ್ಮ ಸುಖತೀರ್ಥಶಾಸ್ತ್ರ—ಆನಂದತೀರ್ಥರ ಸರ್ವಮೂಲವೆಂಬ ಗ್ರಂಥಗಳು ಮೂರನೆಯ ನುಡಿಯಲ್ಲಿ ನರರಿಂದ ಹಿಡಿದು ಲಕ್ಷ್ಮಿಯವರೆಗೆ ಹಂತಹಂತವಾಗಿ ಯಾರು ಯಾರು ಉತ್ತಮರು ಎನ್ನುವುದನ್ನು ಕ್ರಮವಾಗಿ ತಿಳಿಸಿದೆ. ಕಡೆಗೆ ಎಲ್ಲರಿಗಿಂತಲೂ ಶ್ರೇಷ್ಠನಾದವನು ಹರಿ ತಾರತಮ್ಯಾನುಸಾರವಾದ ಈ ಕ್ರಮ ನಿರ್ದೇಶನಕ್ಕೆ ಕಕ್ಷ್ಯೆವೆಂದು ಹೆಸರು. ನಾಲ್ಕನೆಯ ನುಡಿಯಲ್ಲಿ ಮಾಧ್ವಮತದ ಪ್ರಮುಖ ತತ್ವಗಳಾದ ಜಗತ್ತಿನ ಸತ್ಯತ್ವ ಮತ್ತು ಸಮಸ್ತ ಪ್ರಪಂಚದ ಜಡ ಮತ್ತು ಜೀವಗಳನ್ನು ಕುರಿತ ಪಂಚಭೇದಗಳನ್ನು (ಈಶ—ಜೀವ, ಈಶ—ಜಡ, ಜೀವ—ಜಡ, ಜೀವ—ಜೀವ, ಜಡ—ಜಡ.) ಉಲ್ಲೇಖಿಸಲಾಗಿದೆ ನಿಗಮಗೋಚರ—ವೇದವೇದ್ಯ. ರಾಗದ್ವೇಷ—ಅನುರಕ್ತಿ ಮತ್ತು ಅಲಕ್ಷ್ಯ ಸ್ವಭಾವಗಳು.

೬೦

ತಿರುಪತಿಯಲ್ಲಿರುವ ಶ್ರೀ ವೆಂಕಟರಮಣನು ಹೇಗೆ ಭಕ್ತರನ್ನು ಪೊರೆಯುವನೆಂಬ ಚಿತ್ರವೂ, ಸ್ವಾಮಿಯ ಮಾಹಾತ್ಮ್ಯೆಯೂ ಇಲ್ಲಿ ವರ್ಣಿತವಾಗಿವೆ ಜನರ ಉದ್ಧಾರದ ಸಲುವಾಗಿ ಪರಮಾತ್ಮನು ವೈಕುಂಠವನ್ನು ಬಿಟ್ಟು ಈ ಶೇಷಾಚಲದಲ್ಲಿ ನಿಂತಿರುವನು. ಅವನು ಜ್ಞಾನಿಗಳಿಗೆ ಗೋಚರಪ್ರದನು. ಶಿಷ್ಟರಕ್ಷಣ-ದುಷ್ಟಶಿಕ್ಷಣಗಳೇ ಅವನ ಕಾರ್ಯ. ಸಕಲ ಸದ್ಗುಣಗಳಿಂದ ಕೂಡಿರುವ ಸ್ವಾಮಿಗೆ ಜಯಜಯಕಾರವನ್ನು ಮಾಡುವುದರ ಮೂಲಕ ಕೀರ್ತನೆ ಮುಗಿಯುತ್ತದೆ.

ಕಠಿನ ಶಬ್ದಗಳ ಅರ್ಥ: ಶೇಷಾಚಲ—ಆದಿಶೇಷನೇ ಬೆಟ್ಟದ ರೂಪದಲ್ಲಿ ಮಲಗಿರುವನು ಎಂದು ಪುರಾಣೋಕ್ತವಾದ ಸಂಗತಿ ಕಂಜನಾಭ—ಪದ್ಮನಾಭ, ವಿಷ್ಣು. ದುರಿತ—ಪಾಪ. ಗಜವರದ—ಗಜೇಂದ್ರನನ್ನು ಅನುಗ್ರಹಿಸಿದ್ದು (ಗಜೇಂದ್ರಮೋಕ್ಷದ ಕಥೆ).

೬೧

ಭೃಗುಮುನಿಗಳ ಕಥೆಯ ಮೂಲಕ ಹರಿಸರ್ವೋತ್ತಮತ್ವವನ್ನು ಸಾರಿ ಹೇಳಿರುವ (ಕೀ ೩೬) ಶ್ರೀಪಾದರಾಜರು, ಇಲ್ಲಿ ಹರಿಹರರು ಸಮಾನರಲ್ಲರೆಂಬ ತತ್ತ್ವವನ್ನು ಹಲವಾರು ಪೌರಾಣಿಕ ನಿದರ್ಶನಗಳಿಂದ ಸಮರ್ಥಿಸಿರುವರು

ಮುರಹರನು ಪುರಹರನ ಗೆಲಿದುದರಿಯಾ: ಒಮ್ಮೆ ಕೃತಯುಗದಲ್ಲಿಯೇ ಹರಿಹರರಲ್ಲಿ ಯಾರು ಅಧಿಕರು ಎಂಬುದಾಗಿ ದೇವತೆಗಳಲ್ಲಿಯೂ ಮುನಿಗಳಲ್ಲಿಯೂ ವಾಗ್ವಾದವೆದ್ದಿತು. ಆಗ ಹರಿಹರರಿಬ್ಬರೂ ತಮ್ಮ ತಮ್ಮ ಬಿಲ್ಲುಗಳನ್ನು ಹಿಡಿದುಕೊಂಡು ಯುದ್ಧಮಾಡಿ ತಮ್ಮ ಸಾಮರ್ಥ್ಯವನ್ನು ಪ್ರಕಟಿಸಬೇಕೆಂದು ತೀರ್ಮಾನವಾಯಿತು. ಅದೇ ಮೇರೆಗೆ ಶ್ರೀಹರಿಯು ತನ್ನ ಶಾರ್ಙ್ಗವನ್ನು ಹಿಡಿದು ನಿಂತನು. ಶಂಕರನಾದರೋ ತನ್ನ ಪಿನಾಕಿಯನ್ನೇ ಎತ್ತಲಾರದೆ ನಿಶ್ಚೇಷ್ಟಿತನಾಗಿದ್ದನು. ಅವನಿಗೆ ಹರಿಯಿಂದ ಮುಖ್ಯ ಪ್ರೇರಣೆ ಬಾರದೆ ಹೋದುದರಿಂದ ಅವನು ತಟಸ್ಥನಾಗಬೇಕಾಯಿತು. ಹರಿಗೆ ಸಹಜವಾಗಿಯೇ ಜಯ ಪ್ರಾಪ್ತವಾಯಿತು (ಮಹಾಭಾರತ ತಾತ್ಪರ್ಯ ನಿರ್ಣಯ, ಅ IV, ಪ. ೪೪_೪೭).

ಖಳನುರುಹಿ ಹರನನು ಕಾಯಿದ ಕಥೆಯ ನೀನರಿಯಾ: ಈಶ್ವರನ ಪ್ರಸಾದದಿಂದ ಭಸ್ಮಾಸುರನು ಯಾರ ತಲೆಯ ಮೇಲೆ ಕೈಯಿಟ್ಟರೂ ಸುಟ್ಟು ಭಸ್ಮವಾಗುವ ವರವನ್ನು ಪಡೆದನು ದುಷ್ಟವರವನ್ನು ಪಡೆದ ಆ ರಾಕ್ಷಸನು ಈಶ್ವರನಿಗೇ ಮೃತ್ಯುಪ್ರಾಯನಾದನು. ಆಗ ನಾರಾಯಣನು ಅವನೆದುರು ಮೋಹಿನೀ ರೂಪ ತಾಳಿ, ಅವನ ಮನಸ್ಸನ್ನು ಆಕರ್ಷಿಸಿ, ತಾನು ಕುಣಿದಂತೆಯೇ ಅವನೂ ಕುಣಿಯಬೇಕೆಂದು ಒಪ್ಪಂದ ಮಾಡಿಕೊಂಡನು ಹಾಗೆ ಕುಣಿಯುತ್ತಿರುವಲ್ಲಿ ನಾರಾಯಣನು ತನ್ನ ಕೈಯನ್ನು ತಲೆಯ ಮೇಲಿಟ್ಟುಕೊಂಡನು. ಅದೇ ಮೇರೆಗೆ ಭಸ್ಮಾಸುರನೂ ತನ್ನ ಕೈಯನ್ನು ತಲೆಯ ಮೇಲಿಟ್ಟುಕೊಳ್ಳಲು ಸುಟ್ಟು ಬೂದಿಯಾದನು.

ಉರ್ವೀಶನನು ಸಾರಿ ಉಳಿದನರಿಯಾ: ಪರಮ ವೈಷ್ಣವಭಕ್ತನಾದ ಅಂಬರೀಷನು ಒಮ್ಮೆ ಏಕಾದಶಿ ಜಾಗರಣೆಯನ್ನು ಮುಗಿಸಿ ದ್ವಾದಶಿ ಪಾರಣೆ ಮಾಡುವಲ್ಲಿ ಈಶ್ವರಾಂಶರಾದ ದೂರ್ವಾಸರು ಅಲ್ಲಿಗೆ ಬಂದರು ರಾಜನು ಮುನಿಗಳನ್ನು ಪಾರಣೆಗೆ ಬರಬೇಕೆಂದು ಬಿನ್ನವಿಸಿಕೊಂಡನು. ಆಗ ದೂರ್ವಾಸರು ಸ್ನಾನಮಾಡಿ ಬರುವುದಾಗಿ ಹೇಳಿ ನದಿಯ ಕಡೆ ತೆರಳಿದರು. ದ್ವಾದಶಿಯ ಪಾರಣೆ ಹೊತ್ತು ಸಮೀಪಿಸಿದರೂ ದೂರ್ವಾಸರು ಹಿಂತಿರುಗಲಿಲ್ಲ. ಅಂಬರೀಷನ ವ್ರತಭಂಗ ಮಾಡುವುದೇ ಅವರ ಮುಖ್ಯ ಉದ್ದೇಶವಾಗಿತ್ತು ಅಂಬರೀಷನು ನಿರ್ವಾಹವಿಲ್ಲದೆ ತನ್ನ ಪುರೋಹಿತರ ಸೂಚನೆಯಂತೆ ಪಾರಣೆಯ ಹೊತ್ತು ಸಮೀಪಿಸಲು ನೀರನ್ನು ಸೇವಿಸಿ ವ್ರತವನ್ನು ಪರಿಪಾಲಿಸಿದನು ಇದರಿಂದ ಕುಪಿತರಾದ ದೂರ್ವಾಸರು ಅಂಬರೀಷನನ್ನು ಶಪಿಸಿದರು ಇದರಿಂದ ವಿಷ್ಣುವಿಗೆ ಅಸಮಾಧಾನವಾಗಿ ತನ್ನ ಸುದರ್ಶನ ಚಕ್ರವನ್ನೇ ದೂರ್ವಾಸರ ಮೇಲೆ ಪ್ರಯೋಗಿಸಿದನು ಆಗ ಋಷಿಗಳಿಗೆ ದಿಕ್ಕುಗಾಣದೆ ಅಂಬರೀಷನನ್ನೇ ಬಂದು ಮರೆಹೊಕ್ಕರು. ಅಂಬರೀಷನು ತನ್ನ ಸ್ವಾಮಿಯಲ್ಲಿ ವಿನಂತಿ ಮಾಡಿಕೊಂಡು ದೂರ್ವಾಸರನ್ನು ಚಕ್ರದ ಉಪಟಳದಿಂದ ಸಂರಕ್ಷಿಸಿದನು (ಭಾಗವತ, IV, ೪)

ಹರಿ ಬಂದು ಬೇಗ ತನ್ನಸ್ತ್ರವನು ತಾ ಸೆಳೆದು ಶರಣಾಗತರ ಕಾಯಿದ ಕತೆಯನರಿಯಾ: ಕೌರವ ಪಕ್ಷದವನಾದ ಅಶ್ವತ್ಥಾಮನು ದುರ್ಯೋಧನನಿಗೆ ಆದ ಮಾನಭಂಗವನ್ನು ಕಂಡು ಪಾಂಡವರನ್ನು ಸಂಹರಿಸಲು ಹೊರಟನು ಆವನು ಅವಿವೇಕದಿಂದ ಉಪಪಾಂಡವರನ್ನು ಸಂಹರಿಸಿ ತನ್ನ ಸ್ವಾಮಿಯಿಂದಲೇ ಅವಮಾನಿತನಾದನು ಅವನ ಅಕಾರ್ಯಕ್ಕಾಗಿ ಪಾಂಡವರು ಕೋಪಿಸಿ ಯುದ್ಧಮಾಡಿ ಅವನ ಶಿರೋರತ್ನವನ್ನು ಕಸಿದುಕೊಂಡು ಭಂಗಗೊಳಿಸಿದರು. ಆಗ ಅಶ್ವತ್ಥಾಮನು ಕೆರಳಿ ತನ್ನಲ್ಲಿದ್ದ ನಾರಾಯಣಾಸ್ತ್ರವನ್ನು ಉತ್ತರೆಯ ಗರ್ಭದಲ್ಲಿದ್ದ ಅರ್ಭಕನ ವಿನಾಶಕ್ಕಾಗಿ ಪ್ರಯೋಗಿಸಿದನು. ಆಗ ಶ್ರೀಕೃಷ್ಣನು ಆ ನಾರಾಯಣಾಸ್ತ್ರವನ್ನು ತನ್ನ ತಪೋಬಲದಿಂದ ನಿಗ್ರಹಿಸಿ ಪಾಂಡವರ ವಂಶದ ಕುಡಿಯನ್ನು ಸಂರಕ್ಷಿಸಿದನು. ಇಲ್ಲಿಯೂ ಹರನಂಶಕ್ಕೆ ಸೋಲಾಯಿತು.

ಹರಿ ಹರನ ಕಂಠವನು ಕರದಲಿ ಪಿಡಿದು ನೂಕಿ ಕೊರಳ ಕಪ್ಪಾದ ಕಥೆ ಕೇಳಿ ಅರಿಯಾ— ಈ ಪೂರ್ವಕಥೆಯ ವಿವರ ತಿಳಿದುಬಂದಿಲ್ಲ

ಪರಮ ಮೋಹನ ರೂಪ ಲಾವಣ್ಯವನು ಕಂಡು ಹರ ಮರುಳುಗೊಂಡ ಕದೆ ಕೇಳಿ ಅರಿಯಾ: ಮೊಮ್ಮಗನಾದ ರುದ್ರನು ತಾತನಾದ ಹರಿಯನ್ನು ಕಂಡು, ಅವರ ಮೋಹಿನೀ ರೂಪವನ್ನು ನೋಡಬೇಕೆಂದು ಅಪೇಕ್ಷಿಸಿದನು ವಿಷ್ಣುವು ಬೇಡಬೇಡವೆಂದು ಎಷ್ಟು ಹೇಳಿದರೂ ಹರನು ಸಮ್ಮತಿಸಲಿಲ್ಲ ಆಗ ವಿಷ್ಣುವು ಮಾರನೆಯ ದಿನ ಬೆಳಗ್ಗೆ ವನದ ಬಳಿಗೆ ಬರುವಂತೆ ಹರನಿಗೆ ತಿಳಿಸಿದನು. ಅದೇ ಮೇರೆಗೆ ಹರನು ಅಲ್ಲಿಗೆ ಬರಲು, ಆ ವೇಳೆಗೆ ವಿಷ್ಣುವು ಅತ್ಯಂತ ಸುಂದರ ಯುವತಿಯಂತೆ ಅಲ್ಲಿ ನಿಂತಿದ್ದನು. ಹರನಿಗೆ ಅರಿವು ತಪ್ಪಿ, ಆ ಕೃತಕ ಸ್ತ್ರೀಯನ್ನು ನೈಜವೆಂದೇ ಬಗೆದು ಕಾಮಾತುರನಾಗಿ ಹಿಡಿಯಲು ಹೋದನು ಆಗ ವಿಷ್ಣುವು ತನ್ನ ಸ್ವರೂಪವನ್ನು ವ್ಯಕ್ತಪಡಿಸಲು ಹರನು ನಾಚಿ ತಲೆತಗ್ಗಿಸಿದನು ಶ್ರೀಪಾದರಾಜರು ಈ ಪ್ರಸಂಗವನ್ನು ಕುರಿತು ಒಂದು ಪ್ರತ್ಯೇಕವಾದ ಕೀರ್ತನೆಯನ್ನೇ ರಚಿಸಿರುವರು (ಕೀ. ೫೩)

ಹರನ ಧುರದಲಿ ಜಯಿಸಿ ಅವನ ಕಿಂಕರನ ಸಾವಿರ ತೋಳುಗಳ ತರಿದ ಕಥೆಯ ನೀನರಿಯಾ: ಬಾಣಾಸುರನು ಹರಭಕ್ತ. ಪ್ರದ್ಯುಮ್ನನ ಮಗನಾದ ಅನಿರುದ್ಧ ಹರಿಭಕ್ತ. ಅನಿರುದ್ಧನು ಬಾಣಾಸುರನ ಮಗಳಾದ ಉಷೆಯನ್ನು ಒಲಿದು ಆಕೆಯನ್ನು ರಮಿಸಲು ಬಾಣಾಸುರನು ಅನಿರುದ್ಧನನ್ನು ಸೆರೆಯಲ್ಲಿಟ್ಟನು. ಬಾಣಾಸುರನಿಗೂ ಪ್ರದ್ಯುಮ್ನನಿಗೂ ಬಲವಾದ ಕಾಳಗ ನಡೆಯಿತು. ಈಶ್ವರ ತನ್ನ ಸೇನಾಸಮೇತವಾಗಿ ಬಾಣಾಸುರನ ಪಕ್ಷವನ್ನು ವಹಿಸಿ ನಿಂತನು ಶ್ರೀಕೃಷ್ಣನು ಪ್ರದ್ಯುಮ್ನನ ಪಕ್ಷ ನಿಂತನು ಕಡೆಕಡೆಗೆ ಹರಿ ಹರರಿಬ್ಬರಿಗೂ ಕೈಕೈ ಮಸೆಯಿತು. ಕಡೆಗೆ ಹರಿಯ ಕೈ ಮೇಲಾಗಿ ಬಾಣಾಸುರನ ಸಹಸ್ರ ತೋಳುಗಳನ್ನು ಸವರಿದನು.

ಸುರತರುವ ಕಿತ್ತು ಹರಿ ಸುರಲೋಕದಿಂದ ಬರೆ ಹರನು ಹರಿಯೊಡನೆ ಕದನವನು ಮಾಡೆ: ಈ ಕಥೆಯ ಮೂಲವೂ ನಮ್ಮ ಗಮನಕ್ಕೆ ಬಂದಿಲ್ಲ. ಕೃಷ್ಣನು ನರಕಾಸುರನನ್ನು ಸಂಹರಿಸಿ ಹಿಂತಿರುಗುತ್ತಿರುವಾಗ, ಸತ್ಯಭಾಮೆಯ ಸಲುವಾಗಿ ಪಾರಿಜಾತ ವೃಕ್ಷವನ್ನು ಇಂದ್ರನ ನಂದನದಿಂದ ಅಪಹರಿಸಿಕೊಂಡು ಬರುತ್ತಿರಲು ಆಗ ಇಂದ್ರನೂ, ಅವನ ಮಗ ಜಯಂತನೂ ಕೃಷ್ಣನನ್ನು ಅಡ್ಡಗಟ್ಟಿ ಪರಾಭವ ಹೊಂದಿದರೆಂದು ತಿಳಿದುಬರುತ್ತದೆ (ಹರಿವಂಶ, ೨-೬೫). ಈ ಕಥೆಯೇ ಏನಾದರೂ ಈ ರೀತಿ ಮಾರ್ಪಟ್ಟಿರಬಹುದೆ?

ಹರಸುತನು (?) ತವದಿಂದ ಹರಿಯು ಚಕ್ರವ ಬೇಡೆ: ಈ ಪೂರ್ವಕಥೆಯ ಆಕರವಾವುದೋ ತಿಳಿದುಬಂದಿಲ್ಲ.

ಈಶ್ವರನ ಭಕ್ತರಾದ ರಾವಣಾಸುರ ಕುಂಭಕರ್ಣರನ್ನು ರಾಮನೂ, ನರಕಾಸುರನನ್ನು ಶ್ರೀಕೃಷ್ಣನೂ ನರರೂಪಿನಿಂದಲೇ ಗೆಲ್ಲುವುದರಿಂದ ವಿಷ್ಣುವಿನ ಮೇಲ್ಮೆ ಮಿಗಿಲಾಯಿತು.

ಕಠಿನ ಶಬ್ದಗಳ ಅರ್ಥ: ಮುರಹರ—ಮುರಾಸುರನನ್ನು ಸಂಹರಿಸಿದ ಕೃಷ್ಣ. ಪುರಹರ—ತ್ರಿಪುರಾಸುರರನ್ನು ಸಂಹರಿಸಿದ ಶಿವ. ಉರುಹಿ—ಸುಟ್ಟು. ಉರ್ವೀಶ—ಭೂಪತಿ. ಉರವಣಿಸಿ—ಸಡಗರಗೊಂಡು. ಧುರ—ಯುದ್ಧ. ಸುರತರು—ಕಲ್ಪವೃಕ್ಷ. ತರಹರಿಸು—ಸೈರಿಸು.

## ೬೨

ಇದು ತಿರುಪತಿಯ ಶ್ರೀನಿವಾಸದೇವರನ್ನು ಕುರಿತ ಪ್ರಾರ್ಥನೆ. ಶ್ರೀವಿಷ್ಣುವಿನ ಗುಣವಿಶೇಷಗಳನ್ನೆಲ್ಲ ಶ್ರೀನಿವಾಸದೇವರಿಗೆ ಅನ್ವಯಿಸಿ ಸ್ತುತಿಯನ್ನು ಮಾಡಿದೆ.

ಕಠಿನ ಶಬ್ದಗಳ ಅರ್ಥ: ಹರೇ—ಎಲೈ ಹರಿಯೆ? ವೆಂಕಟಶೈಲವಲ್ಲಭಾ—ವೆಂಕಟಾಚಲಪತಿ. ಪೊರೆ—ಸಲಹು. ದುರಿತ—ಪಾಪ. ಅಘವೃಂದ—ಪಾಪರಾಶಿ. ಮಂದರಾದ್ರಿಧರ—ಮಂದರ ಪರ್ವತವನ್ನು ಕೂರ್ಮಾವತಾರದಲ್ಲಿ ಹೊತ್ತಿದ್ದ ಶ್ರೀವಿಷ್ಣು. ಗಂಗೋದಿತ ಪಾದ—ವಾಮನನಾಗಿ ಬಂದ ಶ್ರೀವಿಷ್ಣು ತ್ರಿವಿಕ್ರಮನಾದಂದು ಆತನ ಪಾದ ಗಗನವನ್ನು ಭೇದಿಸಲು, ಇಂದ್ರಾದಿಗಳು ಆತನ ಪಾದವನ್ನು ತೊಳೆಯಲು ಆ ನೀರು ಗಂಗೆಯಾಗಿ ಪ್ರವಹಿಸಿತು. ಅಹಿರಾಜಶಯ್ಯ—ಆದಿಶೇಷನ ಮೇಲೆ ಮಲಗಿರುವವನು.

# ಅನುಬಂಧ ೧

# ಪಾಠಪ್ರಭೇದ

## ೧

೨೭ನೆಯ ಕೀರ್ತನೆಯ ಟಿಪ್ಪಣಿಯನ್ನು ನೋಡಿ.

## ೨

೫೫ನೆಯ ಕೀರ್ತನೆಯ ಟಿಪ್ಪಣಿಯನ್ನು ನೋಡಿ.

# ಅನುಬಂಧ ೨

# ಅಂಕಿತ ಸಂದಿಗ್ಧ

## ೧

ಭಗವಂತನ ಹಿರಿಮೆಯನ್ನು ಭಕ್ತನು ಮಾತ್ರವೇ ತಿಳಿಯಬಲ್ಲನು ಎಂಬ ತತ್ತ್ವವನ್ನು ಈ ಉಗಾಭೋಗದಲ್ಲಿ ತಿಳಿಸಿದೆ. ಈ ಅಭಿಪ್ರಾಯ ನಿರೂಪಣೆಗಾಗಿ ದಾಸರು ಕೆಲವು ಉಪಮಾನ

ಗಳನ್ನು ಬಳಸಿರುವರು ಆಕಾಶದ ಆಳವನ್ನು ಸೂರ್ಯಚಂದ್ರರಲ್ಲದೆ ಅಲ್ಲಿಯೇ ಆಡಾಡುವ ಹಕ್ಕಿ ತಿಳಿಯದೆಂದೂ, ಕೊಳದ ಆಳವನ್ನು ತಾವರೆ ಬಲ್ಲುದಲ್ಲದೆ, ದಡದ ಮೇಲೆ ಬೆಳೆದಿರುವ ಗಿಡ, ಮರ, ಬಳ್ಳಿಗಳು ತಿಳಿಯಲಾರವೆಂದೂ, ಮಾವಿನ ಹಣ್ಣಿನ ರುಚಿಯನ್ನು ಗಿಳಿಗಳಲ್ಲದೆ ಕಾಗೆಗಳು ಅರಿಯಲಾರವೆಂದೂ ಹೋಲಿಕೆಗಳನ್ನಿತ್ತಿರುವರು ಆದ್ದರಿಂದ ಭಕ್ತರ ಪ್ರಿಯನಾದ ಭಗವಂತನು ಅವರನ್ನು ಸಲಹಲಿ ಎಂದು ಕೋರಿಕೊಳ್ಳುವರು.

ಕಠಿನ ಶಬ್ದಗಳ ಅರ್ಥ: ಅಂಬರ—ಆಕಾಶ ಇನ—ಸೂರ್ಯ. ಶಶಿ—ಚಂದ್ರ ಪ್ರಮಾಣ—ಅಳತೆ. ಅರಗಿಳಿ—ಅರಸುಗಿಳಿ.

೨

ಈ ಉಗಾಭೋಗದಲ್ಲಿ ಕಲಿಯುಗದ ಮೇಲ್ಮೆಯನ್ನು ತಿಳಿಸಿದೆ ಕಲಿಯುಗದಲ್ಲಿ ಶ್ರೀರಂಗ ವಿಠಲನ ನಾಮಕೀರ್ತನೆ ಮಾಡುವುದರಿಂದ, ಕಲುಷವೆಲ್ಲ ಹೋಗಿ ಕೈವಲ್ಯ ಪದವಿ ಪ್ರಾಪ್ತವಾಗುವುದೆಂದೂ, ಸ್ಮರಣೆ ಮಾತ್ರದಿಂದ ಸಾಯುಜ್ಯ ಪದವಿ ದೊರೆಯುವುದೆಂದೂ ದಾಸರು ತಿಳಿಸಿರುವರು. ಆ ಸ್ವಾಮಿಯ ಸ್ಮರಣೆಯಿರುವತನಕ 'ಕಲಿಯುಗವೆ ಕೃತಯುಗವಾಗುವುದು' ಎಂದು ಸಾರಿ ಹೇಳುವರು.

ಕಠಿನ ಶಬ್ದಗಳ ಅರ್ಥ: ಕೈವಲ್ಯ—ಮೋಕ್ಷ ಸಾಯುಜ್ಯ—ಮುಕ್ತಿಗಳಲ್ಲಿ ಮುಖ್ಯವಾಗಿ ನಾಲ್ಕು ಬಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಮತ್ತು ಸಾಯುಜ್ಯ. ಈ ನಾಲ್ಕಕ್ಕೂ ಮೀರಿದ್ದು ಸಾರಿಷ್ಟ್ಯ.

೩

ಈ ಪುಟ್ಟ ಕೀರ್ತನೆ ಶ್ರೀವಿಷ್ಣು ದಶಾವತಾರವೆತ್ತಿ ಹೇಗೆ ತನ್ನ ಲೀಲೆಗಳನ್ನು ತೋರಿದನು ಎನ್ನುವುದನ್ನು ಬಹಳ ಸಂಗ್ರಹವಾಗಿ ಹೇಳಿದೆ ಎರಡೋ ಮೂರೋ ಪದಗಳಲ್ಲಿ ಒಂದೊಂದು ಅವತಾರವನ್ನೂ ಸೂಚಿಸಿದೆ.

ನಿಗಮವ ತಂದು: ಮತ್ಸ್ಯಾವತಾರವೆತ್ತಿ ವೇದಗಳನ್ನು ಸೋಮಕನಿಂದ ಮರಳಿ ತಂದಿದ್ದು. ನಗವ ಬೆನ್ನಲಿ ಪೊತ್ತು: ಕೂರ್ಮನಾಗಿ ಮಂದರಪರ್ವತವನ್ನು ಧರಿಸಿದ್ದು. ಅಗೆದು ಬೇರು ತಿಂದು: ವರಾಹಾವತಾರವೆತ್ತಿ ಸಮುದ್ರದೊಳಕ್ಕೆ ಹೋಗಿ ಭೂಮಂಡಲವನ್ನು ತಂದದ್ದು. ಬಾಲನ ಸಲಹಿದೆ ಅಂದು: ಭಕ್ತನಾದ ಪ್ರಹ್ಲಾದನನ್ನು ಶ್ರೀವಿಷ್ಣು ಸಂರಕ್ಷಿಸಿದ್ದು ಪೊಡವಿ ಈರಡಿ ಮಾಡಿ: ವಾಮನಾವತಾರದಲ್ಲಿ ಬಲಿಯನ್ನು ಮೂರು ಹೆಜ್ಜೆ ದಾನ ಬೇಡಿ ತ್ರಿವಿಕ್ರಮನಾಗಿ ಬೆಳೆದು, ಭೂಮ್ಯಾಕಾಶಗಳನ್ನು ತನ್ನ ಕಾಲುಗಳಲ್ಲಿ ಅಳೆದದ್ದು ಕೊಡಲಿ ಪಿಡಿದು—ಪರಶುರಾಮಾವತಾರ. ಮುನಿಮಡದಿಯ ಸಲಹಿದೆ—ರಾಮಾವತಾರದಲ್ಲಿ ಅಹಲ್ಯೆಯನ್ನು ಉದ್ಧರಿಸಿದ್ದು. ಅಂಗನೆಯರ ವ್ರತಭಂಗಮಾಡಿದೆ: ಬೌದ್ಧಾವತಾರದಲ್ಲಿ ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯಕ್ಕೆ ಭಂಗ ತಂದುದರಿಂದ, ಆ ಮೂಲಕ ಆ ಅಸುರರ ಸಂಹಾರವಾದುದು. ತುಂಗಕುದುರೆಯೇರಿದ—ಕಲ್ಕ್ಯವತಾರ.

೪

ಹನುಮಂತನನ್ನು ಹೊಗಳುವ ಈ ಉಗಾಭೋಗ ವಾಯುಸ್ತುತಿಯ ಶ್ಲೋಕವೊಂದರ ಸುಂದರ ಅನುವಾದವಾಗಿದೆ

ಕಠಿನ ಶಬ್ದಗಳ ಅರ್ಥ ಅಜಾಡ್ಯ—ಯಾವ ವ್ಯಾಧಿಯೂ ಇಲ್ಲದಿರುವುದು. ವಾಕ್ಪಟುತ್ವ—ಮಾತಿನ ಶಕ್ತಿ

೫

ಶ್ರೀಹರಿಯನ್ನು ನಂಬಿ ಉದ್ಧಾರವಾಗುವುದನ್ನು ಬಿಟ್ಟು, ಕನಿಷ್ಠರನ್ನು ಸೇವಿಸತೊಡಗಿ ವ್ಯರ್ಥವಾಗುವ ಪರಿಯನ್ನು ಕುರಿತ ಪಶ್ಚಾತ್ತಾಪವಿಲ್ಲಿದೆ. ಕನಿಷ್ಠರನ್ನು ಆಶ್ರಯಿಸಲೆಳಸುವುದು ಕಲ್ಲುಗೋವಿನಿಂದ ಹಾಲನ್ನು ಬಯಸುವ ಕರುವಿನ ಮಂದಬುದ್ಧಿಯಂತೆ ತೀರ ಹಾಸ್ಯಾಸ್ಪದವಾದುದು. ಆದರಿಂದ ನಷ್ಟವೇ ವಿನಾ ಏನೂ ಫಲವಿಲ್ಲ. ಇಂಥ ವ್ಯರ್ಥ ಅಭೀಪ್ಸೆಯಿಂದ ತಮ್ಮನ್ನು ಪಾರುಮಾಡಬೇಕೆಂದು ಭಗವಂತನಲ್ಲಿ ಮೊರೆಯಿಡುವರು.

ಕಠಿನ ಶಬ್ದಗಳ ಅರ್ಥ. ಕ್ಷುಲ್ಲಕರು—ಕೀಳು ಜನರು.

೬

ಇದು ಒಂದು ನಿಂದಾಸ್ತುತಿ. ಭಕ್ತನು ಭಗವಂತನನ್ನು ಪ್ರಾರ್ಥಿಸುವಲ್ಲಿ, ಅತನನ್ನು ಹೆದರಿಸಿ, ನಿಂದಿಸಿ, ಕಡೆಗೆ ಒಲಿಸಿಕೊಳ್ಳುವ ಈ ವಿಧಾನ ಭಕ್ತಿ ಸಾಹಿತ್ಯದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಪ್ರಕೃತ ಕೀರ್ತನೆಯಲ್ಲಿ ಶ್ರೀಕೃಷ್ಣನ ಅನೇಕ ಲೀಲೆಗಳ ನಿರೂಪಣೆಯಿದೆ.

ತರಳತನಲಿದ್ದು ದುರುಗನಾಗಿ ಬಂದು ಒದರುವೆ ಎಲೊ ನರಹರಿ ಎನ್ನ ಬಾಯಿಗೆ ಬಂದುದನು. ಈ ನುಡಿಯಲ್ಲಿ ಶ್ರೀಕೃಷ್ಣನು ತನ್ನ ಬಾಲ್ಯದಲ್ಲಿ ನಡೆಸಿದ ತುಂಟಾಟಗಳ ವರ್ಣನೆಯಿದೆ. ಗೋಪಿ ಅವನನ್ನು ಒರಳಿಗೆ ಕಟ್ಟಿ ದಂಡಿಸಿದಳು. ದನಗಳನ್ನು ಕಾಯುವಲ್ಲಿ ಗೋಪಾಲಕರೊಂದಿಗೆ ಬುತ್ತಿಯ ಊಟವನ್ನು ಉಂಡನು. ಅವರಿವರ ಮನೆಗಳಿಗೆ ನುಗ್ಗಿ ಬೆಣ್ಣೆಯನ್ನು ಕದ್ದು ಮೆದ್ದನು.

ಕಟ್ಟಿಕರೆದ ಏಳು ದಿನದ ಮಳೆಗೆ ಪೋಗಿ ಬೆಟ್ಟವ ಪೊತ್ತದ್ದು ವೇಳಲೊ: ಶ್ರೀಕೃಷ್ಣನು ಗೋಕುಲದಲ್ಲಿದ್ದ ಗೋಪಾಲಕರು ಇಂದ್ರನಿಗೆ ಪೂಜೆ ಸಲ್ಲಿಸದಂತೆ ನಿಷೇಧಿಸಿದನಷ್ಟೆ. ಆಗ ದೇವೇಂದ್ರನು ಕುಪಿತನಾಗಿ ಏಕಪ್ರಕಾರವಾಗಿ ಏಳು ದಿನಗಳ ಪರ್ಯಂತ ಧಾರಾಕಾರವಾಗಿ ಮಳೆಗರೆದನು. ಆಗ ಶ್ರೀಕೃಷ್ಣನು ತನ್ನ ಕಿರುಬೆರಳಿನಿಂದ ಗೋವರ್ಧನ ಗಿರಿಯನ್ನು ಮೇಲೆತ್ತಿ ಇಡೀ ವ್ರಜವನ್ನು ಸಂಕಟದಿಂದ ಪಾರುಮಾಡಿದನು. ಕಡೆಗೆ ಇಂದ್ರನು ತನ್ನ ತಪ್ಪನ್ನು ಒಪ್ಪಿಕೊಂಡು ಸುಮ್ಮನಾದನು (ಭಾಗವತ X, ೨೫).

ಅಟ್ಟಿಸಿಕೊಳ್ಳುತ ಯಾಗಶಾಲೆಗೆ ಪೋಗಿ ಹೊಟ್ಟೆಯ ಹೊರೆದದ್ದು ಹೇಳಲೊ: ಆಂಗಿರಸ ಯಜ್ಞದಲ್ಲಿ ನಿರತರಾಗಿದ್ದ ಬ್ರಾಹ್ಮಣರು ಶ್ರೀಕೃಷ್ಣನ ಮಾತಿನಂತೆ ಅಲ್ಲಿಗೆ ಬಂದಿದ್ದ ಗೋಪಾಲಕರಿಗೆ ಆಹಾರಾದಿಗಳನ್ನು ಕೊಡಲು ಹಿಂತೆಗೆದರು. ಬಳಿಕ ಅವರು ತಮ್ಮ ಸ್ವಾಮಿಯ ಸೂಚನೆಯಂತೆ ಆ ಬ್ರಾಹ್ಮಣರ ಹೆಂಡತಿಯರ ಬಳಿಗೆ ಹೋಗಲು, ಶ್ರೀಕೃಷ್ಣನು ತಾವಿದ್ದಲ್ಲಿಗೆ ಬಂದಿರುವ ಸುದ್ದಿಯನ್ನು ಕೇಳಿ, ಸಂತೋಷಪಟ್ಟು, ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ತಂದು ಎಲ್ಲರಿಗೂ ಕೊಟ್ಟರು. ಶ್ರೀಕೃಷ್ಣನು ಅವರ ನಿರ್ಹೇತುಕ ಭಕ್ತಿಗೆ ತಲೆದೂಗಿದನು (ಭಾಗವತ, X, ಅ ೨೩).

ದುಷ್ಟಹಾವಿನ ಹೆಡೆಯನು ತುಳಿದಾಡಿದ ದುಷ್ಟತನವನು ಹೇಳಲೊ: ಯಮುನಾ ನದಿಯಲ್ಲಿ ನೆಲಸಿ ಉಪದ್ರವವನ್ನು ಮಾಡುತ್ತಿದ್ದ ಕಾಳೀಯನೆಂಬ ಸರ್ಪನನ್ನು ಶ್ರೀಕೃಷ್ಣನು ತನ್ನ ಪಾದದಿಂದ ತುಳಿದು ಅದರ ಕೋಟಲೆಯನ್ನು ತಪ್ಪಿಸಿದನು. ಕಾಳೀಯನು ತನ್ನ ಸಂಸಾರ ಸಮೇತವಾಗಿ ರಮಣಕದ್ವೀಪವನ್ನು ಬಳಸಿದ್ದ ಸಮುದ್ರದಲ್ಲಿ ಆಶ್ರಯವನ್ನು ಪಡೆಯಿತು (ಭಾಗವತ, X, ೬)

ನೆಟ್ಟನೆ ಅಂಬರಕೆತ್ತಿದನ ಹೊಯ್ದು ಹಿಟ್ಟಕುಟ್ಟಿಟ್ಟುದ ಹೇಳಲೊ: ಶ್ರೀಕೃಷ್ಣನನ್ನು ಸಂಹರಿಸಲು ಕಂಸನಿಂದ ನಿಯೋಜಿತನಾದ, ತೃಣಾವರ್ತನೆಂಬ ರಾಕ್ಷಸನು ಬಿರುಗಾಳಿಯ ರೂಪದಲ್ಲಿ ಗೋಕುಲಕ್ಕೆ ಸುಳಿದು, ಎಳೆಯ ಬಾಲಕನನ್ನು ಅಂತರಿಕ್ಷದವರೆಗೆ ಎತ್ತಿಕೊಂಡು ಹೋದನು.

ಆಗ ಪರಮಾತ್ಮನು ಬೃಹದಾಕಾರವನ್ನು ತಾಳಿ ಆ ರಾಕ್ಷಸನನ್ನು ಬಡಿದು ನೆಲಕ್ಕುರುಳಿಸಿದನು. (ಭಾಗವತ, x, ೭)

ಪಿಡಿಯವಲಿಗೆ ಮೆಚ್ಚಿ ಸಂಪದವನು ಕೊಟ್ಟ ಬೆಡಗತನವನಿಲ್ಲಿ ಪೇಳಲೊ ಬಾಲ್ಯ ಸ್ನೇಹಿತನಾದ ಕುಚೇಲನು ತಂದಿದ್ದ ಹಿಡಿ ಅವಲಕ್ಕಿಯಿಂದ ಸುಪ್ರೀತನಾಗಿ ಶ್ರೀಕೃಷ್ಣನು ಅವನಿಗೆ ಸಮಸ್ತ ಸಂಪತ್ತನ್ನೂ ಅನುಗ್ರಹಿಸಿದನು (ಭಾಗವತ, x, ಅ ೧೨)

ಹಿಡಿಯಬಂದ ಕಾಲಯವನಗಂಜಿ ಕಲ್ಲಪಡೆಯ ಹೊಕ್ಕಿದ್ದುದ ಹೇಳಲೊ · ಕಾಲಯವನನು ಗರ್ಗಮಹರ್ಷಿಯ ಮಗ ಯಾದವರು ತನ್ನ ತಂದೆಯನ್ನು ಒಮ್ಮೆ ಪರಿಹಾಸ್ಯ ಮಾಡಿದ್ದರಿಂದ ಯಾದವರ ಮೇಲೆ ಇವನು ದ್ವೇಷ ಕಾರುತ್ತಿದ್ದನು ಶಿವನ ಅನುಗ್ರಹವನ್ನು ಪಡೆದ ಕಾಲಯವನನನ್ನು ಗೆಲ್ಲಲು ಶ್ರೀಕೃಷ್ಣನಿಗೂ ಅಸಾಧ್ಯವಾಗಿತ್ತು ಒಮ್ಮೆ ಕಾಲಯವನನು ಶ್ರೀಕೃಷ್ಣನನ್ನು ಬೆನ್ನಟ್ಟಿ ಬರಲು, ಅವನು ಮುಚುಕುಂದನು ನಿದ್ರಾಪರವಶನಾಗಿ ಮಲಗಿದ್ದ ಗುಹೆಯನ್ನು ಹೊಕ್ಕನು ಕಾಲಯವನನು ಕತ್ತಲಿನಲ್ಲಿ ಮುಚುಕುಂದನನ್ನೇ ಕೃಷ್ಣನೆಂದು ಬಗೆದು ಕಾಲಿನಲ್ಲಿ ಒದ್ದನು ಮುಚುಕುಂದನು ಎಚ್ಚತ್ತು ದೃಷ್ಟಿಸಿ ನೋಡಲು, ಆ ನೋಟಮಾತ್ರದಿಂದಲೇ ಕಾಲಯವನನು ಭಸ್ಮವಾದನು (ಪುನಾಚೂ ಪು. ೯೭)

ಮಡಿದ ಮಗನ ಗುರುವಿಗೆ ಕೊಡಬೇಕೆಂಬ ಸಡಗರತನವಿಲ್ಲಿ ಹೇಳಲೊ ಶ್ರೀಕೃಷ್ಣ ಬಲರಾಮರು ಸಾಂದೀಪರಲ್ಲಿ ವಿದ್ಯೆ ಕಲಿತರು ಆ ಗುರುಗಳು ಗುರುದಕ್ಷಿಣಾರ್ಥವಾಗಿ ಶ್ರೀಕೃಷ್ಣನನ್ನು ತಮ್ಮ ಸತ್ತ ಮಗನನ್ನು ಬದುಕಿಸಿ ಕೊಡಬೇಕೆಂದು ಕೇಳಿದರು ಆಗ ಶ್ರೀಕೃಷ್ಣನು ಆ ಗುರುಪುತ್ರನನ್ನು ಕದ್ದೊಯ್ದ ಪಂಚಜನನೆಂಬ ರಾಕ್ಷಸನನ್ನು ಕೊಲ್ಲಲು, ಅವನಲ್ಲಿ ಗುರುಪುತ್ರನು ಕಾಣಲಿಲ್ಲ. ಅಲ್ಲಿಂದ ಯಮಲೋಕಕ್ಕೆ ತೆರಳಿ, ಅಲ್ಲಿ ಗುರುಕುಮಾರನನ್ನು ಕಂಡು, ಕರೆದುಕೊಂಡು ಬಂದನು. ಸಾಂದೀಪರು ಶ್ರೀಕೃಷ್ಣನ ಅನುಗ್ರಹದಿಂದ ಕೃತಾರ್ಥರಾದರು (ಭಾಗವತ, x, ಅ ೪೫).

ಮಡದಿ ಮಾತಿಗೆ ಪೋಗಿ ನೀ ಪಾರಿಜಾತವ ತಡೆಯದೆ ತಂದದ್ದು ಹೇಳಲೊ ಸತ್ಯಭಾಮೆಯ ಅಪೇಕ್ಷಾನುಸಾರವಾಗಿ ಶ್ರೀಕೃಷ್ಣನು ದೇವಲೋಕದಲ್ಲಿದ್ದ ಪಾರಿಜಾತಪುಷ್ಪವನ್ನು ಭೂಲೋಕಕ್ಕೆ ತಂದನು ಅವನನ್ನು ಪ್ರತಿಭಟಿಸಿದ ದೇವೇಂದ್ರನ ಕಡೆಯವರನ್ನೂ ಅವನು ಲಕ್ಷಿಸಲಿಲ್ಲ (ಭಾಗವತ, x, ಅ. ೯). ಒಮ್ಮೆ ದೇವಲೋಕದಿಂದ ಹಿಂತಿರುಗಿದ ನಾರದರು ಒಂದು ಪಾರಿಜಾತ ಪುಷ್ಪವನ್ನು ತಂದು ಶ್ರೀಕೃಷ್ಣನಿಗಿತ್ತರು. ಅವನು ಅದನ್ನು ರುಕ್ಮಿಣಿಗೆ ಕೊಟ್ಟನು. ಆಗ ಸತ್ಯಭಾಮೆಗೆ ಸಿಟ್ಟು ಬಂದಿತು ಆಕೆಯ ಕೋಪವನ್ನು ನಿವಾರಿಸುವ ಸಲುವಾಗಿ ಶ್ರೀಕೃಷ್ಣನು ದೇವಲೋಕದಿಂದ ಪಾರಿಜಾತ ವೃಕ್ಷವನ್ನೇ ಅಪಹರಿಸಿ ತರುವನು (ಪುನಾಚೂ ಪು ೫೮೨).

ಮೌನಗೋರಿಯ ನೋಸಬಂದ ಹೆಂಗಳನೆಲ್ಲ ಮಾನವ ಕೊಂಡದ್ದು ಹೇಳಲೊ ಯಮುನಾ ತೀರದಲ್ಲಿ ಕಾತ್ಯಾಯನಿ ವ್ರತವನ್ನು ಆಚರಿಸುತ್ತಿದ್ದ ನಾರಿಯರು ತಮ್ಮ ವಸ್ತ್ರವನ್ನು ದಂಡೆಯ ಮೇಲಿಟ್ಟು ನದಿಯಲ್ಲಿ ಸ್ನಾನ ಮಾಡುತ್ತಿದ್ದರು ಆಗ ಕೃಷ್ಣನು ಅವರ ವಸ್ತ್ರಗಳನ್ನು ಕದ್ದು, ಹತ್ತಿರವಿದ್ದ ಒಂದು ಕದಂಬವೃಕ್ಷವನ್ನು ಏರಿ ಕುಳಿತನು. ಆ ಅಬಲೆಯರು ಅವನನ್ನು ಗೋಗರೆಯಲು, ಕಟ್ಟಕಡೆಗೆ ಅವುಗಳನ್ನು ಹಿಂತಿರುಗಿಸಿ ಕೊಟ್ಟನು ಸ್ತ್ರೀಯರು ಆ ರೀತಿ ನಗ್ನರಾಗಿ ನದಿಯಲ್ಲಿ ಸ್ನಾನ ಮಾಡುವುದು ಉಚಿತವಲ್ಲವೆಂದು ಉಪದೇಶಿಸಿದನು (ಭಾಗವತ, x, ಅ. ೨೨).

ತಾನಾಗಿ ಮೊಲೆಯನೂಡಿಸ ಬಂದವಳನ್ನು ಪ್ರಾಣವ ಕೊಂಡದ್ದು ಹೇಳಲೊ ಕಂಸನ ಆಜ್ಞೆಯ ಮೇರೆಗೆ ಪೂತನಿ ಎಂಬ ರಾಕ್ಷಸಿ ವೇಷಮರೆಸಿಕೊಂಡು ಶ್ರೀಕೃಷ್ಣನಿಗೆ ಮೊಲೆಯೂಡಲು ಬಂದಳು, ಆಗ ಆ ಕಾರಣಿಕ ಬಾಲಕನು ಆಕೆಯ ಪ್ರಾಣವನ್ನೇ ಹೀರಿದನು (ಭಾಗವತ, x, ಅ. ೬).

ಧರಣಿ ಮಗನ ಕೊಂದು ತರುಣಿಯರನು ತಂದ ದುರುಳತನವನಿಲ್ಲಿ ಹೇಳಲೊ . ಹದಿನಾರು ಸಾವಿರ ಸ್ತ್ರೀಯರನ್ನು ಬಂಧನದಲ್ಲಿಟ್ಟಿದ್ದ ನರಕಾಸುರನನ್ನು ಶ್ರೀಕೃಷ್ಣನು ಸಂಹರಿಸಿ, ಆ ಅಬಲೆಯರನ್ನು

ತಾನು ಸಂರಕ್ಷಿಸುವ ಹೊಣೆಯನ್ನು ಹೊತ್ತನು (ಭಾಗವತ, X, ಅ ೯.)

ಜರೆಯಮಗನಿಗಂಜಿ ಪುರವ ಬಿಟ್ಟು ಹೋಗಿ ಶರಧಿಯ ಪೊಕ್ಕದ್ದು ಹೇಳಲೊ: ಜರೆಯ ಮಗನಾದ ಜರಾಸಂಧನು ಶ್ರೀಕೃಷ್ಣನ ಪರಮ ಶತ್ರುವಾಗಿದ್ದನು. ಅತನನ್ನು ನಿಗ್ರಹಿಸಲು ಸಮಯ ಕಾಯುತ್ತಿದ್ದನು. ಅವನಿಗಾಗಿ ಅಂಜಿ ಸಮುದ್ರ ಮಧ್ಯೆ ಹೊಸ ಪಟ್ಟಣವೊಂದನ್ನು (ದ್ವಾರಕಾನಗರಿ) ನಿರ್ಮಿಸಿಕೊಂಡು ಅಲ್ಲಿ ನೆಲೆಸಿದ್ದನು ಧರ್ಮರಾಜನು ರಾಜಸೂಯಯಾಗವನ್ನು ಕೈಕೊಂಡಾಗ, ಜರಾಸಂಧನನ್ನು ಭೀಮನ ಕೈಯಿಂದ ಕೊಲ್ಲಿಸಿದನು (ಪುನಾಚೂ. ಪು ೨೩೧-೨೩೨).

ಕಠಿನ ಶಬ್ದಗಳ ಅರ್ಥ: ಮರ್ಮಕರ್ಮ—ರಹಸ್ಯಕಾರ್ಯ. ಕಲ್ಲಿಯೋಗರ—ಗೋಪಾಲಕರು ತಮ್ಮ ಕಂಬಳಿಯಲ್ಲಿ ಕಟ್ಟಿಕೊಂಡು ಹೋಗುವ ಬುತ್ತಿ. ಅಂಬರ—ಆಕಾಶ. ಹಿಡಿಯವಲು—ಒಂದು ಹಿಡಿ ಅವಲಕ್ಕಿ. ಬೆಡಗತನ—ಅತಿಶಯ ಕಾನನ—ಅಡವಿ.

## ಅನುಬಂಧ ೩

# ಏಕೈಕ ಆಕರ

### ೧

ಗೋಪಿಯೊಬ್ಬಳು ಕನಸಿನಲ್ಲಿ ತನಗೆ ಕಂಡುಬಂದ ಶ್ರೀಕೃಷ್ಣನ ಸುಂದರ ಸ್ವರೂಪವನ್ನು ಮತ್ತೊಬ್ಬ ಗೆಳತಿಯೊಡನೆ ಹೇಳಿಕೊಳ್ಳುವ ಚಿತ್ರವಿಲ್ಲಿದೆ. ಒಂದೊಂದು ನುಡಿಯಲ್ಲಿಯೂ ಶ್ರೀಕೃಷ್ಣನ ಅಲಂಕಾರಗಳ ವಿವರವನ್ನೂ, ಅತನು ಗೋಪಿಯ ಮೇಲೆ ಎಂತಹ ಪ್ರಭಾವವನ್ನು ಬೀರಿರುವನೆಂಬುದನ್ನೂ ಕಾಣಬಹುದು.

ಕಠಿನ ಶಬ್ದಗಳ ಅರ್ಥ: ಆಣಿಮುತ್ತು—ದೊಡ್ಡದಾದ ಶ್ರೇಷ್ಠವಾದ ಮುತ್ತು. ಪೆಂಡೆಯ—ಕಾಲಿನ ಆಭರಣ. ಚೊಲ್ಲೆಯ—ದಂಡೆ. ಗುಂಜಿ—ಗುಲಗಂಜಿ (?) ತಿತ್ತಿ, ಮೌರಿ, ಕೊಂಬು—ಬೇರೆ ಬೇರೆ ವಾದ್ಯಗಳ ಹೆಸರು ಎಸಳು ಕಂಗಳು—ಹೂವಿನ ಎಸಳಿನಂತೆ ಆಕರ್ಷಕವಾದ ಕಣ್ಣುಗಳು. ಥಾಳ—ಕಾಂತಿ. ಶಶಿನೊಸಲು—ಚಂದ್ರನಂತೆ ಮನೋಹರವಾದ ಹಣೆ. ಬಿಂಬಾಧರ—ಪ್ರತಿಬಿಂಬಿಸುವಂತೆ ಹೊಳಪುಳ್ಳ ಕೆಳದುಟಿ. ಉಂಗುಟ < ಉಂಗುಷ್ಠ—ಕಾಲಿನ ಹೆಬ್ಬೆರಳು. ತುಂಗ ವಕ್ಷ—ಉಬ್ಬಿರುವ ಎದೆ

### ೨

ಶ್ರೀಕೃಷ್ಣನಿಗಾಗಿ ಒಂದೇ ಸಮನೆ ಹಂಬಲಿಸಿ ನಿರೀಕ್ಷಿಸುತ್ತಿರುವ ಒಬ್ಬ ಗೋಪಿಯ ಹೃದಯದ ಆತುರ ಕಾತರಗಳನ್ನು ಇಲ್ಲಿ ವಿವರಿಸಿದೆ. ಹಿಂದಿನ ದಿನ ಅತನ ಸಮಾಗಮದಿಂದ ಆದ ಸುಖ ಸಂತೋಷಗಳನ್ನು ಸ್ಮರಿಸಿಕೊಂಡು, ಆ ದಿನ ಹೊತ್ತಿಗೆ ಸರಿಯಾಗಿ ಬಾರದ ಅತನಿಗಾಗಿ ಅತಂಕ ಪಡುತ್ತಿದ್ದಾಳೆ. ಅತನು ಚಪಲಚಿತ್ತನೆಂದು ಆಕ್ಷೇಪಿಸಿ ಬೇರೆ ಎಲ್ಲಿ ಹೋಗಿರುವನೋ ಎಂದು ತವಕಪಡುತ್ತಾಳೆ. ಗೆಳತಿಯೊಂದಿಗೆ ತನ್ನ ವಿರಹವನ್ನೆಲ್ಲ ತೋಡಿಕೊಂಡು, ಒಂದು ಪಕ್ಷ ಅಂದು ಅತನು ಬಾರದಿದ್ದರೆ ತನ್ನ ಗತಿಯೇನೆಂದು ಬೆದರುವಳು 'ಕಂದರ್ಪ ಕಾಡುತಿಹನೆ ತಂದು ತೋರಿಸು ತನ್ನ ತಂದೆಯನೆಂದು ಪೂವಿಂದ ಬಾಣವ ಎಸೆವನೆ' ಎಂಬ ವಾಕ್ಯ ಅರ್ಥವತ್ತಾಗಿದೆ.

ಕಠಿನ ಶಬ್ದಗಳ ಅರ್ಥ: ಸೋಗೆಗಣ್ಣು—ನವಿಲಿನ ಕಣ್ಣಿನಂತೆ ಚಂಚಲವಾಗಿರುವುದು. ಕಾಡಿಗೆ—ಕಣ್ಣಿಗೆ ಹಚ್ಚಿಕೊಳ್ಳುವ ಕಪ್ಪು. ಇಂದುಬಿಂಬ—ಚಂದ್ರಬಿಂಬ.

೩

ಶ್ರೀಕೃಷ್ಣನ ಮೇಲಿನ ದೂರುಗಳನ್ನು ಕೇಳಿ ಕೇಳಿ ರೋಸಿಹೋಗಿದ್ದ ಗೋಪಿ, ಇತರ ಗೋಪಿಯರಿಗೆ ತನ್ನ ಕಂದನ ಪಕ್ಷವನ್ನು ವಹಿಸಿ ಉತ್ತರವೀಯುವ ಈ ಕೀರ್ತನೆ ಸ್ವಾರಸ್ಯವಾಗಿದೆ. ಆಕೆಯ ಮಗನಿಗೆ ಹೆಜ್ಜೆಯಿಡಲೇಬಾರದೆಂದ ಮೇಲೆ, ಇನ್ನು ದನದ ಕೊಟ್ಟಿಗೆಗಳಿಗೆ ಹೋಗಿ ಹಾವಳಿ ಮಾಡುವುದು ಅಸಂಭವ ಎನ್ನುವಳು. ತಾನು ಕೊಟ್ಟ ಕೆನೆಹಾಲು ಮೊಸರನ್ನೇ ಒಲ್ಲದವನು ಬೇರೆಯವರ ಮನೆಯ ಹಾಲು ಮೊಸರುಗಳಿಗೆ ಕೈಯೊಡ್ಡುವುದು ಶುದ್ಧ ಸುಳ್ಳು ಎಂದು ಆಕೆಯ ವಾದ ಮುಖ್ಯವಾಗಿ ಆ ಗೋಪಿಯರು ಅಸೂಯಾಪರರು ಎಂದು ಅವಳ ಆಕ್ಷೇಪಣೆ. ಇಲ್ಲಿ ಯಶೋದೆಯ ಮಾತೃವಾತ್ಸಲ್ಯ ಮನವೊಲಿಸುತ್ತದೆ.

ಕಠಿನ ಶಬ್ದಗಳ ಅರ್ಥ : ದಟ್ಟಡಿ—ತಪ್ಪು ಹೆಜ್ಜೆ. ಗೋವತ್ಸ—ಕರು ಗೊತ್ತು (ಗೊಂತು)—ಕೊಟ್ಟಿಗೆಯಲ್ಲಿ ದನಗಳನ್ನು ಕಟ್ಟುವ ಸ್ಥಳ ರಾಳಿ—ಸುಳ್ಳು, ತಟವಟ

೪

ಜನರು ಸಂಸಾರದ ವ್ಯಾಮೋಹಕ್ಕೆ ಹೇಗೆ ಬದ್ಧರಾಗಿ ತೊಳಲುವರೆಂಬುದನ್ನು ಇಲ್ಲಿ ಚಿತ್ರಿಸಿದೆ. ಪ್ರತಿಯೊಂದು ನುಡಿಯಲ್ಲಿಯೂ ಮನುಷ್ಯರ ಆಸೆ ಆಕಾಂಕ್ಷೆಗಳ ಸ್ವರೂಪವನ್ನೂ ಅದಕ್ಕಾಗಿ ಅವರು ಪಡುವ ಸಂಕಷ್ಟವನ್ನೂ ಬಿಡಿಸಿ ಹೇಳಿರುತ್ತಾರೆ. ಕಡೆಯದಾಗಿ, ರಂಗವಿಠಲನ ನಾಮ ಸ್ಮರಣೆಯಿಂದ ಸಂಸಾರದ ಹಗರಣವೆಲ್ಲವೂ ನೀರಗುಳ್ಳೆಯಂತೆ ನಿವಾರಣೆಯಾಗುವುದೆಂದು ಉಪದೇಶಿಸುವರು

ಕಠಿನ ಶಬ್ದಗಳ ಅರ್ಥ : ಓದಿಕೆ—ವಿದ್ಯೆ. ಹೂಣಿಕೆ—ಪ್ರತಿಜ್ಞೆ (ಪೂಣ್ಕೆ > ಹೂಣಿಕೆ). ಹೊಲಬು—ದಾರಿ ಖಗವಾಹನ—ಗರುಡವಾಹನ ವಿಗಡ—ತೊಂದರೆ. ಹಗರಣ—ರಗಳೆ.

೫

ಲಕ್ಷ್ಮೀದೇವಿ ತನಗೆ ಅನುರೂಪನಲ್ಲದ ವಾಸುದೇವನನ್ನು ಏಕೆ ವರಿಸಿದಳೆಂದು ದಾಸರು ಆಕೆಯನ್ನು ಹಂಗಿಸುತ್ತಾರೆ. ಇದು ಶ್ರೀಕೃಷ್ಣನ ರೂಪ ಮತ್ತು ಅವನ ಲೀಲೆಗಳನ್ನು ನಿಂದಾಸ್ತುತಿಯ ಮೂಲಕ ಚಿತ್ರಿಸಿರುವ ಒಂದು ಕೃತಿ ಗೋಕುಲದಲ್ಲಿ ಅವನು ಮಾಡಿದ ಹಾವಳಿಗಳನ್ನೂ, ಸೋದರಮಾವನ ಸಂಹಾರ ಮತ್ತು ಆದಿಶೇಷನ ಮೇಲೆ ಆವನು ಪವಡಿಸಿರುವುದನ್ನೂ ವ್ಯಂಗ್ಯವಾಗಿ ವರ್ಣಿಸಿದೆ.

ಕಠಿನ ಶಬ್ದಗಳ ಅರ್ಥ : ನೀಲವರ್ಣ—ಕಂದಾದ ಕಪ್ಪುಬಣ್ಣ. ಚಟ್ಟಿ—ಮಣ್ಣಿನ ಗಡಿಗೆ. ಸೋಳಸಾಸಿರ—ಹದಿನಾರು ಸಾವಿರ.

೬

ಮನ್ಮಥನ ತಂದೆಯಾದ ಶ್ರೀಕೃಷ್ಣನು ನಿರ್ವಹಿಸಿದ ಮಹಿಮೆಗಳನ್ನು ನೆನೆನೆನೆದು ಆ ಪರಮಾತ್ಮನನ್ನು ಹೇಗೆ ವರ್ಣಿಸುವುದೆಂದು ದಾಸರು ಅತಿಶಯಪಡುತ್ತಾರೆ. ಶ್ರೀಕೃಷ್ಣನು ಅರ್ಜುನನ ರಥದ ಸಾರಥಿಯಾದದ್ದು, ಶ್ರೀವಿಷ್ಣು ನರಸಿಂಹಾವತಾರವೆತ್ತಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತ ಪ್ರಹ್ಲಾದನನ್ನು ಸಂರಕ್ಷಿಸಿದ್ದು, ಇಂದ್ರ ಮೊದಲಾದವರಿಂದ ಪೂಜೆ ಪಡೆದದ್ದು, ಅಂಬರೀಷ ಮತ್ತು ದ್ರೌಪದಿಯನ್ನು ಕಷ್ಟಕಾಲದಲ್ಲಿ ಕಾಪಾಡಿದ್ದು, ಇವೇ ಮೊದಲಾದ ಘಟನೆಗಳು ಇಲ್ಲಿ ಉಕ್ತವಾಗಿವೆ.

ಕಠಿನ ಶಬ್ದಗಳ ಅರ್ಥ : ಕಂತುಪಿತ—ಶ್ರೀವಿಷ್ಣು (ಶ್ರೀಕೃಷ್ಣ) ಕುಂತೀಪುತ್ರ—(ಪ್ರಕೃತದಲ್ಲಿ) ಅರ್ಜುನ. ಅಂತಕ—ಯಮ. ಸಿಂಧುಶಾಯಿ—ಸಮುದ್ರದಲ್ಲಿ ಮಲಗಿರುವವನು ಜಂಭ

ವೈರಿ—ಇಂದ್ರ. ಸುರಕದಂಬ—ದೇವತೆಗಳ ಸಮೂಹ ಅಂಘ್ರಿಯುಗಳ—ಎರಡು ಪಾದಗಳು. ತುಂಗವಿಕ್ರಮ—ಉನ್ನತವಾದ ಬಲಶಾಲಿ

೭

ಪರಮಾತ್ಮನ ಮಾಹಾತ್ಮ್ಯವನ್ನು ಅರ್ಥಮಾಡಿಕೊಳ್ಳಲಾರದ ದುರಾತ್ಮರಿಗೆ ಎಂದೆಂದಿಗೂ ಸುಖವಿಲ್ಲವೆಂಬುದನ್ನು ಈ ಉಗಾಭೋಗದಲ್ಲಿ ತಿಳಿಸಿದೆ. 'ಕಂಬಳಿಯ ಬುತ್ತಿಯಲಿ ಕಸವ ನಾರಿಸುವರುಂಟೆ?' ಎಂಬ ಹೇಳಿಕೆ ಮತ್ತಷ್ಟು ಸ್ಪಷ್ಟವಾಗಿರಬೇಕು ಎನ್ನಿಸುತ್ತದೆ. ಬಹುಶಃ, "ಕಂಬಳಿಯಲ್ಲಿ ಕಟ್ಟಿದ ಬುತ್ತಿಯಲ್ಲಿ ಕಸವನಾರಿಸುವರುಂಟೆ? ಅದನ್ನು ಆರಿಸಿ ತೆಗೆಯಲು ಸಾಧ್ಯವೆ?" ಎಂಬ ಅರ್ಥವಿದ್ದರೂ ಇರಬಹುದು. ಪ್ರಕೃತದಲ್ಲಿ ಡಾಂಭಿಕ ಭಕ್ತರು ಎಂದೆಂದಿಗೂ ಬಾಹಿರರೆಂದು ಹೇಳಿದೆ ರಂಗವಿಠಲನ ಪಾದಪದ್ಮದಲ್ಲಿ ದುಂಬಿಯಂತೆ ಸುಳಿಯಲರಿಯದವರಿಗೆ ಎಂದೆಂದಿಗೂ ಸುಖವಿಲ್ಲವೆಂದು ಕೊನೆಯಲ್ಲಿ ಹೇಳಿದೆ.

ಕಠಿನ ಶಬ್ದಗಳ ಅರ್ಥ· ಉದರಂಭರ—ಹೊಟ್ಟೆಯ ಪಾಡು ಶಂಬರಾಂತಕ—ಪ್ರದ್ಯುಮ್ನ. ಶಂಬರಾಸುರ· ಶ್ರೀಕೃಷ್ಣನ ಮಗನಿಂದ ತನಗೆ ಮರಣ ಪ್ರಾಪ್ತವಾಗುವುದೆಂಬುದನ್ನು ತಿಳಿದ ಶಂಬರಾಸುರನು ರುಕ್ಮಿಣಿಯ ಹೊಟ್ಟೆಯಲ್ಲಿ ಶಿಶುವಾದ ಪ್ರದ್ಯುಮ್ನನು ಹುಟ್ಟುವುದೇ ತಡ, ಅವನನ್ನು ತನ್ನ ಮಾಯಾವಿದ್ಯೆಯಿಂದ ಅಪಹರಿಸಿಕೊಂಡು ಹೋಗಿ ಸಮುದ್ರದಲ್ಲಿ ಎಸೆದನು. ಆ ಮಗು ಒಂದು ಮತ್ಸ್ಯದ ಹೊಟ್ಟೆಯಲ್ಲಿ ಬೆಳೆಯಲಾರಂಭಿಸಿತು. ಒಮ್ಮೆ ಅದೇ ಮತ್ಸ್ಯವನ್ನು ಶಂಬರಾಸುರನ ಅಡಿಗೆಯ ಮನೆಗೆ ತಂದು, ಹೊಟ್ಟೆಯನ್ನು ಬಗೆದಾಗ ಮುದ್ದಾದ ಮಗು ಕಂಡು ಬಂದಿತು. ಅದನ್ನು ರಾಣಿಯಾದ ಮಾಯಾವತಿ ಸಾಕತೊಡಗಿದಳು ಕಡೆಗೆ ಆ ಮಗು ದೊಡ್ಡವನಾಗಿ ಶಂಬರಾಸುರನನ್ನು ಸಂಹರಿಸಿದನು ಆವನ ಪೂರ್ವವೃತ್ತಾಂತವೆಲ್ಲ ತಿಳಿದ ಬಳಿಕ ರುಕ್ಮಿಣಿ ತನ್ನ ಮಗನನ್ನು ಸ್ವೀಕರಿಸಿ ಸಮಾಧಾನಗೊಂಡಳು (ಪುನಾಚೂ. ಪು. ೪೦೨). ಈ ಕಥಾವೃತ್ತಾಂತವನ್ನು ಕನಕದಾಸರು ತಮ್ಮ 'ಮೋಹನ ತರಂಗಿಣಿ'ಯಲ್ಲಿ ವಿವರವಾಗಿ ಪ್ರತಿಪಾದಿಸಿರುತ್ತಾರೆ ಬಂಬಿಡದೆ—ಅನುಸರಿಸದೆ.

೮

ಹರಿಯ ಗುಣವನ್ನು ಕೊಂಡಾಡಿದವರಿಗೆ ಜನ್ಮ ಸಾರ್ಥಕವಾಗುವುದೆಂಬ ತತ್ತ್ವವನ್ನು ಈ ರಚನೆಯಲ್ಲಿ ಪ್ರತಿಪಾದಿಸಿದೆ ಇದಕ್ಕೆ ನಿದರ್ಶನವಾಗಿ ವಾಲ್ಮೀಕಿ, ಅಹಲ್ಯೆ, ಶಬರಿ, ದೇವತೆಗಳು ಮೊದಲಾದವರ ಸಂಗತಿಗಳನ್ನು ತಿಳಿಸಿದೆ ಬೇಡನು ರಾಮನಾಮ ಸ್ಮರಣೆಯಿಂದ ವಾಲ್ಮೀಕಿಯೆನ್ನಿಸಿದನು. ಗೌತಮ ಋಷಿಗಳ ಪತ್ನಿಯಾದ ಅಹಲ್ಯೆ ತನ್ನ ಗಂಡನ ಶಾಪದಿಂದ ಶಿಲೆಯಾಗಿ ಬಿದ್ದಿದ್ದವಳು ಶ್ರೀರಾಮನ ಪಾದಸ್ಪರ್ಶದಿಂದ ಮತ್ತೆ ಹೆಣ್ಣಾದಳು. ಮತಂಗ ಋಷಿಗಳ ಶಿಷ್ಯೆಯಾದ ಕಡುಬಡವೆ ಶಬರಿ ತಾನು ತಿಂದು ಉಳಿದ ಫಲದಾನದಿಂದ ಶ್ರೀರಾಮನ ಅನುಗ್ರಹಕ್ಕೆ ಪಾತ್ರಳಾದಳು. ದೇವತೆಗಳ ಮೊರೆ ಕೇಳಿ ಶ್ರೀರಾಮನು ದುಷ್ಟರಾವಣನನ್ನು ಸಂಹರಿಸಿದನು. ಒಟ್ಟಿನಲ್ಲಿ, ಯಾರು ದೇವರಲ್ಲಿ ಅಚಲವಾದ ವಿಶ್ವಾಸವನ್ನು ಇಡುವರೋ ಅವರು ತಮ್ಮ ಪಾಪಗಳಿಂದ ಮುಕ್ತರಾಗಿ ಉದ್ಧಾರರಾಗುವರು

ಕಠಿನ ಶಬ್ದಗಳ ಅರ್ಥ ಕಿರಾತ—ಬೇಡ. ಕೋವಿದ—ಪಂಡಿತ ಪಾದರಜ—ಕಾಲಿನ ಧೂಳು. ಅಘ—ಪಾಪ

೯

ಇದು ಈಶ್ವರನ ವೇಷಭೂಷಣಗಳನ್ನು ಕುರಿತ ಒಂದು ಕೀರ್ತನೆ ಪೋರನಾದ ಶ್ರೀಕೃಷ್ಣ

ನನ್ನು ಹೆದರಿಸುವ ಸರಣಿಯಲ್ಲಿ ಇಲ್ಲಿ ವರ್ಣನೆ ಸಾಗುತ್ತದೆ. ರುದ್ರನು ಸರ್ವೋತ್ತಮನಾದ ಶ್ರೀಹರಿಯ ಸೇವೆಗೆ ಬದ್ಧನಾಗಿರುವುದರಿಂದ ಆ ಭಾವವನ್ನು ಇಲ್ಲಿ ಮೇಲಿಂದ ಮೇಲೆ ತಿಳಿಸಿದೆ.

ಕಠಿನ ಶಬ್ದಗಳ ಅರ್ಥ ದುರ್ಜನ—ತುಂಟಾಟ (?). ಪುಲಿತೊವಲು—ಹುಲಿಯ ಚರ್ಮ. ಕಾಮಾಕ್ಷಿ—ಪಾರ್ವತಿ ಕಪಾಲ—ಬ್ರಹ್ಮನ ತಲೆಯೋಡನ್ನು ಭಿಕ್ಷೆ ಬೇಡುವುದಕ್ಕಾಗಿ ಬಳಸುವನು. ಹಾವುಗೆ—ಪಾದುಕೆ ಬಾಹುಪುರಿ—ತೋಳಬಂದಿ. ಉರ—ಎದೆ ಜಂಗನು—ಚಲಿಸು ಗುಜ್ಜರ < ಘೂರ್ಜರ—ಮರಾಠ.

## ೧೦

ಶ್ರೀಕೃಷ್ಣನಿಗಾಗಿ ಹಂಬಲಿಸುತ್ತಿದ್ದ ಗೋಪಿಯೊಬ್ಬಳನ್ನು ಆಕೆಯ ಗೆಳತಿ ಸಂತೈಸುವುದೇ ಈ ಕೃತಿಯ ತಿರುಳು. ತಾನು ಆತನನ್ನು ಕರೆತರುವುದಾಗಿ ಭರವಸೆಯಿತ್ತು, ಆ ಪರಮಾತ್ಮನು ಬಂದಾಗ ಹೇಗೆ ಒಲಿಸಿಕೊಳ್ಳಬೇಕೆಂಬುದನ್ನು ತಿಳಿಸುವಳು ಶೃಂಗಾರರಸಕ್ಕೆ ಪೋಷಕವಾಗುವಂತಹ ಇಲ್ಲಿನ ಸನ್ನಿವೇಶದ ಕಲ್ಪನೆ ಸುಂದರವಾಗಿದೆ.

ಕಠಿನ ಶಬ್ದಗಳ ಅರ್ಥ ಕಂತುಪಿತ—ಮನ್ಮಥನ ತಂದೆಯಾದ ಶ್ರೀಕೃಷ್ಣ ನಂದ—ಆನಂದ, ಸಂತೋಷ. ಕಂಧರ—ಕೊರಳು ಆಸನ—ಪೀಠ. ಕಮಲಾಸನನ ಪಿತ—ಬ್ರಹ್ಮನ ತಂದೆ ಮಾಧ್ವಸಂಪ್ರದಾಯದ ಪ್ರಕಾರ ಬ್ರಹ್ಮ ಶ್ರೀವಿಷ್ಣುವಿನ ಮಗ. ಬ್ರಹ್ಮ ಮತ್ತು ವಾಯುಗಳು ಸಮಾನ ಕಕ್ಷದಲ್ಲಿರುವವರು ತಬಕ—ತಟ್ಟೆ ವಾಸನೆಗಳನೆ ತೊಟ್ಟು—ಸುಗಂಧ ಲೇಪನದಿಂದ. ಅಧರ—ಕೆಳದುಟಿ ಕಂತುಕೇಳಿ—ರತಿಕ್ರೀಡೆ.

## ೧೧

ಶ್ರೀವಿಷ್ಣುವಿಗೆ ಹಾಡಿರುವ ಒಂದು ಮಂಗಳ ಗೀತೆ ಸುಮಂಗಲೆಯರು ಹರಿಗೆ ಆರತಿ ಎತ್ತಿದ ವೈಭವವನ್ನು ಇಲ್ಲಿ ಚಿತ್ರಿಸಲಾಗಿದೆ.

ಕಠಿನ ಶಬ್ದಗಳ ಅರ್ಥ. ಉತ್ತುಂಗ—ಶ್ರೇಷ್ಠ, ಉನ್ನತ. ಸಿಂಗರ—ಶೃಂಗಾರ. ಧವಳ—ಬಿಳುಪು, ಕಾಂತಿ ಇತ್ತರದಿ—ಎರಡು ಕಡೆ ಚಿತ್ತಿಣಿ—ಒಂದು ತೆರನಾದ ಸ್ತ್ರೀಜಾತಿ (ಹಸ್ತಿನಿ, ಚಿತ್ತಿನಿ, ಪದ್ಮಿನಿ, ಶಂಕಿನಿ) ಅರಸತ್ತಿಗೆ—ಶ್ವೇತಛತ್ರಿ ಮೃಡಸಖ—ಈಶ್ವರನ ಮಿತ್ರ (ಮಾಧ್ವ ಸಂಪ್ರದಾಯದ ಕಕ್ಷದ ಮೇರೆಗೆ ರುದ್ರ ಮೊಮ್ಮಗ) ಇಭಪತಿ—ಗಜೇಂದ್ರ.

## ೧೨

ಇದೊಂದು ಮನೋಹರವಾದ ವೇಣುಗೀತೆ ಶ್ರೀಕೃಷ್ಣನು ಕೊಳಲೂದಲು ಅದರ ಮಾಧುರ್ಯಕ್ಕೆ ಗೋಕುಲದಲ್ಲಿದ್ದ ಗೋಪಿಯರೆಲ್ಲ ಹೇಗೆ ಮರುಳಾದರು ಎಂಬ ನಿರೂಪಣೆ ಇಲ್ಲಿದೆ. ನುಡಿನುಡಿಯಲ್ಲಿಯೂ ಗೋಪಿಯರು ಆ ನಾದಸಂಭ್ರಮದಲ್ಲಿ ಹೇಗೆ ಮೈಮರೆತು ತಬ್ಬಿಬ್ಬಾದರು ಎನ್ನುವುದನ್ನು ವರ್ಣಿಸಿದೆ

ಕಠಿನ ಶಬ್ದಗಳ ಅರ್ಥ : ತುರುಗಾಯ ಬಂದ—ದನವನ್ನು ಕಾಯಲು ಬಂದ. ಅಳವಡು—ಹೊಂದಿಸು. ಕಂದರ್ಪ—ಮನ್ಮಥ ಶರ—ಬಾಣ. ಮಾರ್ಜಾಲ—ಬೆಕ್ಕು.

## ೧೩

ಶ್ರೀಕೃಷ್ಣನು ಮಧುರೆಗೆ ಹೋಗಲು ಅವನ ಅಗಲಿಕೆಯನ್ನು ಸಹಿಸಲಾರದ ಗೋಕುಲದ ಗೋಪಿಯರು, ಆತನ ಲೀಲೆಗಳನ್ನು ಸ್ಮರಿಸಿಕೊಂಡು ಸಂಕಟಪಡುವರು. ಶ್ರೀಕೃಷ್ಣನ ಬಾಲಲೀಲೆ ಮಾತ್ರವಲ್ಲದೆ, ತ್ರಿಮೂರ್ತಿಗಳೆಲ್ಲರೂ ಕೂಡಿ ಮೆರೆದ ಒಂದು ಮಹಿಮೆಯೂ ನಾಲ್ಕನೆಯ

ನುಡಿಯಲ್ಲಿ ಉಕ್ತವಾಗಿದೆ. ಕಡೆಯ ನುಡಿಯಲ್ಲಿ ಶ್ರೀಹರಿ ಹೇಗೆ ಸ್ವತಂತ್ರನೆನ್ನಿಸಿ ಸ್ವರಮಣನಾಗಿರುವನೆಂಬ ಅಂಶವನ್ನೂ ಇಲ್ಲಿ ತಿಳಿಸಿದೆ.

ಅರ್ಥ ವಿವರ. ನುಡಿ ೧ ಈ ನುಡಿಯಲ್ಲಿ ಪೂತನಿಯ ಸಂಹಾರ, ತೃಣಾಸುರನ ವಧೆ ಮತ್ತು ಶಕಟಾಸುರನ ಸಂಹಾರಗಳನ್ನು ಉಲ್ಲೇಖಿಸಿದೆ. ವ್ರಜ—ಗೋಕುಲ.

ನುಡಿ ೨. ಇಲ್ಲಿ ಮಧುರೆಯಲ್ಲಿ ಬಿಲ್ಲನ್ನು ಮುರಿದುದನ್ನೂ, ಅನಂತರ ಕಂಸನ ಸಂಹಾರ ಮಾಡಿದುದನ್ನೂ ತಿಳಿಸಿದೆ. ನಲ್ಲೆಯ ಕರಪಿಡಿದು. ಈ ಸನ್ನಿವೇಶದಲ್ಲಿ ಇದರ ಅರ್ಥ ಸ್ವಲ್ಪ ತೊಡಕಾಗಿದೆ. ಶ್ರೀಕೃಷ್ಣನು ಮಧುರೆಗೆ ಪ್ರವೇಶಿಸುವಲ್ಲಿ ಕುಬ್ಜೆಯನ್ನು ಕಂಡು, ಆಕೆಯ ಕೈಯಿಂದ ಗಂಧವನ್ನು ತೆಗೆದುಕೊಂಡು, ಸುಪ್ರೀತನಾಗಿ, ಅವಳ ಅಂಗವಿಕಾರವನ್ನು ಹೋಗಲಾಡಿಸುತ್ತಾನೆ. ಇದು ಈ ಸಂಗತಿಯನ್ನು ಕುರಿತ ಮಾತಿರಬಹುದೆ? ಅನುಜನ ಕರೆದು (?)—ಇದು ಅಣ್ಣನಾದ ಬಲರಾಮನನ್ನು ಕುರಿತುದಾಗಿರಬೇಕು

ನುಡಿ ೩: ಅಕ್ರೂರನು ಗೋಕುಲಕ್ಕೆ ಬಂದು ಶ್ರೀಕೃಷ್ಣನನ್ನು ಮಧುರೆಗೆ ಕರೆದೊಯ್ದ ವೃತ್ತಾಂತವಿದೆ.

ನುಡಿ ೪: ಈ ನುಡಿಯಲ್ಲಿ ಅನಸೂಯೆಯ ಮಾಹಾತ್ಮ್ಯೆಯನ್ನು ಚಿತ್ರಿಸಿದೆ. ಅತ್ರಿಮುನಿಗಳ ಪತ್ನಿಯಾದ ಅನಸೂಯೆ ಪರಮ ಪತಿವ್ರತೆಯೆಂದು ವಿಖ್ಯಾತಿ ಪಡೆದಿದ್ದಳು. ಆಕೆಯ ಪ್ರಭಾವದಿಂದ ಒಮ್ಮೆ ಮಳೆಯೂ ಬಂದಿತೆಂದು ರಾಮಾಯಣದಲ್ಲಿ ಹೇಳಲಾಗಿದೆ. ಈ ಪತಿವ್ರತೆಯ ವಿಷಯ ನಾರದರ ಮೂಲಕ ದೇವಲೋಕಕ್ಕೂ ವ್ಯಾಪಿಸಲು, ಆಗ ತ್ರಿಮೂರ್ತಿಗಳಾದ ಹರಿ, ಹರ, ಬ್ರಹ್ಮಾದಿಗಳು ಆಕೆಯ ಪರೀಕ್ಷಾರ್ಥವಾಗಿ ಭೂಲೋಕಕ್ಕೆ ಬಂದರು. ಋಷಿವೇಷವನ್ನು ಧರಿಸಿ ಅನಸೂಯೆಯ ಬಳಿಗೆ ಬಂದು, ಒಂದು ವ್ರತನಿಮಿತ್ತವಾಗಿ ಆಕೆ ತಮಗೆ ನಗ್ನಳಾಗಿ ಉಣಬಡಿಸಬೇಕೆಂದು ಪ್ರಾರ್ಥಿಸಿಕೊಂಡರು. ಅನಸೂಯೆ ತನ್ನ ಪಾತಿವ್ರತ್ಯದಿಂದ ಆ ಮೂವರನ್ನೂ ಶಿಶುಗಳಂತೆ ಮಾರ್ಪಡಿಸಿ, ಅತಿಥಿ ಸೇವೆಯನ್ನು ನಿರ್ವಹಿಸಿದಳು ಆಗ ತ್ರಿಮೂರ್ತಿಗಳಿಗೆ ಆಕೆಯ ಮಹತ್ವದ ಅರಿವಾಗಿ, ಆಕೆಗೆ ದತ್ತಾತ್ರೇಯ, ಚಂದ್ರ ಮತ್ತು ದುರ್ವಾಸರೆಂಬ ತಪೋಮಹಿಮರು ಮಕ್ಕಳಾಗುವಂತೆ ಅನುಗ್ರಹಿಸಿದರು. ಪ್ರಕೃತದಲ್ಲಿ ದಾಸರು ತ್ರಿಮೂರ್ತಿಗಳು ಮಕ್ಕಳಾದುದನ್ನೂ, ಋಷಿಪತ್ನಿ ಹಲಸಿನ ಎಲೆಯಲ್ಲಿ ಮಾಡಿದ ದೊನ್ನೆಯಲ್ಲಿ ಅವರಿಗೆ ಹಾಲನ್ನಿತ್ತ ಪರಿಯನ್ನೂ ವರ್ಣಿಸಿರುವರು.

ನುಡಿ ೫. ಸ್ವಾಮಿಯನ್ನು ಕಂಡರೆ ಗೋಪಿಯರಿಗೆ ಎಲ್ಲಿಲ್ಲದ ಪ್ರೇಮ. ಆದರೆ ಆ ಹೆಂಗಸರಿಂದಾಗಲಿ, ಕಡೆಗೆ ಪರಮಾತ್ಮನ ಪತ್ನಿಯಾದ ಲಕ್ಷ್ಮಿಯಿಂದಾಗಲಿ ದೇವರಿಗೆ ಆಗಬೇಕಾದುದೇನೂ ಇಲ್ಲ. ಏಕೆಂದರೆ ಅವನು 'ಸ್ವರಮಣ' ಅಂಶವುಳ್ಳವನು 'ಇಂದಿರೆಯು ಕಾರಣಗಳಲ್ಲವೋ ನಿಂಗೆ ನೀನೆ ಸ್ವರಮಣನು': ಇದು ಶ್ರೀಮಧ್ವಾಚಾರ್ಯ ವಿರಚಿತ "ಲಕ್ಷ್ಮೀ ಭುಜಾಂತರಗತಃ ಸ್ವರತೋಽಪಿಚಾಗ್ರೇ" ಎಂಬ ವಾಕ್ಯದ ಅನುವಾದ (ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ, ಅ. I, ಪ. ೨) ಮಾರಜನಕ—ಮನ್ಮಥನ ತಂದೆ ರಾಜೀವಾಕ್ಷ—ತಾವರೆಯಂತೆ ಕಣ್ಣುಳ್ಳವನು.

## ೧೪

ತಮ್ಮನ್ನು ತಾವೇ ಭಗವಂತನಿಗೆ ಸಮರ್ಪಿಸಿಕೊಂಡಿರುವ ಹರಿದಾಸರಿಗೆ ತಾವು ಕೈಕೊಳ್ಳುವ ಸಮಸ್ತ ಕಾರ್ಯವೂ ಪರಮಾತ್ಮನ ಕೈಂಕರ್ಯವೆನ್ನಿಸುವುದು. ಆದಕ್ಕಾಗಿ "ನಿನ್ನ ಪೂಜೆ ಹೊರತಿಲ್ಲ ಎನ್ನ ವ್ಯಾಪಾರವೆಲ್ಲ" ಎಂಬ ಅನುಪಲ್ಲವಿ ತುಂಬ ಅರ್ಥವತ್ತಾಗಿದೆ. ಈ ಕೀರ್ತನೆಯ ಮೊದಲನೆಯ ನುಡಿಯಲ್ಲಿ ಹರಿಭಕ್ತನ ನಿತ್ಯಚರ್ಯೆಗಳನ್ನೆಲ್ಲ ವಿವರಿಸಿದೆ. ಆತನ ಸ್ನಾನ ಸಂಧ್ಯಾವಂದನೆ ಮೊದಲ್ಗೊಂಡು ಭೋಗಾದಿಗಳೆಲ್ಲ ಭಗವಂತನಿಗೇ ಮೀಸಲು ಎಂಬ ದೃಷ್ಟಿ

ಗಹನವಾಗಿದೆ. ಭಗವದ್ಗೀತೆಯಲ್ಲಿ ಉಕ್ತವಾಗಿರುವ "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ" (ಅ ix, ಶ್ಲೋ. ೨೭) ಎಂಬ ಸುಪ್ರಸಿದ್ಧ ಹೇಳಿಕೆಯ ತತ್ತ್ವವೆಲ್ಲ ಇಲ್ಲಿ ಅಡಕವಾಗಿದೆ.

ಸರ್ವೇಂದ್ರಿಯಗಳಲಿಹ ಶರ್ವಾದಿ ದೇವರ್ಕಳಿಗೆ ಸರ್ವಚೇಷ್ಟಾಪ್ರದನಾದ ಪ್ರಾಣಗೆ ನಿರ್ವಾಹಕವಾಗಿ : ನಮ್ಮ ಶರೀರದಲ್ಲಿ ಅಭಿಮಾನಿ ದೇವತೆಗಳೆನ್ನಿಸಿ ಆಯಾ ಇಂದ್ರಿಯದ ಕಾರ್ಯಗಳನ್ನು ನಿರ್ವಹಿಸುತ್ತಿರುವ ಇಪ್ಪತ್ತುನಾಲ್ಕು ತತ್ತ್ವಗಳಿಗೆ ಶ್ರೀಹರಿಯೇ ಮುಖ್ಯ ಪ್ರೇರಕನು. ಜೀವೋತ್ತಮರಾದ ವಾಯುದೇವರಿಗೂ ದೇವೋತ್ತಮನಾದ ಶ್ರೀಹರಿಯೇ ಪ್ರಧಾನ ನಿರ್ವಾಹಕನು. ಶ್ರೀಹರಿ ಜೀವಿಗಳ ಕೈಯಿಂದ ನಾನಾ ಕರ್ಮಗಳನ್ನು ಮಾಡಿಸುವನಾದಾಗೂ ಅವನು ಆ ಕರ್ಮಫಲಕ್ಕೆ ಹೊಣೆಯಾಗುವುದಿಲ್ಲವೆಂದು ಒಮ್ಮೊಮ್ಮೆ ಹೇಳುವುದುಂಟು. ಆದರೆ ಶುಭಫಲ ಪ್ರಾಪ್ತವಾಗುವಲ್ಲಿ ಅದನ್ನು ಮಾತ್ರ ಸ್ವೀಕರಿಸುವನು ಎಂದು ಎರಡನೆಯ ನುಡಿಯಲ್ಲಿ ಪ್ರತಿಪಾದಿಸಲಾಗಿದೆ. ಈ ಅಭಿಪ್ರಾಯ "ಅನಂತೇಂದ್ರಿಯ ಸಂಭೋಗ್ಯಾನ್ ಅತರ್ಕ್ಯಾಂಶ್ಚ ರಮಾದಿಭಿಃ । ಪೃಥಕ್ ಪೃಥಗನಂತಾಂಸ್ತಾನ್ ವಿಜಾತೀಯಾಂಶ್ಚ ಸರ್ವತಃ । ಸ್ವಯಮೇವ ಹರಿರ್ಭುಂಕ್ತೇ ಸರ್ವಾನ್ ಸರ್ವ ವಿಲಕ್ಷಣಾನ್ ॥" ಎಂಬ ಶ್ರೀಮಧ್ವಾಚಾರ್ಯರ ವಿವರಣೆಯನ್ನೇ ಹೋಲುವಂತಿದೆ. ಕಡೆಯ ನುಡಿಯಲ್ಲಿ ಶ್ರೀವಿಷ್ಣುವಿನ ರೂಪಮಾಹಾತ್ಮ್ಯೆಯನ್ನು ತಿಳಿಸಿ, ತಮ್ಮನ್ನು ಅನುಗ್ರಹಿಸಬೇಕೆಂದು ಬೇಡಿಕೊಳ್ಳುವರು.

ಕಠಿನ ಶಬ್ದಗಳ ಅರ್ಥ : ಶರ್ವ — ಈಶ್ವರ. ಸರ್ವಶುಭಭೋಕ — ಎಲ್ಲ ಶುಭಗಳ ಸಾರವನ್ನೂ ಸವಿಯುವವನು. ಉಂಗುಷ್ಠ — ಕಾಲ ಹೆಬ್ಬೆರಳು

## ೧೫

ಶ್ರೀಕೃಷ್ಣನ ತುಂಟಾಟಗಳಿಗೆ ಬೇಸತ್ತ ಗೋಪಿಯರು ಯಶೋದೆಯಲ್ಲಿ ದೂರು ಹೇಳುವುದೇ ಇಲ್ಲಿನ ಮುಖ್ಯವಸ್ತು. ಕಂಡವರ ಮನೆಯಲ್ಲಿ ಹಾಲು, ಬೆಣ್ಣೆಗಳನ್ನು ಕದಿಯುವುದು, ಗೋಪಿಯರ ಕೊಡಗಳನ್ನು ಒಡೆಯುವುದು, ದೊಡ್ಡ ದೊಡ್ಡ ಹೆಂಗಸರೊಂದಿಗೆ ಚೇಷ್ಟೆ ಇವೇ ಮೊದಲಾದುವು ಒಂದನೆಯ ನುಡಿಯಲ್ಲಿ ನಿರೂಪಿತವಾಗಿವೆ. ಯಮುನಾ ನದಿಯ ತೀರದಲ್ಲಿ, ಗೋಪಿಯರ ಸೀರೆಗಳನ್ನು ಅಪಹರಿಸಿ, ಮರ ಹತ್ತಿ ಕುಳಿತು, ಅವರನ್ನು ಕೋಟಲೆಗೊಳಿಸುವುದು ಎರಡನೆಯ ನುಡಿಯ ವಿಷಯ. ಗೋಪಿಯರು ನಿದ್ದೆ ಮಾಡುತ್ತಿದ್ದಾಗ ಆಯಾ ಗೋಪಿಯ ಇನಿಯರಂತೆ ತೋರಿ ಅವರೆಲ್ಲರನ್ನೂ ಮರಳು ಮಾಡಿದ್ದು ಮೂರನೆಯ ನುಡಿಯ ತಿರುಳು. ಕೀರ್ತನೆ ಸಾಕಷ್ಟು ಶಿಥಿಲವಾಗಿ ಹೋಗಿದೆ.

ಕಠಿನ ಶಬ್ದಗಳ ಅರ್ಥ ಹೆಬ್ಬಾಲೆಯರು — ದೊಡ್ಡ ಹೆಂಗಸರು. (ಹಿರಿದು + ಬಾಲೆ: ಅರಿಸಮಾಸ.) ಸರುಹೊತ್ತು — ನಡುರಾತ್ರಿ.

## ೧೬

ಈ ಜನ್ಮವೆಂಬ ಅರಣ್ಯದಿಂದ ಪಾರಾಗಲು ಶ್ರೀಹರಿಯ ನಾಮಸ್ಮರಣೆಯೊಂದೇ ಕಾರಣವೆನ್ನುವುದೇ ಇಲ್ಲಿನ ಉಪದೇಶ. ಅದನ್ನು ಬಿಟ್ಟು ಬೇರಾವ ಉಪಾಯವೂ ಇಲ್ಲ. ಅದಕ್ಕಾಗಿ ದಾಸರು ರಂಗವಿಠಲನಲಿ ಮರೆಹೊಗುವರು.

## ೧೭

ಈ ಮೊದಲು ಕೆಟ್ಟು ಬಂದವರಿಗೆ ದೇವರು ರಕ್ಷಣೆ ನೀಡಿದ ಬಳಿಕ ತಮ್ಮ ಗುಣದೋಷಗಳನ್ನು ಲೆಕ್ಕಿಸುವುದು ಉಚಿತವಲ್ಲವೆಂದು ದಾಸರ ವಾದ. ತಂದೆ ತಾಯಿಗಳು ಹೇಗೆ ಮಕ್ಕಳ ಕುಂದು

ಗಳನ್ನು ಕ್ಷಮಿಸುವರೋ ಹಾಗೆಯೇ ಭಕ್ತರಾದ ತಮ್ಮನ್ನೂ ಮನ್ನಿಸಿ ಉದ್ಧಾರಮಾಡಬೇಕೆಂದು ದೇವರನ್ನು ಪ್ರಾರ್ಥಿಸಿಕೊಂಡಿರುವರು.

## ೧೮

ದೇವರು ದುರ್ಜನ ಮತ್ತು ಸಜ್ಜನರನ್ನು ಯಾವ ರೀತಿ ನಡೆಸಿಕೊಳ್ಳುವನೆಂಬುದನ್ನು ಇಲ್ಲಿ ಸಂಕ್ಷಿಪ್ತವಾಗಿ ತಿಳಿಸಿದೆ. ದುರ್ಜನರಿಗೆ ಅಪಾರವಾದ ಸಂಪತ್ತನ್ನು ಕೊಟ್ಟು, ಮಾರಿಯ ಕೋಣ ನಂತೆ ಪುಷ್ಟವಾಗಿ ಬೆಳೆಸಿ, ನರಕಕ್ಕೆ ಗುರಿಮಾಡುವನು. ಎಂದರೆ, ಅವರು ಧನಮದದಿಂದ ದುರ್ಗತಿಯನ್ನು ಪಡೆಯುವರು. ಸಾತ್ವಿಕರಾದ ತನ್ನ ಭಕ್ತರಿಗೆ ಬಡತನವನ್ನೇ ಕೊಟ್ಟರೂ, ಆ ಸಂಕಟದಿಂದ ಅವರನ್ನು ಕಾಪಾಡುವನು.

ಕಠಿನ ಶಬ್ದಗಳ ಅರ್ಥ. ಘೋರ—ಹೆಚ್ಚಾದ. ಸ್ಥೂಲ > ತೋರ. ಜನಗಳ ಉಚ್ಚಾರಣೆ ಯಲ್ಲಿ ಬತ್ತ, ಬಂಗಾರ, ದೊರೆಗಳು ಭತ್ತ, ಭಂಗಾರ, ಧೊರೆ ಎಂದು ಕೇಳಿಬರುವಂತೆ ಇಲ್ಲಿ 'ತೋರ' ಎನ್ನುವುದು ಉಚ್ಚಾರಣೆಯಲ್ಲಿ 'ಥೋರ' ಆಗಿರಬಹುದು. (ಮರಾಠಿ ಭಾಷೆಯಲ್ಲಿ 'ಥೋರ' ಎಂಬ ರೂಪವಿರುವುದಾಗಿ ತಿಳಿದುಬರುತ್ತದೆ) ಪಾರುಗಾಣಿಸು—ದಡಮುಟ್ಟಿಸು, ನಿವಾರಿಸು.

## ೧೯

ಯಶೋದೆಯ ಕಂದನಾದ ಶ್ರೀಕೃಷ್ಣನು ಕೊಳಲನ್ನು ಊದಲು ಗೋಕುಲದಲ್ಲಿ ಅದನ್ನು ಆಲಿಸಿದ ಎಲ್ಲ ಜೀವಿಗಳೂ ಹೇಗೆ ಆನಂದಪಟ್ಟವು ಎಂಬುದನ್ನು ಇಲ್ಲಿ ರಮ್ಯವಾಗಿ ಚಿತ್ರಿಸಿದೆ. ವರ್ಣನೆಯ ವಿವರದಂತೆಯೇ, ಪ್ರಾಸಮಾಧುರ್ಯಕ್ಕೆ ಮನಸೋತ ಹರಿದಾಸರು ಬಳಸಿರುವ ಭಾಷೆಯ ವೈಖರಿಯೂ ಕೀರ್ತನೆಯ ನಡೆಗೆ ಸೌಂದರ್ಯವನ್ನು ಉಂಟುಮಾಡಿದೆ. ಸ್ತ್ರೀಯರು ಭೃಂಗಾಮೃತ ತೈಲದಲ್ಲಿಯೇ ಮಿಂದು, ಸಿಂಗರಿಸಿಕೊಂಡರಂತೆ ಆ ಸಂಭ್ರಮವನ್ನು ದೇವತೆಗಳೂ ಕಂಡು ತಲೆದೂಗುವರು. ಬೇರೆಬೇರೆ ಪ್ರಾಣಿಗಳೆಲ್ಲ ಶ್ರೀಕೃಷ್ಣನ ಪಾದಗಳಿಗೆ ನಮಸ್ಕರಿಸಿ ಕೃತಾರ್ಥ ವಾದುವು ವೇದಗಳೂ ನಮಸ್ಕರಿಸಿದುವು. ಕಾಮಭಾವನೆಗಳೆಲ್ಲ ದೂರ ಸರಿದುವು. ಶ್ರೀಕೃಷ್ಣನ ಆ ಸಾರಂಗದ ಧ್ವನಿಗೆ ಋಷಿಗಳೂ ಹಿಗ್ಗಿದರು. ಗೋಪಿಯರು ಶ್ರೀಕೃಷ್ಣನಿಗೆ ಹಾಲನ್ನು ನೀಡಿ, ಪೂರ್ಣಭಕ್ತಿಯಿಂದ ನಮಸ್ಕರಿಸುತ್ತಿರಲು, ಅವರನ್ನು ಪರಮಾತ್ಮನು ಕೈಹಿಡಿದು ಮೇಲೆತ್ತುವುದೇ ತಡ ಅವರು ಭಾವಪರವಶವಾದರು. ಈ ದಿವ್ಯತೆಯನ್ನು ದ್ವಿಗುಣಗೊಳಿಸುವಂತೆ ಮೇಲಿನಿಂದ ದೇವತೆಗಳು ಹೂಮಳೆಗರೆಯುವರು. ಶ್ರೀಕೃಷ್ಣನಿಗೆ ಮನಃಪೂರ್ವಕವಾಗಿ ಸೇವೆಸಲ್ಲಿಸಿದ ಆ ಗೋಪಿಯರು ಗಂಧ ಕಸ್ತೂರಿಗಳನ್ನು ಅತನ ಕಂಠಕ್ಕೆ ಇಟ್ಟು ನಲಿಯಲು, ಪರಮಾತ್ಮನು ತನ್ನ ಕೃಪಾಕಟಾಕ್ಷವನ್ನು ಅತ್ತ ಬೀರಿದನು.

ಕಠಿನ ಶಬ್ದಗಳ ಅರ್ಥ: ಹಂಗ, ವಿಹಂಗ, ನವಿಲು, ಗಿಣಿ · ಇವು ಪಕ್ಷಿಗಳು ಭುಜಂಗ— ಹಾವು ಸಾರಂಗ—ಜಿಂಕೆಯಲ್ಲಿ ಒಂದು ಪ್ರಭೇದ. ಮಾತಂಗ—ಆನೆ. ಕುರಂಗ—ಜಿಂಕೆ. ಸಾರಂಗ—ಜಿಂಕೆಯ ಕೊಂಬನ್ನು ವಾದ್ಯವಾಗಿ ಬಳಸುವುದು. ತಾವಂಗಳು—ತಾವುಗಳು (ವಿಶಿಷ್ಟ ಪ್ರಯೋಗ) ನೆಗಹು—ಮೇಲಕ್ಕೆ ಎತ್ತು. ಸುರಂಗಳು—ಸುರರು (ವಿಶಿಷ್ಟ ಪ್ರಯೋಗ). ಮಂದ ರೋದ್ಧರ—ಕೂರ್ಮಾವತಾರವೆತ್ತಿ ಮಂದರಪರ್ವತವನ್ನು ಧರಿಸಿದ ಶ್ರೀಹರಿ. ತೋಷ—ಆನಂದ. ಕಂಧರ—ಕಂಠ. ಪುರಂಧ್ರಿಯರು—ಸುಮಂಗಲಿಯರು, ಮಾತೆಯರು.

## ೨೦

ಶ್ರೀಪಾದರಾಜರು ಇಲ್ಲಿ ಶ್ರೀರಂಗನನ್ನು ಕೊಂಡಾಡಿ ಅತನ ಸಂರಕ್ಷಣೆಯನ್ನು ಕೋರಿದ್ದಾರೆ. (ಅನುಪಲ್ಲವಿಯಲ್ಲಿ 'ದಕ್ಷಿಣಾಧೀಶ' ಎಂದೂ ಇರುವುದರಿಂದ ಇದು ಅಂತ್ಯರಂಗನೆನ್ನಿಸಿದ ಶ್ರೀರಂಗದ

ರಂಗನಾಥಸ್ವಾಮಿಯ ಸ್ತೋತ್ರವೆಂದು ಊಹಿಸಲವಕಾಶವಿದೆ. ಕಡೆಯ ನುಡಿಯಲ್ಲಿ ಶ್ರೀರಂಗ ನಿಲಯ ಎಂಬ ವಿಶೇಷಣವೂ ಇದೆ) ಒಂದೊಂದು ನುಡಿಯಲ್ಲಿಯೂ ರಂಗನಾಥನ ಗುಣ ವಿಶೇಷಗಳನ್ನು ನಿರೂಪಿಸಿದೆ

ಕಠಿನ ಶಬ್ದಗಳ ಅರ್ಥ ರವಿಕೋಟಿಸಂಕಾಶ—ಕೋಟಿಸೂರ್ಯಪ್ರಭೆಯುಳ್ಳವನು. ಪಕ್ಷಿವಾಹನ—ಗರುಡವಾಹನ ಅಕ್ಷರಾದಿ ಪಿಪೀಲಿಕಾಂತ ಸಂರಕ್ಷಕಾಮಯಹರಣ—ದೇವತೆಗಳು ಮೊದಲ್ಗೊಂಡು ಇರುವೆಯವರೆಗೂ ಪ್ರಾಣಸಂರಕ್ಷಣಮಾಡುವವನು. ಒಂದನೆಯ ನುಡಿಯಲ್ಲಿ 'ಕಮಲ' ಶಬ್ದವನ್ನು ವಿಶೇಷಣವನ್ನಾಗಿ ಬಳಸಿಕೊಂಡು ವಿವಿಧ ಬಗೆಗಳಲ್ಲಿ ಭಗವಂತನನ್ನು ಪ್ರಾರ್ಥಿಸಲಾಗಿದೆ. ಕಮಲಾರಿಸಮವಕ್ತ್ರ—ಚಂದ್ರನಂತೆ ಮುಖವುಳ್ಳವನು. ಕಮಲಾ ವಿರಚಿತ ಸ್ತೋತ್ರ—ಲಕ್ಷ್ಮಿಯಿಂದ ಸ್ತುತಿಸಲ್ಪಡುವವನು ಕರಧೃತ ಗೋತ್ರ—ಗೋವರ್ಧನಗಿರಿಯನ್ನು ಎತ್ತಿ ಹಿಡಿದವನು. ಕಮಲಜನುತಿಪಾತ್ರ—ಬ್ರಹ್ಮನಿಂದ ಸ್ತುತಿಸಲ್ಪಡುವವನು ಕರಿರಾಜಯಾತ್ರ—ಗಜೇಂದ್ರನಿಗೆ ಆಶ್ರಯವಿತ್ತವನು ಇದು ಗಜೇಂದ್ರಮೋಕ್ಷವನ್ನು ಕುರಿತುದಾಗಿದೆ. ಕಮಲಧರ ಕರಕಮಲ—ಕಮಲ ಸದೃಶವಾದ ಕೈಯಲ್ಲಿ ಕಮಲವನ್ನೇ ಧರಿಸಿರುವವನು. ಕಮಲ ಸಂನಿಭವಿನುತ ಕಂಧರ—ಕಮಲಸದೃಶವಾದ ಕಂಠವುಳ್ಳವನು. ಕಮಲ ಸಂನಿಭಸುಗಾತ್ರ—ಕಮಲ ಸದೃಶವಾದ ಮನೋಹರವಾದ ಶರೀರವುಳ್ಳವನು ಕಮಲಾಕಳತ್ರ—ಕಮಲೆಯನ್ನು ಪತ್ನಿಯಾಗುಳ್ಳವನು. ಅನಿಮಿಷಸುಪ್ರೀತ—ದೇವತೆಗಳಿಗೆ ಪ್ರಿಯನಾದವನು ಅಖಿಳದೋಷ ನಿರ್ಧೂತ—ಸಮಸ್ತ ಕಳಂಕವನ್ನೂ ನಿವಾರಿಸುವವನು ಸನಕಾದಿ ಶ್ರುತಿಗೀತ—ಬ್ರಹ್ಮನ ಮಾನಸಪುತ್ರರಾದ ಸನಕ, ಸನತ್ಕುಮಾರ, ಸನತ್ಸುಜಾತ, ಸನಂದನರಿಂದ ಸ್ತುತಿಸಲ್ಪಡುವವನು. (ಇಲ್ಲಿ ಪ್ರಯೋಗವಾಗಿರುವ ಶ್ರುತಿಗೀತ ಎನ್ನುವುದು ಭಾಗವತದಲ್ಲಿ ಪ್ರಸಿದ್ಧವಾಗಿರುವ ಅಂಭೃಣೀ ಲಕ್ಷ್ಮೀಸ್ತುತಿಗೂ ಅನ್ವಯಿಸಬಹುದು.) ಅರ್ಜುನ ಸೂತ—ಅರ್ಜುನನ ಸಾರಥಿ ದಿನಮಣಿ ಕುಲಜಾತ (?)—ಸೂರ್ಯವಂಶದಲ್ಲಿ ಹುಟ್ಟಿದವನು ಇದು ಶ್ರೀರಾಮನಿಗೆ ಅನ್ವಯಿಸುವುದೇ ವಿನಾ ಚಂದ್ರವಂಶದ ಶ್ರೀಕೃಷ್ಣನಿಗೆ ಅನ್ವಯಿಸುವುದಿಲ್ಲ ಬಹುಶಃ, ದಾಸರು ಆ ಅವತಾರವನ್ನೂ ಇಲ್ಲಿ ಸಂಯೋಜಿಸಿ ಸೂಚಿಸಿರಬಹುದು ದೇವಕೀಪೋತ—ದೇವಕಿಯ ಮಗ ಕನಕವಸನ—ಚಿನ್ನದಂತೆ ಪ್ರಕಾಶಮಾನವಾದ ಪೀತಾಂಬರವನ್ನು ಧರಿಸಿರುವವನು ಕೋಕನದ ಹಿತ—ಕಮಲಕ್ಕೆ ಹಿತಕರನಾಗಿರುವವನು ವನದವಾಹನ-ಮೋಡವನ್ನೇ ವಾಹನವಾಗಿ ಉಳ್ಳ ಇಂದ್ರ. ವೈರಿಕುಲಘಾತ—ಶತ್ರುಸಮೂಹಕ್ಕೆ ಕಂಟಕ, ಎಂದರೆ, ರಾಕ್ಷಸಮರ್ದನನಾದ ಶ್ರೀಕೃಷ್ಣ ಎಂದು ಇರಬಹುದೆ? ವನಜಭವತಾತ—ಮಾಧ್ವ ಸಂಪ್ರದಾಯದ ಕಕ್ಷದಂತೆ ಈತನು ಬ್ರಹ್ಮನ ತಂದೆ. ಅಂಗನಾಂಬರಹರಣ—ಗೋಪಿಯರ ವಸ್ತ್ರಾಪಹರಣ ಮಾಡಿದವನು ಅನುಪಮ ಸಪ್ತಾವರಣ—ಪಂಚಭೂತ, ಮಹತ್‌ತತ್ವ ಮತ್ತು ಅವ್ಯಕ್ತಾವರಣಗಳು ಗಾಂಗೇಯಕೃತಸ್ಮರಣ—ಭೀಷ್ಮರಿಂದ ಸ್ತುತಿಸಲ್ಪಟ್ಟು ಅವರಿಗೆ ಒಲಿದವನು. ಮಹಾಭಾರತದ ಯುದ್ಧದಲ್ಲಿ ಭೀಷ್ಮರ ಶರಘಾತದಿಂದ ಸಾರಥಿಯಾಗಿದ್ದ ಶ್ರೀಕೃಷ್ಣನು ಕುಪಿತನಾಗಿ ಚಕ್ರ ಹಿಡಿಯಲು, ಆಗ ಭೀಷ್ಮರು ಸ್ವಾಮಿಯನ್ನು ಸ್ತುತಿಸಿ ಅವನ

ಅನುಗ್ರಹಕ್ಕೆ ಪಾತ್ರರಾಗುವರು. ಭುಜಂಗಶಯನ—ಶೇಷಶಯನ. ತುರಂಗಧರ (ತುರಂಗದರ?) —ಹಯಗ್ರೀವ ರಾಕ್ಷಸ ಸಂಹಾರಕನೆಂದಿರಬಹುದೆ? ತುರಂಗ ಸಂಚರಣ—ಕಲ್ಕ್ಯವತಾರದಲ್ಲಿ ಕುದುರೆಯೇರಿ ಸಂಚರಿಸುವವನು ಗಂಗಾಚರಣ—ಗಂಗೋದ್ಭವವಾದ ಪಾದವುಳ್ಳವನು.

೨೧

ಈ ಕೀರ್ತನೆಯಲ್ಲಿ ಶ್ರೀರಾಮ ಮತ್ತು ಶ್ರೀಕೃಷ್ಣರು ತಮ್ಮ ತಮ್ಮ ಭಕ್ತರನ್ನು ಹೇಗೆ ಸಂರಕ್ಷಿಸಿದರೆಂಬುದನ್ನು ತಿಳಿಸಿಧೆ ದಾಸರು ತಮ್ಮನ್ನು ಮಾತ್ರ ಹಾಗೆ ರಕ್ಷಿಸದೆ ಏಕೆ ಸುಮ್ಮನಿರುವೆ ಎಂದು ಪಲ್ಲವಿಯಲ್ಲಿ ದೇವರನ್ನು ಪ್ರಶ್ನಿಸಿರುವರು. ಮೊದಲನೆಯ ನುಡಿಯಲ್ಲಿ ಶ್ರೀರಾಮನು ಉದ್ಧರಿಸಿದ ಅಹಲ್ಯಾವೃತ್ತಾಂತ, ಶ್ರೀಹರಿಯು ದಯೆತೋರಿದ ಗಜೇಂದ್ರಮೋಕ್ಷದ ಸಂಗತಿ, (ಇಂದ್ರದ್ಯುಮ್ನನೆಂಬ ವಿಷ್ಣುಭಕ್ತ, ಒಮ್ಮೆ ಅಗಸ್ತ್ಯ ಋಷಿಗಳನ್ನು ಅಲಕ್ಷಿಸಿದ್ದರಿಂದ, ಅವರ ಶಾಪಕ್ಕೆ ಗುರಿಯಾಗಿ ಗಜೇಂದ್ರನಾಗಿ ಜನ್ಮ ತಾಳಿದನು. ನೀರು ಕುಡಿಯಲೆಂದು ಕೊಳಕ್ಕೆ ಇಳಿದಿದ್ದ ಆ ಆನೆಯ ಕಾಲನ್ನು ಮೊಸಳೆ ಹಿಡಿಯಿತು ಆಗ ಆ ಆನೆ ವಿಷ್ಣುವನ್ನು ಕುರಿತು ಧ್ಯಾನಿಸಲು, ದೇವರು ಪ್ರತ್ಯಕ್ಷನಾಗಿ ಅದನ್ನು ಆ ವಿಪತ್ತಿನಿಂದ ಪಾರುಮಾಡಿದನು. ಅನಂತರ ಆ ವಿಷ್ಣುಭಕ್ತನು ಶಾಪದಿಂದ ಬಿಡುಗಡೆಯನ್ನು ಪಡೆದನು. ಭಾಗವತ, VIII, ಅ. ೪) ಮತ್ತು ಪಾಪಿಯಾದ ಅಜಾಮಿಳನನ್ನು ಶ್ರೀಮನ್ನಾರಾಯಣನು ಕಡೆಗಾಲದಲ್ಲಿ ಬಂದು ಸಲಹಿದ ಘಟನೆಗಳ ಉಲ್ಲೇಖವಿದೆ ಎರಡನೆಯ ನುಡಿಯಲ್ಲಿ, ಶ್ರೀರಾಮನು ವಿಭೀಷಣನನ್ನು ಅನುಗ್ರಹಿಸಿದ ಸಂದರ್ಭವೂ, ಭಕ್ತ ಪ್ರಹ್ಲಾದನ ಪ್ರಾರ್ಥನೆಯ ಮೇರೆಗೆ ಶ್ರೀಹರಿಯು ನರಸಿಂಹಾವತಾರವೆತ್ತಿ ಭಕ್ತನ ಕಷ್ಟವನ್ನು ನಿವಾರಿಸಿದ ಪ್ರಸಂಗವೂ ಉಕ್ತವಾಗಿವೆ ಇವಲ್ಲದೆ, ಮಹಾಶಿವಭಕ್ತನಾದ ಘಂಟಾಕರ್ಣನನ್ನೂ ಶ್ರೀಹರಿಯು ಅನುಗ್ರಹಿಸಿದನೆಂದು ಹೇಳಿದೆ ವಾಸ್ತವಿಕವಾಗಿ ಈತನು ಅಚ್ಚ ಶಿವಭಕ್ತ ಇವನು ಈಶ್ವರನ ನಾಮವನ್ನು ಹೊರತು ಬೇರಾವುದೂ ಕೇಳಬಾರದೆಂದು ತನ್ನ ಕಿವಿಗಳಿಗೆ ಘಂಟೆಗಳನ್ನು ಕಟ್ಟಿಕೊಂಡಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ, ಪ್ರಕೃತದಲ್ಲಿ ಉಲ್ಲೇಖಿತವಾದ ಘಂಟಾಕರ್ಣನ ವಿಚಾರ ಸ್ವಲ್ಪ ಸೋಜಿಗವಾಗಿದೆ. ಕಿರಾತನೂ, ಶಿವಭಕ್ತನೂ ಆದ ಘಂಟಾಕರ್ಣನೆಂಬವನೊಬ್ಬನು, ಕೈಲಾಸದಲ್ಲಿ ಪುತ್ರಾರ್ಥಿಯಾಗಿ ತಪೋಮಗ್ನನಾಗಿದ್ದ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರನಾಗಿ ಮುಕ್ತಿಯನ್ನು ಪಡೆದ ಒಂದು ಕಥೆ, ಶ್ರೀ ನಾಚನ ಸೋಮನಾಥ ವಿರಚಿತ ತೆಲುಗಿನ "ಉತ್ತರ ಹರಿವಂಶ"ದಲ್ಲಿ ಬಹಳ ಸ್ವಾರಸ್ಯವಾಗಿ ನಿರೂಪಿತವಾಗಿದೆ (ಆ. II, ಪ. ೧೪೦—೧೫೩) ಇದಲ್ಲದೆ, ಕನಕದಾಸರು ಕಲುಬಗಿರಿ ರಂಗನಾಥನನ್ನು ಕುರಿತು ಬರೆದಿರುವ ಉದಯ ಗೀತವೊಂದರಲ್ಲಿ, ಪ್ರಹ್ಲಾದ, ಬಲಿಚಕ್ರವರ್ತಿ, ಧ್ರುವ, ಅಂಬರೀಷ, ರುಕ್ಮಾಂಗದ ಮತ್ತು ಪಾಂಡವರು ಮೊದಲಾದ ಹರಿಭಕ್ತರ ಪಂಕ್ತಿಯಲ್ಲಿ 'ಭಕುತರೊಳು ಘಂಟಕರ್ಣನು' ಎಂಬ ಹೆಸರನ್ನೂ ಉಲ್ಲೇಖಿಸಿದ್ದಾರೆ. (ಕೀ. ೧೩೭, "ಶ್ರೀ ಕನಕದಾಸರ ಭಕ್ತಿಗೀತಗಳು", ೧೯೩೫, ಸಂ॥ ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾವ್) ಆದ್ದರಿಂದ, ಈತನಾರೆಂಬುದರ ಬಗ್ಗೆ ಇನ್ನೂ ಹೆಚ್ಚಿನ ವಿವರ

ಗಳು ತಿಳಿಯಬೇಕಾಗಿವೆ. ಮೂರನೆಯ ನುಡಿಯಲ್ಲಿ ಶ್ರೀರಾಮನು ಅನುಗ್ರಹಿಸಿದ ಶಬರಿಯ ಸಂಗತಿ, ಶ್ರೀಕೃಷ್ಣನು ತನ್ನ ಸ್ನೇಹಿತನಾದ ಕುಚೇಲನು ತಂದಿದ್ದ ಹಿಡಿ ಅವಲಕ್ಕಿಯಿಂದಲೇ ಸುಪ್ರೀತನಾಗಿ ಅವನಿಗೆ ಐಶ್ವರ್ಯವನ್ನು ಕೊಟ್ಟ ಪ್ರಕರಣಗಳನ್ನು ಉದಾಹರಿಸಿದೆ.

ಕಠಿನ ಶಬ್ದಗಳ ಅರ್ಥ: ಕಾಮಿತಫಲ—ಬಯಸಿದ ಫಲ. ಈವ—ಕೊಡುವ.

## ೨೨

ಈ ಕೀರ್ತನೆ ಪುನರುಕ್ತವಾಗಿದೆ. (ನೋಡಿ ಪುಟ ೬೨, ಕೀ ೫೧ರ ಟಿಪ್ಪಣಿ.)

## ೨೩

### ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕಂ

ಶ್ರೀಪಾದರಾಜರು ರಚಿಸಿರುವ ಕೃತಿಗಳಲ್ಲಿ ಈ ನಿಡಿದಾದ ದಂಡಕ ತುಂಬ ವಿಶಿಷ್ಟವಾದುದು ಎನ್ನಬಹುದು ಕೃತಿಯ ಹೆಸರೇ ಸೂಚಿಸುವಂತೆ ಇದು ಶ್ರೀ ವಿಷ್ಣು ನರಸಿಂಹಾವತಾರವೆತ್ತಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನಾದ ಪ್ರಹ್ಲಾದನನ್ನು ಅನುಗ್ರಹಿಸಿದುದಾಗಿದೆ. ಭಾಗವತದಲ್ಲಿ ಉಕ್ತವಾಗಿರುವ ಸಪ್ತಮಸ್ಕಂಧದ ಅಷ್ಟಮೋಧ್ಯಾಯದ ಕಥೆಯ ಬಹುಭಾಗವನ್ನು ಇಲ್ಲಿ ಅನುವಾದ ಮಾಡಲಾಗಿದೆ. ವಿವರಗಳನ್ನು ನೀಡುವಲ್ಲಿ ಸಂದರ್ಭೋಚಿತವಾಗಿ ಶ್ರೀಪಾದರಾಜರು ಅಲ್ಪ ಸ್ವಲ್ಪ ಸ್ವಾತಂತ್ರ್ಯ ವಹಿಸಿರುವುದುಂಟು. ಈ ಕೃತಿ ನಮಗೆ ದೊರೆತಿರುವ ಹಸ್ತಪ್ರತಿಗಳಾವುದರಲ್ಲಿಯೂ ಕಂಡುಬಂದಿಲ್ಲ ಶ್ರೀ ಎಂ. ರಾಮರಾಯರು ಪ್ರಕಟಿಸಿರುವ ಶ್ರೀಪಾದರಾಜರ ಕೃತಿಗಳ ಸಂಕಲನದಿಂದ ಇದನ್ನು ಆರಿಸಿಕೊಳ್ಳಲಾಗಿದೆ (ಪು. ೫೦–೮೩) ಇದೇ ದಂಡಕವು ಹರಿದಾಸರತ್ನಂ ಶ್ರೀ ಗೋಪಾಲದಾಸರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ "ಶ್ರೀ ಹರಿದಾಸ ಭಾರತೀ" ಪತ್ರಿಕೆಗಳಲ್ಲಿ (ಸಂ II, ಸಂ. ೯, ೧೦–೧೨ , ಸಂ. III, ಸಂ. ೧, ೨) ಪುನಃ ಪ್ರಕಟವಾಗಿದ್ದರೂ ಎರಡರಲ್ಲಿಯೂ ಪಾಠಗಳು ಬಹುಮಟ್ಟಿಗೆ ಒಂದೇ ರೀತಿಯಾಗಿರುವುದರಿಂದ ಇದನ್ನು ಏಕೈಕ ಆಕರದ ವರ್ಗಕೆ ಸೇರಿಸಿದೆ

ಸಂಸ್ಕೃತದಲ್ಲಿ ೨೬ ಅಕ್ಷರಗಳನ್ನು ಮೀರಿ, ನಿಯಮಿತವಾದ ಗಣನಿಯಮಕ್ಕೆ ಒಳಪಟ್ಟು ರಚಿತವಾಗಿರುವ ವರ್ಣವೃತ್ತಗಳಿಗೆ ದಂಡಕಗಳೆಂದು ಹೆಸರು. ಇವುಗಳಲ್ಲಿ ಹಲವಾರು ಬಗೆಗಳಿವೆ. ನಾಗವರ್ಮನು ತನ್ನ "ಛಂದೋಂಬುಧಿ"ಯಲ್ಲಿ ಹೇಳಿರುವ ಚಂಡವೃಷ್ಟಿಪ್ರಪಾತ, ಅರ್ಣ, ಅರ್ಣವ, ವ್ಯಾಳ, ಜೀಮೂತಕ ಮತ್ತು ಲೀಲಾಕರ ಎಂಬ ಆರು ದಂಡಕಗಳೂ ಸಂಸ್ಕೃತದ ನಿಯಮವನ್ನೇ ಅನುಸರಿಸಿ ನಿರೂಪಿತವಾಗಿವೆ (ಕನ್ನಡಕ್ಕೆ ವಿಶಿಷ್ಟವಾದ ದ್ವಿತೀಯಾಕ್ಷರ ಪ್ರಾಸವೊಂದು ಹೆಚ್ಚಾಗಿ ಕೂಡಿದೆ.) "ಕನ್ನಡ ಕೈಪಿಡಿ"ಕಾರರು ನಿಯತವಾದ ಗಣಗಳಿಂದ ಕೂಡಿ ಪಾದವಿಭಾಗವಿಲ್ಲದೆ ದಂಡಾಕಾರವಾಗಿರುವ ಶಬ್ದರಚನಾ ವಿಶೇಷವು ದಂಡಕವೆನಿಸುವುದು" (೧೯೩೬, ಸಂಪುಟ ೧. ಪು. ೧೨೦) ಎಂದು ಹೇಳಿ ದಂಡಕವನ್ನು ಗದ್ಯದಲ್ಲಿ ಒಂದು ಪ್ರಭೇದವೆಂದು ಪರಿಗಣಿಸಿರುತ್ತಾರೆ.

ಪ್ರಕೃತದಲ್ಲಿ, ಶ್ರೀಪಾದರಾಜರು ರಚಿಸಿರುವ ಈ ದಂಡಕದಲ್ಲಿ ಪ್ರತಿಯೊಂದು ಪಾದದಲ್ಲಿಯೂ ಐದೈದು ಮಾತ್ರೆಯ ನಾಲ್ಕು ಗಣಗಳಿದ್ದು, ಪ್ರಾಸ ನಿರ್ಬಂಧವಿಲ್ಲದೆ ನಿರರ್ಗಳವಾಗಿ ಸಾಗುತ್ತದೆ. ಶ್ರೀಪಾದರಾಜರು ಈ ಕ್ರಮವನ್ನು ಯಾವ ಮೇಲುಪಂಕ್ತಿಯನ್ನು ಅನುಸರಿಸಿ ರಚಿಸಿರುವರೋ ತಿಳಿಯದು. ಕನ್ನಡದಲ್ಲಿ ಈ ಮೊದಲೇ ಪ್ರಚಲಿತವಾಗಿದ್ದ ಲಲಿತರಗಳೆಯಲ್ಲಿರುವ ಪ್ರಾಸನಿಯಮವನ್ನು ಬಿಟ್ಟು ಆಧುನಿಕ ಕನ್ನಡ ಕವಿಗಳು ಬಳಕೆಗೆ ತಂದಿರುವ ಸರಳ ರಗಳೆಯನ್ನೇ ಈ ದಂಡಕವು ಹೋಲುತ್ತಿರುವುದು ತುಂಬ ಕುತೂಹಲಕಾರಿಯಾಗಿದೆ. (ತಮಿಳಿನಲ್ಲಿಯೂ ಸರಳ ರಗಳೆಯನ್ನೇ ಹೋಲುವ ಒಂದು ಛಂದೋಬಂಧವಿರುವುದಾಗಿ "ಕನ್ನಡ ಕೈಪಿಡಿ"ಯಲ್ಲಿ ಸೂಚಿಸಿದೆ, ೧೯೩೬, ಸಂಪುಟ ೧, ಪು. ೧೮೯)

ಇಲ್ಲಿನ ಅನುವಾದ ಕ್ರಮವನ್ನು ಪರಿಚಯ ಮಾಡಿಕೊಡುವ ಸಲುವಾಗಿ ಒಂದೆರಡು ನಿದರ್ಶನಗಳನ್ನು ಇಲ್ಲಿ ಪರಿಶೀಲಿಸಬಹುದು ಉಗ್ರ ನರಸಿಂಹಾವತಾರವನ್ನು ಕಂಡು ದೇವಾನುದೇವತೆಗಳೆಲ್ಲ ಭಯಗ್ರಸ್ತರಾಗುವರಷ್ಟೆ. ಆಗ ಆ ಒಬ್ಬೊಬ್ಬರೂ ದೇವರನ್ನು ಸ್ತುತಿಸುವ ಸಂವಿಧಾನ ಮೂಲದಲ್ಲಿ ತುಂಬ ಗಹನವಾಗಿದೆ ಆ ಭಾಗವನ್ನು ಶ್ರೀಪಾದರಾಜರು ಚಾಚೂ ತಪ್ಪದಂತೆ ಅನುವಾದಿಸಿರುತ್ತಾರೆ. ಬ್ರಹ್ಮನು ನರಸಿಂಹ ದೇವರನ್ನು ಸ್ತುತಿಸುವ ಶ್ಲೋಕ ಹೀಗಿದೆ

> ನತೋಽಸ್ಮ್ಯನಂತಾಯ ದುರಂತಶಕ್ತಯೇ ವಿಚಿತ್ರವೀರ್ಯಾಯ ಪವಿತ್ರಕರ್ಮಣೇ
> ವಿಶ್ವಸ್ಯ ಸರ್ಗಸ್ಥಿತಿಸಂಯಮಾನ್ ಗುಣೈಃ ಸ್ವಲೀಲಯಾ ಸಂದಧತೇಽವ್ಯಯಾತ್ಮನೇ
> —ಭಾಗವತ, VII–೮–೪೦

ಇದನ್ನು ಶ್ರೀಪಾದರಾಜರು ಹೀಗೆ ಕನ್ನಡಕ್ಕೆ ಅಳವಡಿಸಿದ್ದಾರೆ:

> ಆ ವೇಳೆಯಲ್ ಬ್ರಹ್ಮ ತಾಂ ಭಾಷಿಪಂ
> ನಿನಗೆ ವಂದಿಸುವೆಂ ತಂದೆ ನೀನೇ ಅನಂ
> ತಂ ದುರಂತೋರು ಶಕ್ತ್ಯಾಳ್ವನಂ ಲೋಕಪಾ
> ವಿತ್ರ್ಯ ಕರ್ಮಂ ಮಹಾಶ್ಚರ್ಯ ವೀರ್ಯಂ ಜಗ
> ತ್ಸೃಷ್ಟಿ ಸಂರಕ್ಷ ಸಂಹಾರಗಳ್ ಲೀಲೆಯಿಂ
> ದಲ್ ಸದಾ ಮಾಳ್ಪೆಯೋ ಅವ್ಯಯಾತ್ಮನ್ನೆ ನೀ
> ನೆಂದನು.

ಮೂಲ ಶ್ಲೋಕದಲ್ಲಿರುವ ಅನೇಕ ಶಬ್ದಗಳನ್ನು ಅದೇ ರೂಪದಲ್ಲಿಯೇ ಕನ್ನಡದ ಧಾಟಿಗೆ ತಕ್ಕಂತೆ ಬಳಸಿರುವ ಈ ಕ್ರಮ ಯಶಸ್ವಿಯಾಗಿ ಇಂತೆಯೇ ಮುಂದೆಯೂ ಕಂಡುಬರುತ್ತದೆ.

ಒಂದು ಸನ್ನಿವೇಶದಲ್ಲಿ ಸಂಸ್ಕೃತದ ಶ್ಲೋಕವನ್ನೇ ಇಡಿಯಾಗಿ ಹಾಗೆಯೇ ಪ್ರಯೋಗಿಸಿರುವುದೂ ಉಂಟು.

ಪ್ರಜಾಪತಯ ಊಚುಃ

ಪ್ರಜೇಶಾ ವಯಂ ತೇ ಪರೇಶಾಭಿಸೃಷ್ಟಾ ನ ಯೇನ ಪ್ರಜಾ ವೈ ಸೃಜಾಮೋ ನಿಷಿದ್ಧಾಃ
ಸ ಏಷ ತ್ವಯಾ ಭಿನ್ನವಕ್ಷಾ ನು ಶೇತೇ ಜಗನ್ಮಂಗಲಂ ಸತ್ವಮೂರ್ತೇಽವತಾರಃ
—ಭಾಗವತ, VII_೮_೪೯

ಕನ್ನಡ ದಂಡಕದ ಭಾಗ ಈ ರೀತಿಯಿದೆ:

ಆ ಪ್ರಜೇಶ್ವಾಳಿಗಳ್ ನಿಂತು ಕೇಳೋ "ಪ್ರಜೇ
ಶಾ ವಯಂ ತೇ ಪರೇಶಾಭಿಸೃಷ್ಟಾ ನ ಯೇ
ನ ಪ್ರಜಾ ವೈ ಸೃಜಾಮೋ ನಿಷಿದ್ಧಾಃ ಸ ಏ
ಷ ತ್ವಯಾ ಭಿನ್ನವಕ್ಷಾ ನು ಶೇತೇ ಜಗ
ನ್ಮಂಗಲಂ ಸತ್ವಮೂರ್ತೇಽವತಾರಃ" ಪ್ರಭೋ
ಎಂದರು.

ಸಂಸ್ಕೃತದ ಮಾತುಗಳು ಕನ್ನಡಕ್ಕೆ ಒಗ್ಗಿ ಬಂದರೆ ಹಾಗೆಯೇ ಬಳಸಲು ಹಿಂತೆಗೆಯುವವರಲ್ಲ. ಅಗತ್ಯವೆನ್ನಿಸಿದರೆ ಅವುಗಳೊಂದಿಗೆ ಕನ್ನಡದ ನುಡಿಯನ್ನು ಬೆರೆಸುವುದುಂಟು. ನರಸಿಂಹದೇವರ ಉಗ್ರರೂಪವನ್ನು ಪರಿಹರಿಸಲು ದೇವಾನುದೇವತೆಗಳಿಂದ ಸಾಧ್ಯವಾಗದ ಬಳಿಕ ಬ್ರಹ್ಮನು ಲಕ್ಷ್ಮೀದೇವಿಯನ್ನು ಆ ಕೆಲಸವನ್ನು ನಿರ್ವಹಿಸುವಂತೆ ಕೇಳಿಕೊಳ್ಳುವನು. ಈ ಸನ್ನಿವೇಶ ಭಾಗವತದಲ್ಲಿ ಈ ರೀತಿಯಿದೆ:

ಸಾಕ್ಷಾತ್‌ಶ್ರೀಃ ಪ್ರೇಷಿತಾ ದೇವೈರ್ದೃಷ್ಟ್ವಾ ತನ್ಮಹದದ್ಭುತಮ್
ಅದೃಷ್ಟಾಶ್ರುತಪೂರ್ವತ್ವಾತ್ ಸಾ ನೋಪೇಯಾಯ ಶಂಕಿತಾ (VII_೯_೨)

ಕನ್ನಡದಲ್ಲಿನ ನಿರೂಪಣೆ ಇನ್ನೂ ಹೆಚ್ಚು ಮೆಚ್ಚುವಂತಿದೆ:

ಆಮೇಲೆ ಆ ಬಾಲೆ ಸಾ
ಕ್ಷಾಜ್ಜಗನ್ಮೋಹಿನೀ ಲೀಲೆಗಳ್ ಮಿಂಚುತಾ
ಪೊಂಚುತಾ ಬಂದು ಸಿಂಹಾಸನ ಸ್ಥಾನದಲ್
ಉಗ್ರನಂತಿಪ್ಪ ನೃಸಿಂಹಮೂರ್ತ್ಯುಗ್ರಮಂ
ಕಂಡತಿವ್ಯಗ್ರಳಂತಾಗಿ ಆ ತಾಯಿ ಹಿಂ
ದಕ್ಕೆ ತಾ ಬಂದಳಮ್ಮಮ್ಮ ಏಂ ಗುಮ್ಮನಂ
ತಿಪ್ಪನೇ ಸ್ವಾಮಿ ಮುನ್ನಿಂತು ಆಶ್ಚರ್ಯವಂ
ಈಸು ವಿಕ್ರಮ್ಯವಂ ಎಂದಿಗಾನೆಲ್ಲಿ ಕಂ
ಡಿಲ್ಲವಲ್ಲಾ ಕಿವಿಲ್ಯಾದರುಂ ಕೇಳಲೇ

ಇಲ್ಲವಲ್ಲಾ ಇದೇನೊ ವಿಚಿತ್ರಾಕೃತೀ
ಯಂತೆ ತೋರೂವನೆಂದಂಜಿಕೇಗೊಂಡ ರೀ
ತಿಂದ ತಾ ಹೆಜ್ಜೆ ಕಾಲ್ಗೆಜ್ಜೆಗಳ್ ಸಪ್ಪುಳಂ
ಮಾಡದೇ ಮೆಲ್ಲನೇ ಪಾರ್ಶ್ವದಲ್ ನಿಂತಳು

ಲಕ್ಷ್ಮೀದೇವಿಯಿಂದಲೂ ನರಸಿಂಹನ ಉಗ್ರರೂಪವು ಶಾಂತವಾಗದಿರಲು, ಬ್ರಹ್ಮನು ಭಕ್ತನಾದ ಪ್ರಹ್ಲಾದನನ್ನೇ ಕಂಡು "ನಿಮ್ಮಪ್ಪಗಾಗಿಂದು ನಮ್ಮಪ್ಪನಲ್ಲಿಪ್ಪ ತಕ್ಕೋಪ ಸಂಕ್ಷೇಪಗೈಸು" ಎಂದು ಕೋರುವನು ಆಗ ಪ್ರಹ್ಲಾದನು ದೇವರ ಪಾದಕ್ಕೆ ಅಡ್ಡಬಿದ್ದುದನ್ನೂ, ಸ್ವಾಮಿಯು ಆ ಭಕ್ತನನ್ನು ಸಂತೋಷದಿಂದ ತನ್ನ ಎರಡು ಕೈಗಳನ್ನು ಚಾಚಿ ಆತನನ್ನು ಬರಮಾಡಿಕೊಂಡುದನ್ನೂ ಮೂಲಕ್ಕೆ ಅನುಸಾರವಾಗಿಯೇ ಕನ್ನಡದಲ್ಲಿಯೂ ನಿರೂಪಿಸಿದೆ. ಆದರೆ, ಪ್ರಹ್ಲಾದನ ಪ್ರಾರ್ಥನೆ ಮೂಲದಲ್ಲಿ ಒಂದು ಅಧ್ಯಾಯ ಪೂರ್ತಿಯಾಗಿ ತತ್ತ್ವನಿಬಿಡವಾಗಿದ್ದರೆ, ಇಲ್ಲಿ ಆ ವಿವರವನ್ನೆಲ್ಲ ಸಂಪೂರ್ಣವಾಗಿ ಕೈಬಿಡಲಾಗಿದೆ. ನರಸಿಂಹದೇವರಿಗೆ ಮಾಡಿದ ಪೂಜಾ ವಿವರದ ಕಡೆ ವಿಶೇಷ ಲಕ್ಷ್ಯ ಹರಿದಿರುವುದಲ್ಲದೆ, ಆ ಪೂಜಾಕ್ರಮವನ್ನು 'ತಂತ್ರಸಾರೋಕ್ತ'ಕ್ಕೆ ಅನುಸಾರವಾಗಿ ಮಾಡಲಾಯಿತೆಂದು ಹೇಳಿರುವುದು ಗಮನಾರ್ಹವಾದುದು. ಶ್ರೀ ಮಧ್ವಾಚಾರ್ಯ ವಿರಚಿತ ಕೃತಿಯ ಹೆಸರನ್ನು ಇಲ್ಲಿ ಬೆರಸಿ ಹೇಳಿರುವುದು ಲೇಖಕರ ಮಾಧ್ವಸಂಪ್ರದಾಯದ ಅಭಿಮಾನವನ್ನು ವ್ಯಕ್ತಪಡಿಸುತ್ತದೆ.

ಕಡೆಯ ಭಾಗದಲ್ಲಿ ಈ ಕೃತಿಯನ್ನು "ಮಾಪತಿ ಲಕ್ಷ್ಮೀನರಸಿಂಹ"ನನ್ನು ಕುರಿತು ಬರೆದುದಾಗಿಯೂ, 'ಈ ಕಥಾದಂಡಕ'ವನ್ನು ಪಠಿಸುವವರಿಗೆ ಶುಭಫಲಪ್ರಾಪ್ತವಾಗುವುದೆಂದೂ ತಿಳಿಸಿರುವರು

ಈ ರಚನೆಯ ನಿರರ್ಗಳವಾದ ಶೈಲಿ ಹೇಗೆ ಆಹ್ಲಾದಕಾರಿಯಾಗಿದೆಯೋ ಹಾಗೆಯೇ ಅಲ್ಲಲ್ಲಿಯೇ ಬಳಸಿರುವ ವ್ಯಾವಹಾರಿಕ ಕನ್ನಡದ ಪ್ರಯೋಗಗಳೂ ಸಹ ವಿಶಿಷ್ಟವಾಗಿವೆ ಇವುಗಳನ್ನು ಶಬ್ದಾರ್ಥವನ್ನು ಬರೆಯುವಲ್ಲಿ ತೋರಿಸಿಕೊಟ್ಟಿದೆ.

ಕಠಿನ ಶಬ್ದಗಳ ಅರ್ಥ. ಪ್ರಾದುರ್ಭಾವ—ಅವತರಿಸು ಮಾನಸೇಂದೀವರ—ಮನಸ್ಸೆಂಬ ಕನ್ನೈದಿಲೆ. ಉತ್ಫುಲ್ಲ—ಅರಳುವುದು ಉಪೇಂದ್ರ—ಕೃಷ್ಣ. ನಿಸ್ತಂದ್ರ—ನಿರಾಯಾಸ ಪ್ರಹ್ಲಾದನಲ್—ಪ್ರಹ್ಲಾದನಲ್ಲಿ (ಇಲ್ಲಿ 'ಅಲ್' ಎಂಬುದನ್ನು 'ಅಲ್ಲಿ' ಎಂಬ ಅರ್ಥದಲ್ಲಿ ಉದ್ದಕ್ಕೂ ಬಳಸಿದೆ ) ಶ್ರೀಕಾಂತ—ವಿಷ್ಣು. ಗಾಥೆ < ಗಾಥಾ (?)—ಕಥೆ. ಪರಾಭೂತ ಷಡ್ವರ್ಗ—ಅರಿಷಡ್ವರ್ಗಗಳನ್ನು ಜಯಿಸುವುದು ದಾನವಾಚಾರ್ಯರು—ರಾಕ್ಷಸರ ಗುರುಗಳು ಏಸು ರೀತಿ—ಎಷ್ಟು ಬಗೆ ಆಸುರೀವಿದ್ಯೆ—ರಾಕ್ಷಸ ವಿದ್ಯೆ. ಮಾರಾಟೆ—ಪ್ರತಿಭಟನೆ. ಸೂನುಗಳ್—ಮಕ್ಕಳು. ದೈತ್ಯರಾಟ್ ಸೂನುನಲ್—ದೈತ್ಯಶ್ರೇಷ್ಠನ ಮಗನಲ್ಲಿ (ಪ್ರಹ್ಲಾದನಲ್ಲಿ.) ದಾನವಾರಾಗ್ರನಲ್—ರಾಕ್ಷಸಮುಖ್ಯನಲ್ಲಿ. ಅಪ್ರೀತಿಯೊಸೂತಿ—ಅಪ್ರೀತಿಯಿಂದ ಜನಿಸಿದ. ಸೈಸು < ಸಹಿಸು. ಕೋಪಸಂದೀಪನ್—ಕೋಪಾವೇಶಪರ ಚಲದ್ಗಾತ್ರ—ನಡುಗಿದ ಶರೀರ. ಪ್ರೋದ್ಯತ್—ಹೆಚ್ಚಾದ ಧೀಮಂತ—ಬುದ್ಧಿವಂತ. ನಿರ್ಮಲಸ್ವಾಂತ—ಪರಿಶುದ್ಧವಾದ ಮನಸ್ಸು. ಪಾದಾಹತ—ಕಾಲಿನಿಂದ ತುಳಿ

ಯಲ್ಪಟ್ಟ. ವ್ಯಾಳಿ—ಹಾವು. ಮಚ್ಛಾಸನಾತೀತ—ನನ್ನ ಆಜ್ಞೆಗೆ ಮೀರಿದವನು ಲೋಕಪಾಲನೀಕ ಗಳ್—ಲೋಕಪಾಲಕರು (ದಿಕ್ಪಾಲಕರು). "ಆಗೂಮಿಯೋ" ಛಂದಸ್ಸಿಗನುಗುಣವಾಗಿ ಮಾರ್ಪ ಡಿಸಿಕೊಂಡಿರುವ ಶಬ್ದರೂಪ, ಜಂಗಮ—ಚೇತನ. ಸ್ಥಾವರ—ಅಚೇತನ ಪ್ರಜಾನೀಕ—ಪ್ರಜೆಗಳ ಸಮೂಹ ಕಾಲರೂಪೀಶ್ವರೋರುಕ್ರಮಾಕಾರ—ಕಾಲರೂಪನೂ, ಒಡೆಯನೂ ಮತ್ತು ವಿಶ್ವ ರೂಪನೂ ಆದವನು. ಓಜಸ್ಸು—ಸಾಮರ್ಥ್ಯ ಇಂದ್ರಿಯಾತ್ಮಕ—ಸಂಯಮಶಾಲಿ (ಧೈರ್ಯ ಶಾಲಿ?) ಪೊರ್ತು—ಹೊರತು ಅಸುರೀಭಾವ—ರಾಕ್ಷಸಪ್ರವೃತ್ತಿ ಅಂತಸ್ಸು—ಅಂತರಂಗ ಷಡ್ವರ್ಗ—ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ. ಶಾತ್ರವ್ರಾತ— ಶತ್ರುಸಮೂಹ ವಹ್ನಿ—ಬೆಂಕಿ ಆಜ್ಯಧಾರಾಹುತ—ತುಪ್ಪದ ಹೋಮ ಉರ್ಪಿ—ಉರಿದು ಪೆಟ್ಟ—? ಧ್ವಾನ—ಶಬ್ದ ಶುಂಭತ್—ಪ್ರಕಾಶಿಸುವ ಅಂಭೋದ ವೀಥಿ—ಮೇಘಮಾರ್ಗ ಜೃಂಭ—ವೈಭವ. ವಿಶ್ರಂಭ—ವಿಶ್ವಾಸ ಶಾತಕುಂಭ—ಚಿನ್ನ. ಧಾಮ—ಮನೆ ವ್ಯಾಘಾತ— ಹೊಡೆತ. ಆಗ್ರಹ—ಕೋಪ ಹೇತುವಂ—ಕಾರಣವನ್ನು. ಲೇಲಿಹಾನ—ನೆಕ್ಕುವ ಜಗದ್ಭರ್ತ— ಜಗತ್ತಿನ ತಂದೆ. ಭಾಂಗಾರ<ಬಂಗಾರ(?). ತಪ್ತ—ಕಾಸಿದ. ಶೃಂಗಾರವಲ್ಲ್ಯಂತೆ—ಅಲಂಕೃತ ವಾದ ಬಳ್ಳಿಗೆ (?) ಸಮುದ್ಯತ್—ಮೇಲೆದ್ದ. ಸಟಾಕೇಸರ—ಸಿಂಹದ ಮುಖದ ಸುತ್ತಲೂ ಇರುವ ಕೇಶರಾಶಿ. ಭ್ರಮತ್—ಸುತ್ತುತ್ತಿರುವ. ಭ್ರೂ(?)—ಹುಬ್ಬು ಕರಾಳ—ಭಯಂಕರ ವ್ಯಸ್ತ—ಹೊರಹೊಮ್ಮಿದ. ಕ್ಷುರಾಂತ—ಕತ್ತಿಯ ಅಲಗು. ಜಿಹ್ವಾಗ್ರ—ನಾಲಿಗೆಯ ತುದಿ ಲೇಲಿಹನ (ಲೇಲಿಹಾನ?)—ನಾಲಗೆ ಚಾಚುವುದು ಹನು—ದವಡೆ ಊರ್ಧ್ವಕರ್ಣ— ನಿಮಿರಿರುವ ಕಿವಿ ಭೂಮಿಭೃತ್—ಪರ್ವತ ಅವ್ಯಾತ—?. ಆಸ್ಯ—ಮುಖ ನಾಸಾಪುಟ— ಮೂಗಿನ ಹೊಳ್ಳೆ ಗ್ರೀವ—ಕತ್ತು. ಉರಸ್ಥಲ—ಎದೆ ಹೀರ—ವಜ್ರ. ತುಳಸ್ಯಾಪ್ತ—ತುಳಸಿ ಯಿಂದ ಕೂಡಿದ ಮುಕ್ತಾವಳಿ—ಮುತ್ತಿನ ಸಮೂಹ. ಕಾಂಚನೀಮಾಲಿಕಾ—ಬಂಗಾರದ ಸರ ಕುಂಡಲ—ಕಿವಿಯ ಆಭರಣ ಕೇಯೂರ—ತೋಳಬಂದಿ ಕಂಕಣ—ಬಳೆ ಅಂಗುಳ್ಯ (ಅಂಗುಲೀಯ?)—ಉಂಗುರ ಉದ್ಯತ್—ಮೇಲೆದ್ದ ಚಂದ್ರಾಂಶುವರ್ಣಪ್ರಭಾ—ಬೆಳುದಿಂಗ ಳಿನ ಕಾಂತಿ ಪ್ರಸ್ಫುರತ್—ವಿಶೇಷವಾಗಿ ಪ್ರಕಾಶಿಸುವ ರೋಮಚ್ಛಟಾಪುಲ್ಲ—ಪುಳಕಿತವಾದ ಕೇಶಸಮೂಹ ಮತ್ತಶುಂಡಾಲ—ಮದಿಸಿದ ಆನೆ ಶುಂಡ—ಸೊಂಡಿಲು ಪ್ರಕಾಂಡ— ಶಾಖೆ ದೋಃ—ಬಾಹು (?). ಆಯುಧಾಭ—ಆಯುಧದಂತಿರುವ ನಖಾನೀಕ—ಉಗುರಿನ ಸಮೂಹ. ವಿದ್ರಾವಿತ—ಅಟ್ಟಿದ. (ಇಲ್ಲಿ ಮೂಲದ ಪಂಕ್ತಿ ಹೀಗಿದೆ· "ಸರ್ವನಿಜೇತರಾಯುಧ ಪ್ರವೇಕ ವಿದ್ರಾವಿತ ದೈತ್ಯದಾನವಂ.") ಶ್ರೋಣ್ಯಿತಂಬ—ವಿಸ್ತಾರವಾದ ಪಿರ್ರೆ. ಊರು—ತೊಡೆ ಸತ್—ಸುಂದರ ಸಾನು—ತುದಿ. ಜಂಘ—ಮೊಳಕಾಲು ಪೀತ—ಹಳದಿ ಕೌಶೇಯ—ರೇಷ್ಮೆಯ ವಸ್ತ್ರ ಬದ್ಧ—ಕಟ್ಟಿದ. ಕಾಂಚೀಕಟಿಸ್ಥಾನ—ಉಡೆನೂಲುಳ್ಳ ಸೊಂಟದೆಡೆ. ಮಂಜು—ಮನೋ ಹರ ಮಂಜೀರ—ಕಾಲಂದುಗೆ ಸಂಚಿಸ್ಸಿನಾದ (ಸಂಚಿನ್ನನಾದ?)—ಶಬ್ದಸಮೇತ. ಅಂಘ್ರಿ ಕಂಜಾತ—ಪಾದಪದ್ಮ ಮಾರ್ತಾಂಡ—ಸೂರ್ಯ. ಸಂಕಾಶ—ಸಮಾನ. ದುರಾಲೋಕ— ನೋಡಲು ಅಸಾಧ್ಯ. ಅವರಜಾರಾತಿ—ತಮ್ಮನ ಶತ್ರು (ನರಸಿಂಹನ ವರ್ಣನೆ ಇಲ್ಲಿ ಮೂಲ ಕ್ಕಿಂತಲೂ ಹೆಚ್ಚಾಗಿದೆ). ಶಲ್ಭ—ಪತಂಗದ ಹುಳು. ಕಕ್ಷಭುಕ್ ಜ್ವಾಲೆ—ಬೆಂಕಿಯ ಜ್ವಾಲೆ.

ಪೂರ್ವದಲ್—ಪೂರ್ವದಲ್ಲಿ. ಆಸ್ಯತೇಜೋಂಶ—ಮುಖಕಾಂತಿ. ಜಗಧ್ವಾಂತ—ಜಗತ್ತಿನ ಕತ್ತಲೆ. ಉದ್ಧೃದ್ಗದಾಧಾರಿ—ಎತ್ತಿ ಹಿಡಿದ ಗದೆಯುಳ್ಳವನು ಗರುತ್ಮಂತ—ಗರುಡ ಕಾಳಾಹಿ—ಕಾಳ ಸರ್ಪ ತದ್ಧಸ್ತದೊಳ್—ಆ ಕೈಯಲ್ಲಿ. ಬಿಡೂವಾದನ್—ಬಿಡಲ್ಪಟ್ಟನು. ಶರ್ವ—ರುದ್ರ ಶಕ್ರ—ಇಂದ್ರ ಆಕ್ಷ್ಮಾವಳಿ—ನಕ್ಷತ್ರ ಸಮೂಹ(?). ಢಾಲ್ (ಢಾಲ ?)—ಗುರಾಣಿ ಸಂಗರಶ್ರಾಂತಿ—ಕದನವಿರಾಮ. ಶ್ಯೇನಪಕ್ಷಿ—ಗಿಡುಗ ಜಂಘಾಲ—ಓಡುವುದು ಗೋಪ—ಗೂಳಿ(?) ತಲಾಘಾತ—ನೆಲದ ಹೊಡೆತ ಮಹೋರಸ್ಕಿಡಿರ್ದಂ—ದೊಡ್ಡ ಎದೆಯನ್ನು ಬಡಿದನು ಸಭಾದ್ವಾರ—ಪ್ರಕೃತದಲ್ಲಿ ಹೊಸಲಿಗೆ ಅನ್ವಯಿಸುತ್ತದೆ (ಮೂಲದಲ್ಲಿ ನರಸಿಂಹನು ಹಿರಣ್ಯಕಶಿಪುವನ್ನು ಸೀಳಿರುವುದನ್ನು "ವ್ಯಾಲೋ ಯಥಾ ಆಖುಂ" ಎಂಬ ಮತ್ತೊಂದು ಹೋಲಿಕೆಯ ಮೂಲಕ ತಿಳಿಸಿದೆ ಎಂದರೆ 'ಹಾವು ಇಲಿಯನ್ನು ಬಡಿದು ತಿನ್ನುವಂತೆ' ಎಂದು ಅರ್ಥ ) ಜಂಭಾರಿ—ವಿಷ್ಣು. ದಂಭೋಳಿ—ವಜ್ರಾಯುಧ ದಿವಾಸಂಧಿ—ಸಂಧ್ಯಾಕಾಲ ಸಂರಂಭ—ಭಯಾನಕ ದಂಷ್ಟ್ರ—ದಾಡೆ. ವ್ಯಾವೃತ್—ಆವರಿಸಿದ ಕರಾಳಾಕ್ಷ—ಭೀತಿಮಿಶ್ರಿತ ಕಣ್ಣು ವಕ್ತ್ರಾಂತ—ಕಟವಾಯಿ ಶೋಣ—ರಕ್ತ. ಲೇಲಿಹಾನ—ಚಪ್ಪರಿಸು, ನೆಕ್ಕು ಕಾಸಾರ—ಸರೋವರ ಪಂಚಾನನ—ಸಿಂಹ ಸಿಕ್ತಾನನ—ಬಳೆದ ಮುಖ ಜೀಮೂತ—ಮೇಘ ಅಬ್ಧಿ—ಸಮುದ್ರ. ಯಾನಾಳಿ—ವಾಹನ ಸಮೂಹ ಸಮಾಸೀನ—ಕುಳಿತಿರುವವನು. ಭ್ರಾಸ್ವತ್—ವಿರಾಜಿಸುವ ಅವಕಾಶ—ಮಧ್ಯಪ್ರದೇಶ ಸಂಕುಲೀಭೂತ—ಒಟ್ಟುಗೂಡಿರುವುದು ದುಂದುಭಿ—ಒಂದು ವಾದ್ಯ ಪಾರ್ಷದಾನೀಕ—ವೀಕ್ಷಕರ ಸಮೂಹ ಅವ್ಯಯಾತ್ಮ—ಶಾಶ್ವತ. ಸಂಭೂತಿ—ಆವಿರ್ಭಾವ. ಋಷಿಸ್ತೋಮ—ಋಷಿ ಸಮೂಹ. ರಕ್ಷೋಗಣಾಧ್ಯಕ್ಷ—ರಾಕ್ಷಸಶ್ರೇಷ್ಠನಾಗಿದ್ದ ಹಿರಣ್ಯಕಶಿಪು ತಿಲ—ಎಳ್ಳು. ಪಾಂತ್ರಾತ್ರಿಕಾಶ್ರಾದ್ಧ (ಪಿತ್ರ್ಯಾತ್ರಿಕಾ ಶ್ರಾದ್ಧ ?)—ಪಿತೃಸಂಬಂಧವಾದ ಶ್ರಾದ್ಧ. ಅಂಜಲೀಬದ್ಧ—ಕೈಮುಗಿದು ಅಷ್ಟಸಿದ್ಧಿ—ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಪೃಥಕ್—ಪ್ರತ್ಯೇಕ ತುಭ್ಯಂ—ನಿನಗೆ ಮರ್ಯಾದೆ—ನಿಯಮ "ಪ್ರಜೇಶಾವಯಂ ತೇ ಸತ್ತ್ವಮೂರ್ತೇಽವತಾರಃ" ನಾವು ನಿನ್ನಿಂದ ಸೃಷ್ಟಿಯಾದ ಪ್ರಜಾಪತಿಗಳು ಅವನಿಂದ ನಿಷೇಧಿತರಾಗಿ ನಾವು ಏನನ್ನೂ ಸೃಷ್ಟಿಸಲಾಗಲಿಲ್ಲ. ಈಗ ಇವನು ನಿನ್ನಿಂದ ಎದೆ ಸೀಳಲ್ಪಟ್ಟಿದ್ದಾನೆ. ಸತ್ತ್ವಮೂರ್ತಿಯ ಅವತಾರವು ಜಗತ್ತಿಗೆ ಮಂಗಳಕಾರಿಯಾಗಿದೆ ಆಶ್ರಾಂತ—ದಣಿವಾಗುವವರೆಗೆ ಪಂಚತ್ವ—ಮರಣ "ಪೊಂಗುಲಿಕ್ಕೆಚ್ಚೆ ತಾಂ ಕುಂಗಲಿಕ್ಕಲ್ಲದೇ"—ಆಸೆ ಅಧಿಕವಾಗುವುದು ತಾನು ಕುಗ್ಗುವುದಕ್ಕಾಗಿಯೇ ('ಅತ್ಯುನ್ನತಿಃ ಪತನ ಹೇತುಃ' ಎಂಬ ಸೂಕ್ತಿಯಂತಿದೆ ) ಉತ್ಪಥ—ದುರ್ಮಾರ್ಗ ಅಂಘ್ರಿಕಂಜಾತ—ಪಾದಪದ್ಮ ಸಂಸಾರವಾರಾಶಿ—ಸಂಸಾರ ಸಮುದ್ರ ಸಂಪೋತ—ಹಡಗು ಪಂಚವಿಂಶಾಖ್ಯ—ಇಪ್ಪತ್ತೈದನೆಯವನು (ಚತುರ್ವಿಂಶತಿ ತತ್ತ್ವಗಳ ಒಡೆಯ ) ದುಃಖಗೋಃಣೇಸು—ದುಃಖಗೊಳಿಸು (ಛಂದೋವಿಧಾನಕ್ಕೆ ತಕ್ಕಂತೆ ಮಾರ್ಪಡಿಸಿರುವ ವಿಶಿಷ್ಟ ಪ್ರಯೋಗ ) ಈತ ವೈಕುಂಠದಲ್ ನಿನ್ನ ದ್ವಾರಸ್ಥನಾಗಿಪ್ಪನಾ ವಿಪ್ರರಿಂದಲ್ ಮಹಾದೈತ್ಯ ಜನ್ಮಕ್ಕೆ ತಾ ಬಂದನ್ ವೈಕುಂಠದ ದ್ವಾರಪಾಲಕರಾದ ಜಯವಿಜಯರು, ವಿಷ್ಣುವಿನ ಸಂದರ್ಶನಕ್ಕಾಗಿ ಬಂದ ಸನಕಾದಿಮುನಿಗಳನ್ನು ತಡೆಯಲು ಅವರು ಕುಪಿತರಾಗಿ ದ್ವಾರಪಾಲಕರಿಗೆ ಶಾಪವಿತ್ತರು ಆ ಶಾಪದ ಮೇರೆಗೆ ಜಯವಿಜಯರು, ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪುಗಳಾಗಿಯೂ, ಎರಡನೆಯ ಜನ್ಮದಲ್ಲಿ ರಾವಣ, ಕುಂಭಕರ್ಣರಾಗಿಯೂ, ಮೂರನೆಯ ಜನ್ಮದಲ್ಲಿ ಶಿಶುಪಾಲ, ದಂತವಕ್ತ್ರರಾಗಿಯೂ ಹುಟ್ಟಿ, ಪರಮಾತ್ಮನೊಂದಿಗೆ ವೈರ ಸಾಧಿಸಿ ಹತರಾದರು ಪ್ರಕೃತದಲ್ಲಿ ಹಿರಣ್ಯಕಶಿಪುವು ನರಸಿಂಹಾವತಾರವೆತ್ತಿ ಬಂದ ವಿಷ್ಣುವಿನಿಂದ ಮರಣಹೊಂದಿದನು. (ಭಾಗವತ, III, ಅ ೧೬ ) ನಾಕಿಗಳ್—ಸ್ವರ್ಗದಲ್ಲಿರುವ ದೇವತೆಗಳು. ಸ್ವಾಂತ—ಮನಸ್ಸು ವ್ಯಗ್ರ—ಭಯ. ಈಸು—ಇಷ್ಟು ಕಿವಿಲ್ಲಾದರುಂ—ಕಿವಿಯಿಲ್ಲಾದರೂ (ವ್ಯಾವಹಾರಿಕ

ಪ್ರಯೋಗ.) ಸಪ್ಪಳ—ಪಾದದ ಶಬ್ದ. ವತ್ಸ—ಹುಡುಗ "ನಿಮ್ಮಪ್ಪಗಾಗಿಂದು ನಮ್ಮಪ್ಪನಲ್ಲಿಪ್ಪ ತತ್ಕ್ಷೇಪ ಸಂಕ್ಷೇಪಗೈಸು" ಎಂಬ ಕನ್ನಡ ಅನುವಾದ ತುಂಬ ಒಪ್ಪತಕ್ಕದ್ದಾಗಿದೆ ("ತಾತ ಪ್ರಶಮಯೋಪೇಹಿ ಸ್ವಪಿತ್ರೇ ಕುಪಿತಂ ಪ್ರಭುಂ"). ಪಿಲ್ಲೆ—ಹುಡುಗ (ಪಿಳ್ಳೆ) ಪೋಕಲಾಗು—(?) ಸಂತ್ರಸ್ತ ಚೇತೋಭಯಧ್ವಸ್ತವಂ—ಉಡುಗಿದ ಮನಸ್ಸಿನ ಭಯವಿನಾಶವನ್ನು ಮಾಡುವ, ಸ್ವಸ್ತಿದಾನಕ್ರಿಯಾಭ್ಯಸ್ತವಂ—ಮಂಗಳಕರವಾದ ಕಾರ್ಯಗಳನ್ನು ಮಾಡುವ ರೂಢಿಯುಳ್ಳ, ಶ್ರೀಸತೀಸ್ತಬಕವಿನ್ಯಸ್ತವಂ—ಲಕ್ಷ್ಮೀದೇವಿಯ ತುರುಬಿನ ಮೇಲೆ ಇಟ್ಟಿರುವ, ಹಸ್ತವಂ—ಕೈಯನ್ನು. ಇತ್ತನ್—ನೀಡಿದನು. ಅವ್ಯಾಹತ—ನಿರಂತರವಾದ ವಿಧೂತಾಶುಭವ್ರಾತ—ಅಮಂಗಳ ಸಮೂಹ ಪರಿಹಾರ ಪ್ರಹೃಷ್ಟತನು—ಸಂತೋಷಗೊಂಡ ಶರೀರ. ಕ್ಲಿನ್ನಚಿತ್ತ—ತೊಯ್ದ ಮನಸ್ಸು ಅಶ್ರುನೇತ್ರ—ಹಿಗ್ಗಿನಿಂದ ಕಣ್ಣೀರಿಂದ ಕೂಡಿ ಸಂಪು—ಸೊಂಪು ಅಂಕ—ತೊಡೆ ಲಸನ್ಮೌಕ್ತಿಕ—ಪ್ರಕಾಶಮಾನವಾದ ಮುತ್ತು ಮಂದಾರ—ಪಾರಿಜಾತ ಕುಂದ—ಮಲ್ಲಿಗೆ. ಅರವಿಂದ—ತಾವರೆ ಉಪವೀತ—ಜನಿವಾರ ಅಗರ್—ಸುವಾಸನಾದ್ರವ್ಯ ಉಪಹಾರ—ಕಾಣಿಕೆ ತಂತ್ರಸಾರ—ಶ್ರೀಮಧ್ವಾಚಾರ್ಯರಿಂದ ವಿರಚಿತವಾದ ಪೂಜಾವಿಧಾನಗಳನ್ನು ಕುರಿತ ಒಂದು ಗ್ರಂಥ ಶರ್ವ—ರುದ್ರ. ಶಕ್ರ—ಇಂದ್ರ ವಾಣಿ—ಸರಸ್ವತಿ ಶರ್ವಾಣಿ—ಪಾರ್ವತಿ. ಇಂದ್ರಾಣಿ—ಶಚಿದೇವಿ ಕೈಸ್ತೋತ್ರ(?)—ಪ್ರಾರ್ಥನೆ ಕೌಂತೇಯ—ಯುಧಿಷ್ಠಿರ ವ್ಯಾಸಜಂ—ಶುಕಾಚಾರ್ಯರು ನ್ಯಾಪತಿ—ಸ್ಥಳದ ಹೆಸರು ಐಹಿಕ—ಲೌಕಿಕ. ಆಮುಷ್ಮಿಕ—ಪಾರಮಾರ್ಥಿಕ.

೨೪

ಶ್ರೀರಾಮನ ಚರಣಸಂದರ್ಶನದ ಹಂಬಲವನ್ನು ಕುರಿತ ಈ ಕೀರ್ತನೆ ಆ ದೇವರ ಸ್ತುತಿಯಾಗಿದೆ.

ಕಠಿನ ಶಬ್ದಗಳ ಅರ್ಥ. ಕರುಣಾಲವಾಲ—ದಯೆಯ ಆಕರ ಅಜಭವ ಪೂಜಿತ—ಬ್ರಹ್ಮ ಮತ್ತು ಈಶ್ವರರಿಂದ ಆರಾಧಿಸಲ್ಪಡುವವನು ಗಜವರಭಾವಿತ—ಗಜೇಂದ್ರನ ಸ್ತುತಿಗೆ ಪಾತ್ರನಾದವನು. ವಿಹಂಗತುರಂಗ—ಗರುಡನನ್ನೇ ಕುದುರೆಯಾಗುಳ್ಳವನು, ಗರುಡವಾಹನ.

೨೫

ಇದು ಶ್ರೀವಿಷ್ಣುವನ್ನು ಕುರಿತ ಒಂದು ಪ್ರಾರ್ಥನೆ. ಶ್ರೀವಿಷ್ಣುವಿನ ಗುಣವಿಶೇಷಗಳನ್ನೆಲ್ಲ ಹೇಳಿದೆ

ಕಠಿನ ಶಬ್ದಗಳ ಅರ್ಥ ಸರಸಿಜನಾಭ—ಪದ್ಮನಾಭ ವಾಸಿ—ಕೀರ್ತಿ ಗಾಸಿ—ತೊಂದರೆ.

೨೬

ಇದು ಶ್ರೀನಿವಾಸ ದೇವರನ್ನು ಕುರಿತು ಆಹ್ವಾನಿಸುವ ಒಂದು ಕೀರ್ತನೆ. ಶ್ರೀನಿವಾಸ ದೇವರನ್ನು ಕೊಂಡಾಡುವ ನಿಮಿತ್ತದಿಂದ ಶ್ರೀಹರಿಯ ಲೀಲೆಗಳನ್ನು ವರ್ಣಿಸಿದೆ. ತರಳ ಪ್ರಹ್ಲಾದನ ಸಲುವಾಗಿ ನರಸಿಂಹಾವತಾರವೆತ್ತಿ ಹಿರಣ್ಯಕಶಿಪುವನ್ನು ಕೊಂದದ್ದು, ಶ್ರೀರಾಮಾವತಾರದಲ್ಲಿ ಸ್ವಾಮಿಸೇವಕನೆನ್ನಿಸಿದ ಹನುಮಂತನಿಗೆ ಅನುಗ್ರಹವಿತ್ತಿದ್ದು ಮೊದಲಾದಘಟನೆಗಳ ವಿವರಣೆಯಿದೆ. ಕಡೆಯಲ್ಲಿ, ಅದೇ ರೀತಿಯಲ್ಲಿ ತಮ್ಮನ್ನು ಕಾಮಬಾಧೆಯಿಂದ ದೂರವಿರಿಸೆಂದು ಕೋರುವ ಒಂದು ಆರ್ತವಾಣಿ ಕೇಳಿಬರುತ್ತದೆ ಸ್ವಾಮಿಯು ಕಾಣದಂತಾಗಲು, ಆತನನ್ನು ಮರೆಹೊಕ್ಕು ಸ್ಮರಿಸುವ ಚಿತ್ರವಿದೆ

ಕಠಿನ ಶಬ್ದಗಳ ಅರ್ಥ ಭಾಗವತರು—ಭಕ್ತರು. ಜಾಗುಮಾಡದೆ—ಸುಮ್ಮನಿರದೆ. ವಾತಸುತ—ಹನುಮಂತ ಶಿರೋಮಣಿ—ಚೂಡಾರತ್ನ ವಿಧಾತಪದವಿ—ಬ್ರಹ್ಮಪದವಿ (ಹನುಮಂತ

ನೇನೋ ಭಕ್ತಿಯೊಂದನ್ನೇ ಬೇಡಿದನೆಂದು ಸಾಧಾರಣವಾಗಿ ನಿರೂಪಿತವಾಗಿದೆ. ಆದರೆ ಜೀವೋತ್ತಮರಾದ ವಾಯುದೇವರು ಮುಂದೆ ಬ್ರಹ್ಮಪದವಿಯನ್ನು ಗಳಿಸಲಿರುವುದರಿಂದ ಇಲ್ಲಿ ಧ್ವನಿಪೂರ್ವಕವಾಗಿ ವಾಯುವಿನ ಅಂಶನಾದ ಹನುಮಂತನಿಗೂ ಆ ಮಾತನ್ನು ಪ್ರಯೋಗಿಸಿರಬಹುದು.) ವೀತಭಯ—ನಿರ್ಭಯ. ಮಲ್ಲಮರ್ದನ—ಚಾಣೂರ ಮುಷ್ಟಿಕರನ್ನು ಸಂಹರಿಸಿದಾತ. ಉತ್ತುಂಗ ಸುತ—(?)

## ೨೭

ಈ ಉಗಾಭೋಗದಲ್ಲಿ ಶ್ರೀಹರಿ ಹೇಗೆ ತನ್ನ ಭಕ್ತರ ಹೃದಯಮಂದಿರದಲ್ಲಿ ನೆಲೆಸಿರುವನು ಎಂಬುದರ ನಿರೂಪಣೆಯಿದೆ. ಅತನು ಸಾಲಿಗ್ರಾಮ ಬೃಂದಾವನಗಳಲ್ಲಿ ಭಕ್ತರ ಪ್ರೀತ್ಯರ್ಥವಾಗಿ ನೆಲೆಸಿರುವಂತೆಯೇ ತಮ್ಮಲ್ಲಿಯೂ ನೆಲೆಸಿರುವನೆಂದು ದಾಸರ ಅಚಲ ವಿಶ್ವಾಸ. ಪುಂಡರೀ(ಲೀ?)ಕನಿಗೆ ಒಲಿದ ಪಾಂಡುರಂಗನನ್ನು ಇಲ್ಲಿ ನಿಮಿತ್ತಮಾಡಿಕೊಂಡು ಕೊಂಡಾಡಿದ್ದಾರೆ. ಪುಂಡಲೀಕನೆಂಬ ಭಕ್ತನು ತನ್ನ ಮಾತಾಪಿತೃ ಸೇವೆಯಲ್ಲಿ ನಿರತನಾಗಿದ್ದಾಗ ಶ್ರೀಹರಿಯು ಬರಲು, ತನ್ನ ಸೇವೆ ಮುಗಿಯುವವರೆಗೆ ದೇವರನ್ನು ಇಟ್ಟಿಗೆಯ ಮೇಲೆ ನಿಂತಿರುವಂತೆ ಆಜ್ಞೆ ಮಾಡಿದನೆಂದೂ, ದೇವರು ಆತನ ಪಿತೃಭಕ್ತಿಗೆ ಮನವೊಲಿದನೆಂದೂ ಪ್ರತೀತಿ ಪ್ರಕೃತದಲ್ಲಿ ಪಂಡರಂಗೀಪುರದ ಹೆಸರೂ ಹೇಳಿರುವುದರಿಂದ ಇಲ್ಲಿ ಇದು ಆ ಪುಂಡಲೀಕನನ್ನೇ ಕುರಿತುದಾಗಿರಬಹುದು. ಪಂಢರಾಪುರಕ್ಕೆ ಕನ್ನಡದಲ್ಲಿ 'ಪಂಡರಗೆ' ಎಂಬ ಹೆಸರು ಇದ್ದುದಾಗಿ ಶಾಸನಗಳಿಂದ ತಿಳಿದು ಬರುತ್ತದೆ. ಕವಿ ಚಾಂಡರಸನು ಇದೇ ಸ್ಥಳವನ್ನು ಪಾಂಡುರಂಗಪುರವೆಂದು ನಿರ್ದೇಶಿಸಿದ್ದಾನೆ. "ಪುಂಡರೀಕ ಮನಪಿರಿಯಾನೆ"—ಪುಂಡರೀಕನ ಮನಸ್ಸಿಗೆ ಪ್ರಿಯನಾದವನು.

## ೨೮

ಈ ಸಣ್ಣ ಉಗಾಭೋಗದಲ್ಲಿ ದೇವರ ಔದಾರ್ಯವೆಂತಹುದೆಂಬುದನ್ನು ಹೇಳಿದೆ ಹರಿಭಕ್ತನು ತಿಳಿದೂ ತಿಳಿದೂ ಪಾಪ ಮಾಡುವುದಿಲ್ಲವಂತೆ ಅಜ್ಞಾನದಿಂದ ಮಾಡಿದ್ದೇ ಆದರೆ ಅದನ್ನು ಸ್ವಾಮಿ ಗಣಿಸುವುದಿಲ್ಲವಂತೆ. ಅವನನ್ನು ಮರೆಹೊಕ್ಕವರನ್ನು ಎಂದಿಗೂ ಕೈಬಿಡುವುದಿಲ್ಲವೆಂದು ದಾಸರಿಗೆ ವಿಶ್ವಾಸ ಇದಕ್ಕೆ ಶ್ರೀರಾಮನ ಆಶ್ರಯವನ್ನು ಕೋರಿ, ಉದ್ಧಾರನಾದ ಸುಗ್ರೀವನ ಉದಾಹರಣೆಯನ್ನು ಕೊಡುವರು (ರವಿಯ ತನಯ—ಸುಗ್ರೀವ.) ಈ ಉಗಾಭೋಗದ ಭಾವವೆಲ್ಲ ಇವನಿಗೆ ಚೆನ್ನಾಗಿ ಅನ್ವಯಿಸುತ್ತದೆ. ಅಣ್ಣನಾದ ವಾಲಿ ತೀರಿಹೋದನೆಂದು ಸುಗ್ರೀವನು ರಾಜಪದವಿಯನ್ನು ಸ್ವೀಕರಿಸಿದ. ನಿಜವೃತ್ತಾಂತವು ತಿಳಿಯಲು ಅಣ್ಣನ ಕ್ಷಮಾಪಣೆ ಕೇಳಿದ. ಆದರೂ ಕುಪಿತನಾದ ವಾಲಿ ಒಪ್ಪಲಿಲ್ಲ. ತಮ್ಮನ ಮೇಲೆ ಕೈಮಾಡಿದ. ಸುಗ್ರೀವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದ. ಕಡೆಗೆ ಶ್ರೀರಾಮನ ದಯೆಯಿಂದ ವಾಲಿಯ ಸಂಹಾರವಾಗಿ ಕಿಷ್ಕಿಂಧೆಗೆ ಅರಸನಾದ.

# ಅನುಬಂಧ ೪

# ಅಧಿಕ ಕೃತಿಗಳು

## ೧

ಈ ರಚನೆ ಸರ್ವದಾ ತಮ್ಮ ಮನಸ್ಸು ಪರಮಾತ್ಮನಲ್ಲಿಯೇ ನೆಲೆಸುವಂತೆಯೂ ಆತನ ಪಾದಸ್ಮರಣೆಯಲ್ಲಿಯೇ ನಿರತವಾಗುವಂತೆಯೂ ಕೋರುವ ದಾಸರ ಒಂದು ಪುಟ್ಟ ಪ್ರಾರ್ಥನೆ.

೨

ದಾಸರು ವೃದ್ಧರಾದರೂ ಅವರ ಮನಸ್ಸು ಸ್ಥಿಮಿತಕ್ಕೆ ಬಾರದೆ ಇರಲು ನೊಂದು ಪರಮಾತ್ಮನಲ್ಲಿ ಮಾಡಿಕೊಂಡ ಒಂದು ನಿವೇದನೆಯಿದು ಯಮದೂತರ ಕರೆ ಸಾರಿ ಬರುತ್ತಿದೆಯೆಂಬ ಅರಿವು ಅವರಲ್ಲಿ ಜಾಗೃತವಾಗಿದೆ ಆದರೂ ಚಿತ್ತಕ್ಕೆ ಇನ್ನೂ ನೆಮ್ಮದಿ ದೊರೆತಿಲ್ಲ. ಭಗವಂತನ ಅನುಗ್ರಹದಿಂದ ಅದು ಸಾಧ್ಯವಾಗಬೇಕು ತಾಯಿಯಾದವಳು ತನ್ನ ಮಕ್ಕಳನ್ನು ಎಂದಿಗೂ ಕೈಬಿಡುವಳಲ್ಲವಷ್ಟೆ ! ಅಂತೆಯೇ ಕರುಣಾನಿಧಿಯೆಂಬ. ತನ್ನ ಬಿರುದಿಗೆ ತಕ್ಕಂತೆ ಪರಮಾತ್ಮನು ತಮ್ಮನ್ನು ಅನುಗ್ರಹಿಸಬೇಕೆಂದು ಕೋರಿರುವರು.

೩

ಈ ಚಿಕ್ಕ ಉಗಾಭೋಗದಲ್ಲಿ, ವೇಣುಗೋಪಾಲನಾದ ಶ್ರೀಕೃಷ್ಣ ಮತ್ತು "ವ್ಯಾಸಮುನಿವಂದ್ಯ ಗೋಪಿನಾಥ" ಎಂಬ ಎರಡು ಉಲ್ಲೇಖಗಳಿರುವುದರಿಂದ ಶ್ರೀವ್ಯಾಸರಾಯರ ಜೀವನದಲ್ಲಿ ನಡೆದ ಒಂದು ಘಟನೆಯನ್ನೇನಾದರೂ ಇದು ಸೂಚಿಸಬಹುದೆ ಎಂದು ಭಾವಿಸಲು ಅವಕಾಶವಿದೆ.

ಒಮ್ಮೆ, ಶ್ರೀಪಾದರಾಜರು ತಮ್ಮ ಶಿಷ್ಯರಾದ ಶ್ರೀವ್ಯಾಸರಾಯರನ್ನು ಕರೆದು ತಮ್ಮ ಪೂಜಾ ಮೂರ್ತಿಗಳ ಅರ್ಚನೆ ಮಾಡುವಂತೆ ಹೇಳಿದರೆಂದೂ, ಆಗ ಶ್ರೀ ವ್ಯಾಸರಾಯರು, ಅವರೆಗೂ ಭದ್ರವಾಗಿದ್ದ ಸಂಪುಟವೊಂದನ್ನು ತೆಗೆಯಲು, ಅಲ್ಲಿ ಅವರಿಗೆ ಶ್ರೀ ಗೋಪಾಲಕೃಷ್ಣನ ಸಂದರ್ಶನವಾಗಿ ಅವನು ನರ್ತಿಸತೊಡಗಿದನೆಂದೂ, ಆ ಸಂದರ್ಭದಲ್ಲಿ ಶ್ರೀ ವ್ಯಾಸರಾಯರು ಹರ್ಷೋದ್ರೇಕದಿಂದ ಪುಳಕಿತರಾಗಿ ಸಾಲಿಗ್ರಾಮಗಳನ್ನೇ ತಾಳದಂತೆ ಬಾರಿಸುತ್ತ ತಾವೂ ಕುಣಿಯತೊಡಗಿದರೆಂದೂ, ತಮ್ಮ ಶಿಷ್ಯರ ಮೂಲಕ ಈ ವೃತ್ತಾಂತವನ್ನು ತಿಳಿದ ಶ್ರೀಪಾದರಾಜರು ಅಲ್ಲಿಗೆ ಬರಲು, ಶ್ರೀ ಗೋಪಾಲಕೃಷ್ಣನು ಅಪೂರ್ವವಾದ ತನ್ನ ನರ್ತನ ಭಂಗಿಯಲ್ಲಿ ಅಂತೆಯೇ ನಿಂತನೆಂದೂ ಒಂದು ಪ್ರತೀತಿಯಿದೆ. ಇದು ಆ ಸಂದರ್ಭದಲ್ಲಿ ಸಂತುಷ್ಟರಾದ ಶ್ರೀಪಾದರಾಜರು ಶ್ರೀವೇಣುಗೋಪಾಲನನ್ನು ಕುರಿತು ಮಾಡಿರುವ ಸ್ತುತಿಯಾಗಿರಬಹುದೆ ಎಂದು ಸಂದೇಹ. ಇಲ್ಲಿ ಹೇಳಿರುವ ಗೋಪಿನಾಥ ವಿಗ್ರಹವು ಶ್ರೀ ಪದ್ಮನಾಭ ತೀರ್ಥರಿಂದ ಅನೂಚಾನವಾಗಿ ಪೂಜೆಮಾಡಿಕೊಂಡು ಬಂದಿರುವ ಶ್ರೀಪಾದರಾಜರ ಮಠದ ಆರಾಧ್ಯ ಮೂರ್ತಿ. ಶ್ರೀಪಾದರಾಜರಿಗೆ ಭೀಮಾನದಿಯ ದಡದಲ್ಲಿ ದೊರೆತ ಸಂಪುಟದಲ್ಲಿ ಶ್ರೀರಂಗವಿಠಲನ ವಿಗ್ರಹ ಬೇರೆ ಲಭಿಸಿತು. ಅದು ಅವರ ಅಂಕಿತ ದೇವತೆ ಎನ್ನಬಹುದು.

ಈ ಸಣ್ಣ ಉಗಾಭೋಗದಲ್ಲಿರುವ ವೇಣುಗೋಪಾಲ ಮೂರ್ತಿಯ ವರ್ಣನೆ ಸುಂದರವಾಗಿದೆ. ರಂಗನು ತುರುಬಿನಲ್ಲಿ ಮೊಲ್ಲೆ ಮಲ್ಲಿಗೆಗಳನ್ನು ಮುಡಿದಿರುವನು ಕೈಯಲ್ಲಿ ಕೊಳಲು ವಿರಾಜಿಸುತ್ತಿದೆ ಆತನು ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವ ಕಲ್ಪತರುವಿನಂತಿದ್ದಾನೆ ಕೊಳಲ ಇನಿದನಿಗೆ ದುಂಬಿಗಳು ಗುಂಜಾರವ ಮಾಡುತ್ತಿವೆ. ಇಂಥ ಮನೋಹಾರಿಯಾದ ಮುರಲೀಲೋಲನು ತಮ್ಮನ್ನು ಸಂರಕ್ಷಿಸಲೆಂಬುದಾಗಿ ಶ್ರೀಪಾದರಾಜರು ಹೃದಯ ತುಂಬಿ ಪ್ರಾರ್ಥಿಸಿರುವರು.

ಕಠಿನ ಶಬ್ದಗಳ ಅರ್ಥ: ತುರುಬಿದ—ಮುಡಿದ. ವೇಣು—ಕೊಳಲು. ಅಧರ—ಕೆಳದುಟಿ.

೪

ಈ ಕೀರ್ತನೆಯಲ್ಲಿ ಶ್ರೀಪಾದರಾಜರ ಪೂಜಾಮೂರ್ತಿಯಾದ ಶ್ರೀರಂಗವಿಠಲನ ಸರ್ವಾಂಗ ಸುಂದರವಾದ ವರ್ಣನೆಯಿದೆ. ಶ್ರೀಗಳವರು ತಮ್ಮ ಇಷ್ಟದೇವತೆಯಲ್ಲಿ ಶರಣಾಗುವ ಈ ಸನ್ನಿವೇಶ ಭಾವಪೂರ್ಣವಾಗಿದೆ. ಈ ಅಂಗಾಂಗಗಳ ವಿವರ ಮಕುಟದಿಂದ ಹಿಡಿದು ಅಂಘ್ರಿಗಳ ವರೆಗೂ ಸಾಗುವುದಲ್ಲದೆ, ಕಡೆಯಲ್ಲಿ ರುಕ್ಮಿಣೀ ಸತ್ಯಭಾಮಾ ಸಮೇತನಾದ ರಂಗನ ಲಾವಣ್ಯವನ್ನು ಶೃಂಗಾರಪೂರ್ಣವಾಗಿ ಸೂಚಿಸಿರುವಂತಿದೆ.

ಸಿರಿಸಹೋದರನರ್ಧದವಳಿಗೆ ಶರಣು : ಈ ಪಂಕ್ತಿಯ ಅರ್ಥ ತೊಡಕಾಗಿದೆ. ಒಟ್ಟು ಕೀರ್ತನೆಯಲ್ಲಿ ಅವಯವಗಳ ವರ್ಣನೆಯಿರುವುದರಿಂದ ಈ ವಾಕ್ಯವನ್ನು ಇಲ್ಲಿ ಅನ್ವಯಿಸುವುದೂ ಕಷ್ಟವಾಗಿದೆ.

ಕುಬ್ಜೆಯನು ಡೊಂಕ ತಿದ್ದಿದ ಭುಜಗಳಿಗೆ ಶರಣು : ಶ್ರೀಕೃಷ್ಣನು ಮಧುರೆಯನ್ನು ಪ್ರವೇಶಿಸುತ್ತಿದ್ದಾಗ ಕುಬ್ಜೆ ಎಂಬಾಕೆ ರಾಜನಿಗಾಗಿ ತೆಗೆದುಕೊಂಡು ಹೋಗುತ್ತಿದ್ದ ಗಂಧವನ್ನು ಕಂಡು ತಾನೇ ಬಳಿದುಕೊಂಡು, ಆಕೆಯ ಗೂನನ್ನು ನಿವಾರಿಸಿದನು (ಭಾಗವತ, x, ಅ. ೪೨).

ಕಠಿನ ಶಬ್ದಗಳ ಅರ್ಥ : ಮಕುಟ—ಕಿರೀಟ. ನೀಲಕುಂತಳ—ಕಪ್ಪಾದ ಕೂದಲು. ಸೋಗೆಗಣ್ಣು—ನವಿಲಿನ ಕಣ್ಣುಗಳಂತೆ ಹೊಳೆಯುವ ಕಣ್ಣು. ನಾಸಿಕ—ಮೂಗು. ಕರ್ಣಕುಂಡಲ—ಕಿವಿಗಳ ಆಭರಣ. ದರ್ಪಣನಿಭ—ಕನ್ನಡಿಯಂತೆ. ಕಪೋಲ—ಕೆನ್ನೆ. ಕುಂದಕುಟ್ಮಲ—ಮಲ್ಲಿಗೆ ಮೊಗ್ಗು. ಬಿಂಬೋಷ್ಠ—ಪ್ರಕಾಶಮಾನವಾದ ತುಟಿ. ಚಂದ್ರಿಕಾನಿಭ—ಬೆಳದಿಂಗಳಿನಂತೆ. ಕಂಬು—ಶಂಖ. ಅಬ್ಜಜಾಸನ—ಬ್ರಹ್ಮ. ನಾಭಿ—ಹೊಕ್ಕಳು. ಕಟಿ—ಸೊಂಟ. ಕದಳಿ—ಬಾಳೆ. ಪುನ್ನಾಗಕರ—ಆನೆಯ ಸೊಂಡಿಲು. ನಿತಂಬ—ಪಿರ್ರೆ. ಸಮಜಾನು—ಸಮನಾದ ಮೊಣಕಾಲು. ಅಂಘ್ರಿದ್ವಯ—ಎರಡು ಪಾದಗಳು. ತುಂಗಕುಚ—ದೊಡ್ಡ ಮೊಲೆ. ಅಂಗುಲಿ—ಬೆರಳು.

# ಸ್ವರಪ್ರಸ್ತಾರ

## ೧

## "ರಂಗನಾಥನ ನೋಡುವ ಬನ್ನಿ"

(ಕೀ. ಸಂ. ೪೮)

ರಾಗ : ನಾಟಿ (೩೬ನೇ ಚಲನಾಟದಲ್ಲಿ ಜನ್ಯ), ಮಿಶ್ರ ಛಾಪುತಾಳ

ಸ ರಿ ಗ ಮ ಪ ದ ನಿ ಸ          ಸ ನಿ ಪ ಮ ರೀ ಸ
೩ ೩ ೧ ೩ ೩

ಪಲ್ಲವಿ ‖ ಪಾಮ । ಗಮ । ರಿಸ ‖ ಸರಿಸ । ಸನಿ । ರಿಸ ‖ ರೀೕ । ರೀ । ರಿಸ ‖
ರಂಗ ನಾ- ಥನ ನೋಡು ವ_ ಬ_ ನ್ನಿ-- --ಶ್ರೀ-

‖ ರಿಗಮ । ಪಾ । ಪಪ ‖ ಸನಿಪ । ಪಮ । ನಿಪಪಮ ‖ ರೀೕ । ಪಮರಿಸ । ಸರಿಗಮ ‖
ರಂಗ ನಾ- ಥನ ನೋಡು ವ_ ಬ_ ನ್ನಿ---‖ ಶ್ರೀ--- ----

### ಅನುಪಲ್ಲವಿ

‖ ರಿಗಮ । ಪಾ । ನಿಪ ‖ ಸಸನಿ । ಪಪ । ಸನಿ ‖
ರಂ-ಗ ನಾ ದಿವ್ಯ ವಿಮಾನ ದಲ್ಲಿ ಹನ

‖ ಸರಿಸ । ಸನಿ । ಪಮ ‖ ಗಮಪನಿ ಸನಿ । ಪಮರಿಸ । ನಿಸರಿಸ ‖ ರೀೕ । ಸಾ । ಸಾ ‖
ರಂ-ಗ ನಾ- ಥನ ನೋ-- ಡು- ವ___ ಬ-- ನ್ನಿ-- -- --

### ಚರಣ

೧. ‖ ಸಸರೀಸಾ । ಪಾ । ಪಪ । ಪಪನೀಪಾ । ಪಮ । ಮಗ ‖
ಕಮನೀಯ ಗಾ ತ್ರನ ಕರುಣಾಂತ ರಂ- ಗನ

‖ ಮಪಮ । ಮರೀ । ರಿಸ । ರಿಗಮ । ಪಾ । ಪಾ ‖
ಕಾ- ಮಿ ತಾರ್ಥವೀವ ಕ- ಲ್ಪ ವೃ- ಕ್ಷನ

‖ ಗಮಪಾ ನಿ । ಪಸ । ಸನಿ ‖ ಸ ರಿ ಸ । ಸನಿಪಾ । ನಿಸ ‖
ಕಮಲ ದ ಳನೇ ತ್ರನ ಕಸ್ತೂರಿ ರಂ- ಗನ

‖ ರಿ ಸ ಸ । ನಿ ಪ । ಪಮ । ಗಮಪನಿ ಸನಿ । ಪಮರಿಸ । ಸರಿಗಮ ‖
ಕಾಮಧೇ ನು ಕಾ ವೇರಿ ರಂ--- ಗ_ ನ___ ___ ‖ ರಂಗನಾಥನ ‖

ಮೊದಲಿನ ಚರಣದಂತೆ

೨. ವಾಸುಕಿಶಯನನ ವಾರಿಧಿನಿಲಯನ । ವಾಸುದೇವ ವಾರಿಜನಾಭನ ।
ವಾಸವಾದಿ ಭಕ್ತಹೃದಯಾಂಬುಜದಲ್ಲಿ । ವಾಸವಾಗಿರುತಿಹ ವಸುದೇವಸುತನ ।
॥ ರಂಗನಾಥನ ॥

೩. ಮಂಗಳಗಾತ್ರನ ಮಂಜುಳಭಾಷನ । ಗಂಗಾಜನಕ ಅಜಜನಕನ ।
ಸಂಗೀತಲೋಲನ ಸಾಧುಸಮ್ಮತನ । ರಂಗವಿಠಲ ರಾಜೀವನೇತ್ರನ ॥
॥ ರಂಗನಾಥನ ॥

೨

## "ಉತ್ತಮರ ಸಂಗ ಎನಗಿತ್ತು ಸಲಹೋ"

(ಕೀ.ಸಂ. ೮)

ರಾಗ : ಕಾಂಬೋಧಿ (೨೮ನೇ ಹರಿಕಾಂಬೋದಿಯಲ್ಲಿ ಜನ್ಯ), ಝಂಪೆತಾಳ

ಸ ರಿ ಗ ಮ ಪ ದ ಸ        ಸ ನಿ ದ ಪ ಮ ಗ ರಿ ಸ ನಿ ಪ ದ ಸ
೨ ೨ ೧ ೩ ೨ ೩

ಪಲ್ಲವಿ ॥ ೯, ಪ । ದಸಸ । ಸಾ । ಸ, ಪದ ॥ ಸದ । ದರಿಸನಿದಾ ॥ ದಪ । ಪಾ, ಮ ॥
_ ಉ ತ್ತಮರ ಸಂ ಗ ಎನ ಗಿ- ತ್ತು_ಸ_ಲ ಹೋ _ _

॥ ೯, ಪದ । ಸದಪ ॥ ಮಗ । ರಿಸಸ ॥ ಸರಿ । ಪಮಗ ॥ ಗರಿ । ಸಾಸ ॥
_ ಉ_ ತ್ತಮರ ಸಂ_ ಗ ಎನ ಗಿ_ ತ್ತು ಸ್ಸಲ ಹೋ - _ _

ಅನುಪಲ್ಲವಿ

॥ ೯, ಮ । ಗಪದ ॥ ಸರಿ । ಗಗರಿ ॥ ಮಗ । ರಿಸದ । ರಿಸ । ನಿದಪ ॥
_ ಚಿ ತ್ತಜ_ ಜನ ಕಸ_ ರ್ವೋ ತ್ತಮಮು ಕುಂ- _ _ದ
॥ ಉತ್ತಮರ ಸಂಗ ॥

ಚರಣ

೧. ॥ ೯, ಮಗ । ರಿಸನಿ ॥ ಪ।ದ । ಸಾಸ ॥ ೯ ಸರಿ । ಗಮಾ ॥ ಪಪ । ಪಾಪ ॥
ತಿರು ತಿರುಗಿ ಪುಟ್ಟ ಲಾರೆ _ ಪರ ರ ಬಾ ಧಿಸ ಲಾರೆ

॥ ೯, ಪಪ । ಪಪಪ ॥ ಪಾ । ದ ಮಗ ॥ ೯ ಪದ । ದ, ಸನಿಪದ ॥ ಸಾ । ಸಾಸ ॥
_ ಪರಿ ಪರಿಯ ಪಾ ಪ ಗಳ _ ಮಾ ಡ ಲಾ_ _ ರೆ_ _ _ _

॥ ೯ ಪದ । ಸರಿಗ ॥ ಗಗ । ಮಗಗ ॥ ರಿ ಸರಿ । ಗ ಸಸ ॥ ಸನಿ । ದಪದ ॥
ಮರ ಣಜನ ನಗ ಳೆರಡು _ ಪರಿ ಹ ರವ ಮಾ- ಡ_ಯ್ಯ

|| ೭, ಪದ | ಸಾದ || ರಿ ಸ | ನಿದಪ || ದಪ | ಮಗಸ || ರಿಗ | ಮಪದ ||
_ ಕರು ಣಾಸ ಮು- ದ್ರಮುರ ವೈ- ರಿ ಶ್ರೀ- ಕೃ- ಷ್ಣ- -
ಮ || ಉತ್ತಮರ ||

ಮೊದಲಿನ ಚರಣದಂತೆ

೨. ಏನ ವೇಳಲಿ ದೇವ ನಾ ಮಾಡಿದ ಕರ್ಮ
ನಾನಾ ವಿಚಿತ್ರವೈ ಶ್ರೀನಿವಾಸ
ಹೀನಜನರೊಳಗಾಟ ಶ್ವಾನಾದಿಗಳ ಕೂಟ
ಜ್ಞಾನವಂತನ ಮಾಡೊ ಜಾನಕೀರಮಣ
|| ಉತ್ತಮರ ||

೩ ನಿನ್ನ ನಂಬಿದಮೇಲೆ ಇನ್ನು ಭಯವ್ಯಾತಕೆ
ಪನ್ನಗಾಧಿಪಶಯನ ಮನ್ನಿಸಯ್ಯಾ
ಮುನ್ನ ಭಕುತರನೆಲ್ಲ ಚೆನ್ನಾಗಿ ಪಾಲಿಸಿದ
ಎನ್ನೊಡೆಯ ರಂಗವಿಠಲ ಎನ್ನ ದೊರೆಯೋ
|| ಉತ್ತಮರ ||

## ೩

## "ನಂದನಂದನ ಪಾಹಿ"

(ಕೀ.ಸಂ. ೨೬)

ರಾಗ : ವಸಂತ (೧೭ನೇ ಸೂರ್ಯಕಾಂತದಲ್ಲಿ ಜನ್ಯ), ಅಟ್ಟತಾಳ

ಸಮಗಮದಾನಿಸ ಸನಿದ ಮಗರಿಸ
೩೨ ೧ ೩೧

ಪಲ್ಲವಿ || ಮಗಮದಮ | ದನಿಸಾ, ದನಿ | ಸನಿದಮ | ಗರಿಸಾ ||
ನಂದನಂದನ ಪಾ-ಹಿ ಗೋ ವಿಂ- - - - - -ದ

|| ಮಗಮ ದಮ | ದನಿ ಸರಿಸನಿ ದನಿ | ಸನಿದಮ | ಗರಿಸಾ ||
ನಂ ದ ನಂ ದನ ಪಾ- ಹಿ - - ಗೋ ವಿಂ - - - - - ದ

|| ಸಸನಿ ಸರಿ | ಸನಿದನಿಸನಿದಾ | ಸನಿದಮ | ಗರಿಸಾ ||
ಸುಂದರ ರೂ ಪ ಗೋವಿಂ- -ದ ಮು- ಕುಂ - - ದ
|| ನಂದನಂದನ ಪಾಹಿ ||

ಚರಣ

೧. || ಮಮಮಮ ಮಾಮದ | ದಮಗಾ ಗಮ ದಮ | ದನಿ | ಸಸ ||
ದಿನ ಕರ ಭವ _ ಪಾ_ ಲ ಕನಕಾಂಕಿ ತ_ ಚೇಲ

॥ ಸಸ ಸನಿ ಗರಿ । ಸಾಸನಿ ದನಿಸನಿದಾ । ಸನಿದಮ । ಗರಿಸಾ ॥
ಜನ ಕಜಾ ಲೋ — ಲ — ಜನಕಾ — ನು ಕೂ — — — — — ಲ

॥ ನಂದನಂದನ ಪಾಹಿ ॥

ಮೊದಲಿನ ಚರಣದಂತೆ

೨. ಪವನಜ ಪರಿವಾರ ಯುವನವಿದಾರ ।
ನವರತ್ನಹಾರ ನವನೀತ ಚೋರ ॥

॥ ನಂದನಂದನ ಪಾಹಿ ॥

೩ ತುಂಗ ವಿಹಂಗ ತುರಂಗ ದಯಾಪಾಂಗ ।
ರಂಗವಿಠಲ ಭವಭಂಗ ಶುಭಾಂಗ ॥

॥ ನಂದನಂದನ ಪಾಹಿ ॥

೪

## "ಭಕ್ತಿ ಬೇಕು ವಿರಕ್ತಿ ಬೇಕು"

(ಕೀ ಸಂ. ೩೭)

ರಾಗ: ಶಂಕರಾಭರಣ (೨೯ನೇ ಮೇಳಕರ್ತ), ಆದಿತಾಳ

ಸ ರಿ ಗ ಮ ಪ ದ ನಿ ಸ     ಸ ನಿ ದ ಪ ಮ ಗ ರಿ ಸ
೨ ೩ ೧ ೨ ೩

ಪಲ್ಲವಿ ॥ ಗಮಪಾ ಪಮಗಾ ಗರಿಗರಿಸಾ, ಸ । ಸಸ ದ ನಿ । ಸಾ, ಸಾಗರಿ ॥
ಭ_ಕ್ತಿ ಬೇ — — ಕು — — — ವಿ ರಕ್ತಿ ಬೇ_ ಕು ಸರ್ವ

॥ ಗಮಪಾಪಾ ಸಸ । ಪಾಸನಿದಾ, ಪ । ಮಗಮರಿ ॥
ಶಕ್ತಿ ಬೇಕು ಮುಂದೆ ಮುಕ್ತಿ_ಯ ಬ ಯಸುವಗೆ

॥ ಗಮದಪ ಪಮಗರಿ ಪಮಗರಿಸಾ, ಸ । ಸಸ ದ ನಿ । ಸಾ, ಪಮಗರಿ ॥
ಭ_ ಕ್ತಿ_ ಬೇ — — ಕು — — — ವಿ ರಕ್ತಿ ಬೇ_ ಕು ಸ_ ರ್ವ_

॥ ಗಮಪಾಪಾ ಮಪದನಿ । ಸರಿಗರಿಸನಿದಪ । ಸನಿದಪಮಗಮರಿ ॥
ಶಕ್ತಿ ಬೇಕು ಮುಂ_ದೆ ಮು_ ಕ್ತಿ_ ಯ_ _ಬ ಯ_ಸು ವಗೆ_

॥ ಭಕ್ತಿ ಬೇಕು ॥

### ಚರಣ

೩. ॥ ಗಮಾಪ ಪಪಪಪಪಾಪಮ । ಪಸಾಸ । ಸಸದಾ ನಿಸ ॥
ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿ ಬೇಕು

॥ ಸ ರೀ ಸ ಸನಿದಾಪಮ । ಪಸ ಸನಿದಾ ಪಪ । ಗಾಮಪಗಾಮರಿ ॥
ರಂಗವಿ ರ — — ಲನ್ನ ಬಿಡದೆ — — ನೆರೆ ನಂಬಿರಬೇಕು

॥ ಭಕ್ತಿ ಬೇಕು ॥

ಮೇಲಿನ ಚರಣದಂತೆ

೧. ಸತಿ ಅನುಕೂಲಬೇಕು ಸುತನಲ್ಲಿ ಗುಣಬೇಕು ।
ಮತಿವಂತನಾಗಬೇಕು ಮತ ಒಂದಾಗಿರಬೇಕು ॥
॥ ಭಕ್ತಿಬೇಕು ॥

೨. ಜಪದ ಜಾಣುವೆ ಬೇಕು ತಪದ ನೇಮವೆ ಬೇಕು ।
ಉಪವಾಸ ವ್ರತಬೇಕು ಉಪಶಾಂತವಿರಬೇಕು ॥
॥ ಭಕ್ತಿಬೇಕು ॥

## 'ಪೋಪು ಹೋಗೋಣ ಬಾರೋ ರಂಗ'

(ಕೀ ಸಂ. ೩೩)

ರಾಗ : ಧನ್ಯಾಸಿ (೮ನೇ ಹನುಮತೋಡಿಯಲ್ಲಿ ಜನ್ಯ), ಆದಿತಾಳ

ಸ ಗಾ ಮ ಪ ನಿ ಸ ।  ಸ ನಿ ದ ಪ ಮ ಗ ರಿ ಸ
೨೧ ೧೨೧

ಪಲ್ಲವಿ ॥ ೯, ಪರಿಸ ಸನಿದಾ ಪಮ । ಪಪಮಗ ಗರಿ । ಸಾ ಸರಿರಿಸ ॥
ಪೋಪು ಹೋ- ಗೋಣ ಬಾ _ _ _ _ ರೋ ರಂಗ-

ಸ
॥ ನಿ ಸಗಮ ಪಾ ಪನಿಸಾ । ನಿದಪಾ ಪಾ । ಪನಿ ನೀ ॥
_ ಪೋ_ಪು ಹೋಗೋಣ ಬಾ_ _ ರೋ _ _

ನಿ
॥ ೯ ಗರಿಸ ನಿದಪಮ । ಗಮಪನಿ ಸರಿಸನಿ । ದಪಮಪಮಗರಿಸ ॥
ಪೋಪು ಹೋ-ಗೋಣ ಬಾ _ _ _ _ _ _ _ ರೋ_ _ರಂ_ಗ_

ಮ
॥ ನಿ, ಸಗಮಪಾ ಪನಿಸಾ । ನಿದಪಾಪಾ । ಪನಿಸಗ ॥ ೯, *
_ ಪೋ-ಪು ಹೋಗೋಣ ಬಾ _ _ _ ರೋ_ _
॥ ಪೋಪು ಹೋಗೋಣ ॥

ಚರಣ

೩. ॥ ಪಾಪಪಪ, ಪಾಪಪಪಮ, ಗಮ । ಪಾಸನಿದಪಾ । ಪನಿನೀ ॥
ಪಾಂಡವರು ಕೌರವರಿಗೆ ಲೆತ್ತ ವಾ_ಡಿ ಸೋ_ತ ರಂ ತೆ

॥ ಸಾ೦ರಿ ನೀ೦ಸ ಪಪಪನಿಮಪ । ಪಸಾ೦ನಿ ದಪಪಮ । ಗಮ೦ಪಾ ಪನಿಸಗ ॥
ರಾ_ಜ್ಯವನ್ನು ಬಿಡಬೇಕಂತೆ ರಂ_ಗ ವಿ_ಠಲ ಬರಬೇಕಂ_ತೆ_
॥ ಪೋ೦ಪು ಹೋ೦ಗೋ೦ಣ ॥

ಮೇಲಿನ ಚರಣದಂತೆ

೧. ಜಾಹ್ನವಿಯ ತೀರವಂತೆ ಜನಕರಾಯನ ಕುವರಿಯಂತೆ
ಜಾನಕಿಯ ವಿವಾಹವಂತೆ ಜಾಣ ನೀ ಬರಬೇಕಂತೆ

೨. ಕುಂಡಿನೀಯ ನಗರವಂತೆ ಭೀಷ್ಮಕನ ಕುವರಿಯಂತೆ
ಶಿಶುಪಾಲನ ಒಲ್ಲಳಂತೆ ನಿನಗೆ ವಾಲೆ ಬರೆದಳಂತೆ

೬

## 'ಭೂಷಣಕೆ ಭೂಷಣ'

(ಕೀ.ಸಂ ೩೮)

ರಾಗ: ಸಾರಂಗ (೬೫ನೇ ಮೇಚಕಲ್ಯಾಣಿಯಲ್ಲಿ ಜನ್ಯ), ಝಂಪೆತಾಳ

ಸ ರಿ ಗ ಮ ಪ ದ ನಿ ಸ ಸ ನಿ ದ ಪ ಮ ರಿ ಗ ಮಾ ರೀ ಸಾ
೩ ೨ ೨ ೨ ೩ ೧

ಪಲ್ಲವಿ ॥ ಸಾ । ನಿದಪ ॥ ಪಮ । ದಪಮ ॥ ರಿರಿ । ಗಮರಿ ॥ ರಿಸ । ಸಾಸ ॥
ಭೂ ಷಣಕೆ ಭೂ_ ಷಣ_ ಇದು ಭೂ_ಷ ಣ_ _ _

॥ ಸರಿ । ಸಪಮ ॥ ಪಾ । ದಪಾ ॥ ಪಮ । ರಿಗಮ ॥ ಪಾ । ಪದನಿ ॥
ಶೇ_ ಷಗಿರಿ ವಾ ಸಶ್ರೀ ವರ ವೇಂಕ ಟೇ ಶ_ _

॥ ಸನಿ । ರಿನಿದ ॥ ಪಮ । ನಿದ ಪಮ ॥ ಪದಪಮ । ರಿಗ ಮರಿ ॥
ಭೂ_ ಷಣಕೆ ಭೂ_ ಷ_ ಣ_ ಇ_ದು_ ಭೂ_ _ಷ

ರಿಸ । ಸಾಸ ॥
ಣ_ _ _

॥ ಸರಿ । ಸಪಮ ॥ ಪದ । ಪ, ಮಪದನಿ ॥ ಸರಿಸನಿ । ದಪಪಮರೀ
ಶೇ_ ಷಗಿರಿ ವಾ_ ಸ ಶ್ರೀ_ _ ವ_ರ_ ವೆಂ_ _ -ಕ

ಗಮ । ಪದನಿ ॥
ಟೇ _ಶ_

॥ ಭೂಷಣಕೆ ಭೂಷಣ ॥

|| ಸಗ | ಮಪಾ || ಪಾ | ನಿಪಮ || ಮಗ | ಮಪಮ || ಮಾ | ಮಾ ||
ಬಾ– ಲ ಶ್ರೀ ರಾ ಮಲಾ– ಲಿ– – – – – – –

ಅನುಪಲ್ಲವಿ

|| ಪಾ | ಮಪಸ || ಸಾ | ಸಸನಿ || ರಿಸ | ಸನಿದ || ಪಾ | ನಿಪಮ ||
ಲಾ ಲಿಮುನಿ ವಂ ದ್ಯಲಾ– ಲಿ– ಜಾ–ನ ಕೀ – – –

|| ಗಮ | ಪಪಾ || ನಿಪ | ಮಗರಿ || ಗಾ | ಗಾಽ || ಪಮ | ಗರಿಸ ||
ರಮ ಣಶ್ರೀ ರಾ– ಮಲಾ– ಲಿ – – – – – – – –

ಚರಣ ೧ : ಕಲ್ಯಾಣಿ

|| ಗದ | ಪಗಾ || ರಿಸ | ನಿರಿಸ || ರೀ | ರೀಽ || ಗದ | ಪಮರಿ ||
ಪ– ಲ್ಲವಾ ಧರೆ ಯರೆ– ಲ್ಲ– – – ಈ– ಶಿಶುವು

|| ಗಸ | ನಿದಪ || ಮರಿ ಗದಪಮ || ಗರಿ | ಸಾಸ || ಸಾ | ಸಾಽ ||
ತು– ಲ್ಯವ– ರ್ಜಿತನೆ ನುತ ಲಿ– – – – – – –

|| ಗಮ | ಪದನಿ || ಸಗ | ರಿಸಾ || ನಿರಿ | ಸನಿದ || ಪಮ | ಪದನಿ ||
ಸ– ಲ್ಲಲಿತ ಗಾ– ನದಿಂ ದ– ತೂ–ಗಿ ದ– ರು––

|| ಸರಿ | ನಿದಪ || ಮಗ | ನಿದಮ || ಗನಿ | ದಮಗ || ದಮ | ಗರಿಸ ||
ಕ– ಲ್ಯಾ–ಣಿ ರಾ– ಗದಿಂ ದ– – – – – – – – –

ಚರಣ ೨ : ಆನಂದಭೈರವಿ

|| ಸನಿ | ಸಗರಿ || ಗಮ | ಪಪಮ || ಪದ | ದನಿ ಪ || ಪಪ | ಮಗರಿ ||
ಆ– ನಂದ ಸದ ನದೊಳ ಗೆ– ಗೋ–ಪಿ ಯ– ರು – –

|| ಗಮ | ಪದಪ || ಮಗ | ರಿಸನಿ || ಸಪ | ಮಗರಿ || ಸಾ | ಸಾಽ ||
ಆ– ನಂದ ಸುತ ನಕಂ– ಡು– – – – – – – –

|| ಪಮ | ಪಾಪ || ಸಸ | ಸಸನಿ || ರಿಸ | ಸನಿದ || ಪಾ | ನಿಪಮ ||
ಆ– ನಂದ ಭರಿ ತರಾ– ಗಿ– ತೂ–ಗಿ ದ ರು – –

|| ಗಮ | ಪದದ || ಗಾ | ಗಪಮ || ಗರಿ | ರಿಗರಿ || ಸಾ | ಸಾಽ ||
ಆ– ನಂದ ಭೈ ರವಿ– ಯಿಂ –ದ– – –

ಚರಣ ೩ : ದೇವಗಾಂಧಾರ (೨೨)

|| ಸಾ | ಸಾನಿ || ಪಾ | ಪಸನಿ || ಸಾ | ಸಾನಿ || ಪಾ | ಪಪಮ ||
ದೇ ವಾಧಿ ದೇ ವನೆಂ– ದು– – ಈ ಶಿಶುವು

|| ಗಮ | ಪಪಮ || ಮಗ | ಸಾಸ || ಸನಿ | ಗಸಸ || ಸಾ | ಸಾಸ ||
ಭಾ– ವನಾ– ತೀ– ತ– ನೆಂ– ದು– – – –

|| ಸಾ | ಸಮಾ || ಗಮ | ಪಾ೯ || ಪಾ | ನಿನಿದ || ದಪ | ಪಾಮ ||
ದೇ ವಗಂ ಧ– ರ್ವರ್ ಪಾ ಡಿತೂ– ಗಿದ ರು .

ಗ

|| ಗಮ | ಪಪಮ || ಮಾ | ಗಗಸ || ಸನಿ | ಸಾ೯ || ಸಾ | ಸಾ೯ ||
ದೇ– ವಗಾಂ– ಧಾ ರ ದಿಂ– –ದೆ – – –

ಚರಣ ೪ : ಆನಂದಭೈರವಿ

|| ಸಾ | ರಿಗರಿ || ಸಾ | ನಿ | ನೀ || ಸಾ | ಸಾ೯ || ರಿಸ | ಸಾಸ ||
ನೀ ಲಘನ ನೀ ಲಜೋ ಜೋ – – – ಕರು ಣಾಲ

|| ಗಮ | ಪಪಾ || ಪಾ | ನಿಪಮ || ಮಗ | ರಿಗಮ || ಮಾ | ಮಾ೯ ||
ವಾ ಲಶ್ರೀ ಕೃ ಷ್ಣಜೋ ಜೋ – – – –

|| ಗಾ | ಗಾಗ || ಗಮ | ಪಪಗ || ಮಾ | ಪಾಮ || ಗರಿ | ಸಾನಿ ||
ಲೀ ಲಾವ ತಾ– ರಜೋ –ಜೋ – – ಪರ ಮಾತ್ಮ

|| ನೀ | ಸನೀ || ಸಪ | ಮಗರಿ || ರೀ | ಗರಿಸ || ಸಾ | ಸಾ೯ ||
ಬಾ ಲಗೋ ಪಾ– ಲಜೋ ಜೋ – – – – – –

## "ನೀಲಘನಲೀಲ ಜೋಜೋ" ಎಂಬಂತೆ

೫. ಇಂದುಧರಮಿತ್ರ ಜೋಜೋ ಶ್ರೀಕೃಷ್ಣ
ಇಂದುರವಿನೇತ್ರ ಜೋಜೋ
ಇಂದುಕುಲಪುತ್ರ ಜೋಜೋ ಪರಮಾತ್ಮ
ಇಂದಿರಾರಮಣ ಜೋಜೋ

೬. ತುಂಗ ಭವಭಂಗ ಜೋಜೋ ಪರಮಾತ್ಮ
ರಂಗ ಕೃಪಾಂಗ ಜೋಜೋ
ಮಂಗಳಾಪಾಂಗ ಜೋಜೋ ಮೋಹನಾಂಗ
ರಂಗವಿಠಲನೆ ಜೋಜೋ

—ರಾ. ವಿಶ್ವೇಶ್ವರನ್

# ಕನ್ನಡ ಅಧ್ಯಯನ ಸಂಸ್ಥೆ

## ಹರಿದಾಸ ಸಾಹಿತ್ಯ ಮಾಲ

೧-೨ ಶ್ರೀಪಾದರಾಜರ ಕೃತಿಗಳು (ಪಂಡಿತ, ಜನಪ್ರಿಯ ಆವೃತ್ತಿಗಳು)
ಸಂ. ಡಾ ಜಿ ವರದರಾಜರಾವ್

೩ ಶ್ರೀ ಮಹಿಪತಿರಾಯರ ಕೃತಿಗಳು ಸಂ ಡಾ ಜಿ ವರದರಾಜರಾವ್

೪-೫ ಶ್ರೀ ಗೋಪಾಲದಾಸರ ಕೃತಿಗಳು (ಪಂಡಿತ, ಜನಪ್ರಿಯ ಆವೃತ್ತಿಗಳು) ಸಂ ಡಾ ಟಿ ಎನ್ ನಾಗರತ್ನ

೬ ಹರಿದಾಸ ಸಾಹಿತ್ಯ ಸಮೀಕ್ಷೆ ಸಂ ಡಾ ಜಿ ವರದರಾಜರಾವ್

೭-೮ ಶ್ರೀ ವಾದಿರಾಜರ ಕೃತಿಗಳು (ಪಂಡಿತ, ಜನಪ್ರಿಯ ಆವೃತ್ತಿಗಳು)
ಸಂ ಡಾ ಟಿ ಎನ್ ನಾಗರತ್ನ

೯ ಹರಪನಹಳ್ಳಿ ಭೀಮವ್ವನ ಹಾಡುಗಳು
ಸಂ ಡಾ ಟಿ ಎನ್ ನಾಗರತ್ನ

೧೦-೧೧ ಶ್ರೀ ಜಗನ್ನಾಥದಾಸರ ಕೃತಿಗಳು (ಪಂಡಿತ, ಜನಪ್ರಿಯ ಆವೃತ್ತಿಗಳು) ಸಂ ಡಾ ಟಿ ಎನ್ ನಾಗರತ್ನ

೧೨-೧೩ ಶ್ರೀ ಪ್ರಸನ್ನವೆಂಕಟದಾಸರ ಕೃತಿಗಳು (ಪಂಡಿತ, ಜನಪ್ರಿಯ ಆವೃತ್ತಿಗಳು) ಸಂ. ಟಿ ಕೆ ಇಂದುಬಾಯಿ

೧೪ ಶ್ರೀ ಪ್ರಸನ್ನವೆಂಕಟದಾಸರ ಭಾಗವತ ಸಂ ಟಿ ಕೆ ಇಂದುಬಾಯಿ

೧೫-೧೬ ಶ್ರೀ ವಾದಿರಾಜರ ದೀರ್ಘಕೃತಿಗಳು (ಪಂಡಿತ, ಜನಪ್ರಿಯ ಆವೃತ್ತಿಗಳು) ಸಂ ಡಾ ಟಿ ಎನ್. ನಾಗರತ್ನ

೧೭-೧೮ ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು (ಪಂಡಿತ, ಜನಪ್ರಿಯ ಆವೃತ್ತಿಗಳು) ಸಂ ಟಿ ಕೆ ಇಂದುಬಾಯಿ

೧೯ ಶ್ರೀ ರಾಮದಾಸರ ಕೃತಿಗಳು ಸಂ ಡಾ ಟಿ ಎನ್ ನಾಗರತ್ನ

೨೦ ಹರಿದಾಸ ಸಾಹಿತ್ಯ ಸಾರ ಡಾ ಜಿ ವರದರಾಜರಾವ್

ರಕ್ಷಾಪುಟ ಮುದ್ರಣ ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು